# ಶ್ರೀಪುರಂದರದಾಸರ ಸಾಹಿತ್ಯ

೨

# ಆರ್ತಭಾವ



ಸಂಪಾದಕರು :

**ಶ್ರೀ ಬೆಟಗೇರಿ ಕೃಷ್ಣಶರ್ಮಾ**

**ಶ್ರೀ ಬೆಂಗೇರಿ ಹುಚ್ಚರಾಯರು** ಎಂ. ಎ., ಬಿ. ಟಿ.

ಜನವರಿ ೧೯೬೪

ಪ್ರ. ಬ. ೩೦

**ಶ್ರೀಪುರಂದರದಾಸರ**

**೪೦೦ ನೆಯ ವರ್ಷದ ಉತ್ಸವ ಮಂಡಲ**

**ಧಾರವಾಡ**

ಪ್ರಕಾಶಕರು :
ಶ್ರೀ. ಬಾರ್ಲಿ ಬಿಂದುಮಾಧವ
ಗೌರವ ಕಾರ್ಯದರ್ಶಿ, ಅ. ಕ. ಪುರಂದರದಾಸರ
೪೦೦ನೆಯ ವರ್ಷದ ಉತ್ಸವ ಸಮಿತಿ,
ಧಾರವಾಡ
C/o ಮಿಂಚಿನಬಳ್ಳಿ ಕಾರ್ಯಾಲಯ
ಧಾರವಾಡ

೧೯೬೪



(ಪ್ರತಿಗಳು—೨೦೦೦)

ಬೆಲೆ : ರೂ. ೫/-

ಮುದ್ರಕರು :
ಆರ್. ಬಿ. ವೈದ್ಯ
ಸಾಧನ ಮುದ್ರಣಾಲಯ
ಬೆಳಗಾವ ರೋಡ
ಧಾರವಾಡ



ಧಾರವಾಡ ಕಲಾವಿದರಾದ ಶ್ರೀ ಯಶವಂತ ಶೆಟ್ಟಿಯವರು ಶಿಲೆಯಲ್ಲಿ ಕೆತ್ತಿದ
ಶ್ರೀ ಪುರಂದರದಾಸರ ಪ್ರತಿಮೆ.

# PREFACE

## Shri Purandaradāsa

## and

## the Central Teachings of Haridāsa literature

*by*

Prof. K. T. PANDURANGI M. A.

VIDWAN, SIROMANI



The learned writer of the Preface to the first volume has given us a historical and critical exposition of Bhāgavatadharma and has pointed out the special contributions of Sri Madhvāchārya for the enrichment of Bhāgavatadharma.

The Haridāsa literature is essentially a literature of Bhāgavatadharma embodying the tenets and theology of Dvaita Vedānta propounded by Sri Madhvāchārya. However its appeal is universal because of its ethical and devotional content, and its penetrating criticism of human nature and life. The theistic and mystic touches of these songs have raised these to the stature of

spiritual literature while the music of these has made them the charming expressions of devotional sentiments.

A study of the central teachings of Haridāsa literature, naturally, has to take into account all these aspects.

The central teaching of Bhāgavatadharma has been the realisation of the supreme nature of God.

ಜ್ಞಾನಂ ಪರಂ ಮನ್ಮಹಿಮಾವಭಾಸಂ ।
ಯತ್ಸೂರಯೋ ಭಾಗವತಂ ವದಂತಿ ॥

( 3-4-13 )

This is emodied in the whole range of Haridāsa literature, prticularly in the songs of Sri Purandaradāsa

೧ ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ ।
ಹರಿಸರ್ವ ವಿಶ್ವಮಯಂ ಜಗತು ।

೨ ಎಲೆ ಮನ ನೀ ತಿಳಿ ಹರಿಸರ್ವೋತ್ತಮನೆಂದು ।
ಸುಲಲಿತಾತ್ಮನ ಭಜಿಸಿ ಸುಖಿಯಾಗೋ ಮನವೆ ॥
ಇಕ್ಷುದಂಡಗಳಿರಲು ಇಂಧನವ ಮೆಲಲೇಕೆ ।
ಅಕ್ಷಯ ಪಾತ್ರೆಯಿರಲು ಹಸಿವೆಯೆನಲೇಕೆ ॥
ನಿಕ್ಷೇಪ ನಿಧಿಯಿರಲು ನಿರುತ ದಾರಿದ್ರ್ಯವೇಕೆ ।
ಪಕ್ಷಿವಾಹನನಿರಲು ಪರದೈವವೇಕೆ ॥

೩ ಘನಮಹಿಮ ನಾರಾಯಣನ ಅಚಿಂತ್ಯಾದ್ಭುತ ಶಕ್ತಿ
ಅನುಭವಕೆ ತಂದುಕೊಂಡು ಸುಖಿಸುವುದು ॥

೪ ಓಂ ನಮೋ ಶ್ರೀಹರಿ ಎಂಬ ಪೂರ್ಣಜ್ಞಾನ- ।
ವನ್ನು ಪುರಂದರ ವಿಟ್ಠಲ ಎನ್ನಪ್ಪನೆ ॥

೫ ಒಡೆಯ ಹರಿಸರ್ವೋತ್ತಮನೆಂಬ ।
ದೃಢಜ್ಞಾನಿಗಳೆ ವೈಷ್ಣವರಲ್ಲದೆ !

These and numerous similar couplets give us ಹರಿಸರ್ವೋತ್ತಮತ್ವ as the central theme of Haridāsa literature.

The theme of ವಿಷ್ಣುಸರ್ವೋತ್ತಮತ್ವ is as old as Ṛgveda,

1 ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಮ್ (R V.I 154)

2 ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೆ (R.V.I. 156)

3 ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ (R V.I. 154)

4 ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಃ
(Ait. Br.I. 1)

5 ತನ್ಮಾದ್ ಆಹುಃ ವಿಷ್ಣುಃ ದೇವಾನಾಮ್ ಶ್ರೇಷ್ಠಃ
(Satapatha XIV. 1)

6 ತದ್ ವಿಷ್ಣೋಃ ಪರಮಂ ಪದಮ್ (Katha Up )

7 ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ।
(ಹರಿವಂಶ)

This traditional glory of ವಿಷ್ಣು as supreme lord is sung by the Haridāsas with the back-ground of the stories and legends drawn from the Vedic and Puranic literature. Their fervent prayer to lord Visnu as

Supreme God is no doubt important for Vaisṇava religion but what is of unirsal imporatance is their concept of a perfect supreme God which is broght out in these songs.

೧ ವಿಶ್ವತೋಮುಖ ನೀನೆ ವಿಶ್ವತಶ್ಚಕ್ಷು ನೀನೆ ।
ವಿಶ್ವತೋಬಾಹು ವಿಶ್ವಪಾದನು ನೀನೆ ॥
ವಿಶ್ವವುದರ ನೀನೆ ವಿಶ್ವವ್ಯಾಪಕ ನೀನೆ ।
ವಿಶ್ವನಾಟಕ ಸೂತ್ರಧಾರಿಯೆ ವಿಷ್ಣುವೆ ॥

೨ ನಿತ್ಯಾನಂದ ನಿರ್ದೋಷ ಗುಣಪೂರ್ಣ ।

೩ ಅಷ್ಟೈಶ್ವರ್ಯದ ಲಕ್ಷ್ಮಿಯ ಅರಸನೇ ।
ಸೃಷ್ಟಿಸ್ಥಿತಿಲಯಾದ್ಯಷ್ಟಕರ್ತ ॥

೪ ಅಷ್ಟೂ ತತ್ತ್ವೇಶ್ವರ ಸ್ವಾಮಿ ನೀನಲ್ಲದೆ ಬೇರೆ ಇಲ್ಲ ।

೫ ನಿತ್ಯಗುಣಾರ್ಣವ ನಿಜಗುಣಪರಿಪೂರ್ಣ ।
ಸಚ್ಚಿದಾನಂದ ಸನಕಾದಿವಂದ್ಯ ॥

೬ ಅಣುಮಹತ್ತುಗಳಲ್ಲಿ ಪರಿಪೂರ್ಣನೆಂದೆನಿಸಿ ।
ಗಣನೆಯಿಲ್ಲದ ಮಹಾಮಹಿಮನೆನಿಪ ॥

೭ ಸಚ್ಚಿದಾನಂದ ಸರ್ವಗುಣಪೂರ್ಣಂಗೆ ।
ಅತ್ಯಂತ ಸುಜ್ಞಾನಗಬ್ಬಾಕ್ಷಗೆ ॥
ನಿತ್ಯಕಲ್ಯಾಣ ನಿರ್ದೋಷಂಗೆ ।

೮ ಒಂದೊಂದು ರೂಪದಿ ಒಂದೊಂದು ಭಕುತಿಗೆ ।
ಒಂದೊಂದು ಕಾಲದಿ ತೋರುತಲಿ ।

೯ ಸಾಸಿರನಾಮದ ಶತಕೋಟಿತೇಜದ ।
ಸೂಸುವ ಸುಖಮಯಜ್ಞಾನದ ಕೂಸು ॥
ಜ್ಞಾನಸಮುದ್ರದೊಳಾಡುವ ಕೂಸು ।

ಜ್ಞಾನಿ ಹೃದಯದಿ ಹೊಳೆಯುವುದು ಕೂಸು
ದೀನದಾಸರಿಗೆ ಕಾಣುವ ಕೂಸು ।
ತಾನೇ ಬಲ್ಲದು ತನ್ನ ಮಹಿಮೆಯ ಕೂಸು ॥ ೧ ॥

ಲೋಕತ್ರಯವೆಲ್ಲ ನೋಡುವ ಕೂಸು ।
ಬೇಕಾದ ಭಕ್ತರೊಳಾಡುವ ಕೂಸು ॥
ಆಕಾರವಿದ್ದು ನಿರಾಕಾರ ಕೂಸು ।
ಸಾಕಾರದೃಷ್ಟಿಗೆ ಸಿಲುಕದ ಕೂಸು ॥ ೨ ॥

೧೦ ಅಕೋ ಹಾಗಿಹನೆ । ಇಕೋ ಹೀಗಿಹನೆ ।
ಪರಬ್ರಹ್ಮ ಹೇಗಿಹನೆಂದರೆ ॥ ಪ ॥

ಕಾಲಿಲ್ಲದೆ ನಡೆಸುವ । ಕೈಯಿಲ್ಲದೆ ಹಿಡಿಸುವ
ಹಲ್ಲಿಲ್ಲದೆ ತಿನಿಸುವ । ಹೊಟ್ಟೆಲ್ಲದೆ ಉಣಿಸುವ ॥ ೧ ॥
ಕಣ್ಣಿಲ್ಲದೆ ಕಾಣಿಸುವ । ಕಿವಿಯಿಲ್ಲದೆ ಕೇಳಿಸುವ ।
ಒಳಹೊರಗೆ ನುಡಿಸುವ । ಕಾಣಿಸಿಕೊಳ್ಳನು ॥ ೨ ॥
ಶ್ವೇತದೀಪದಲಿ ನಿಂತಾ । ನಂತಾಸನದಿ ಮಲಗಿದ ।
ವೈಕುಂಠದಲಿ ವಾಸ ಶ್ರೀಪುರಂದರವಿಠಲ ॥೩॥

These descriptions of the supreme lord will leave no doubt in our minds that they have drawn their material from the Vedic hymns and Upanisads, and are giving us the same concept of Supreme God that was revealed to the Upanisadic seers. We may notice a few sources in this connection.

೧ ವಿಶ್ವತಶ್ಚಕ್ಷುರುತ ವಿಶ್ವತೋ ಬಾಹುಃ ವಿಶ್ವತಸ್ಪಾತ್

೨ ಪೂರ್ಣಮದಃ ಪೂರ್ಣಮಿದಮ್

೩ ಅಣೋರಣೀಯಾನ್ ಮಹತೋ ಮಹೀಯಾನ್

೪ ಸತ್ಯಂ ಜ್ಞಾನಮನಂತಂ ಬ್ರಹ್ಮ

೫ ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ

The two aspects i.e. ಗುಣಪೂರ್ಣತ್ವ and ದೋಷವರ್ಜಿತತ್ವ are repeatedly stressed while the glory of ಸೃಷ್ಟ್ಯಾದ್ಯಷ್ಟ-ಕರ್ತೃತ್ವ etc are graphically presented. We shall notice the special signifieance of the expression like ನಿರ್ಗುಣ, ನಿರಾಕಾರ etc. used in these songs later

For the realisation of the Supreme nature of God the twin doctrines of ಭಕ್ತಿ and ವಿರಕ್ತಿ are advocated in Bhāgavatadharma. 'ಜ್ಞಾನ-ಭಕುತಿ-ವೈರಾಗ್ಯಭಾಗ್ಯವನ್ನು ನೀನೆ ಪಡೆಯೋ ನಮ್ಮ ಪುರಂದರ ವಿಠಲನಿಂದ' has been the appeal of Haridāsa literature also·

The word ಭಕ್ತಿ is found in Svetasvatara Upanisat. However, the concept of ಭಕ್ತಿ itself is much older. Love of God is passionately advocated in ಬೃಹದಾರಣ್ಯಕ 5. 2 and 4 5.

೧ ತದೇತತ್ ಪ್ರೇಯಃ ಪುತ್ರಾತ್ ಪ್ರೇಯೋ ವಿತ್ತಾತ್ ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದಂತರತರಂ ಯದಯಮಾತ್ಮಾ.

೨ ಸಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ। ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ। .... ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ। ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ। ಬೃ.4–5

This love of God, as is clear from the last line of the ಬೃಹದಾರಣ್ಯಕ passage qouted above (ಆತ್ಮಾ ವಾ ಅರೇ ದ್ರಷ್ಟವ್ಯಃ etc., is not a mere sentimentalism or emotional outburst. It is love with an awareness of the Supreme nature of God.

ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ತಯಾ ಮುಕ್ತಿರ್ನಚಾನ್ಯಥಾ ॥

(ಭಾ. ತಾ. ನಿ. I. 86)

ಪರಮೇಶ್ವರ ಭಕ್ತಿರ್ನಾಮ ನಿರವಧಿಕಾನಂತಾನವದ್ಯಕಲ್ಯಾಣಗುಣತ್ವ ಜ್ಞಾನಪೂರ್ವಕಃ ಸ್ವಾತ್ಮಾತ್ಮೀಯ ಸಮಸ್ತವಸ್ತುಭ್ಯೋಽನಂತಗುಣಾಧಿಕೋಽ ಽಂತರಾಯ ಸಹಸ್ರೇಣಾಪ್ಯ ಪ್ರತಿಬದ್ಧಃ ನಿರಂತರ ಪ್ರೇಮಪ್ರವಾಹಃ (ನ್ಯಾ.ಸು.)

Bhakti is defined here as intense and continuous love of God with an awareness of his infinite and auspicious attributes, which is infinitely more than the love we have for our self, body, relatives and all other belongings.

೧ ನಿನ್ನನೆ ಪಾಡುವೆ ನಿನ್ನನೆ ಪೊಗಳುವೆ ।
ನಿನ್ನನೆ ಬೇಡಿ ಬೇಸರಿಸುವೆ ರಂಗಯ್ಯ ।
ನಿನ್ನ ಕಾಲ ಪಿಡಿವೆ ನಿನ್ನ ಹಾರಯಿಸುವೆ ।
ನಿನ್ನ ತಂಬುಲಕೆ ಕೈಯಾನುವೆ ರಂಗಯ್ಯ ।
ನಿನ್ನಂತೆ ಸಾಕಬಲ್ಲ ಸ್ವಾಮಿ ಉಂಟೆ ದೇವ ।
ನಿನ್ನಾಣೆ ಪುರಂದರ ವಿಠಲರಾಯ ॥

೨ ಮನ ಮೊದಲಾದ ಸರ್ವ ಇಂದ್ರಿಯಗಳ ಆ-
ವನ ಪಾದದಲ್ಲಿ ಇಟ್ಟು ಕೀರ್ತನೆ ಗೈಯೋ ।
ನಿನಗಿದೆ ಮುಖ್ಯಗತಿಸಾಧನವೆಂದು ಸಾರಿದೆ ।

೩ ಹಾಡಿದರೆ ಎನ್ನೊಡೆಯನ ಹಾಡುವೆ ।
ಬೇಡಿದರೆ ಎನ್ನೊಡೆಯನ ಬೇಡುವೆ ।
ಒಡೆಯಗೆ ಒಡಲನು ತೋರುತ ಎನ್ನಯ ।
ಬಡತನ ಬಿನ್ನಹ ಮಾಡುವೆ ।
ಒಡೆಯ ಪುರಂದರ ವಿಠಲರಾಯನ ।
ಅಡಿಗಳನು ಸಾರಿ ಬದುಕುವೆ ಸಾರಿ ಬದುಕುವೆ ॥

೪ ತನುವೆಂಬ ತಟ್ಟೆಯಲಿ ಮನದ ಸೊಡರನು ಇರಿಸಿ ॥
ಘನಶಾಂತಿಯೆಂಬ ಆಜ್ಯವನು ತುಂಬಿ ॥
ಆನಂದವೆಂತೆಂಬ ಜ್ಯೋತಿಯನು ಹಚ್ಚಿಟ್ಟು ।
ಚಿನುಮಯ ಹರಿಗೆ ಆರತಿಯೆತ್ತಿರೆ ॥

೫ ಏಕೋಭಾವ ಏಕೋಭಕ್ತಿ ಏಕನಿಷ್ಠೆಯಿಂದಲಿ ।
ಬೇಕಾದಂಥ ಮುಕುತಿಯ ನೀಡುವ ಪುರಂದರ ವಿಠಲನ ॥

In these words the Haridāsas proclaim their deep attachment to God, This depth of their attachment is because of the comprehension of the Supreme nature of God. ಮೂಢಬಲ್ಲನೆ ಜ್ಞಾನ– ದೃಢಭಕುತಿಯ, they ask. The very concept of Bhakti is such that it contains an element of Jnāna in it.

ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿಜ್ಞಾನಮಿತೀರ್ಯತೇ ।
ಜ್ಞಾನಸ್ಯೈವ ವಿಶೇಷೋ ಯದ್ಭಕ್ತಿರಿತ್ಯಭಿಧೀಯತೇ ॥

(ಅನು ವ್ಯಾ, III 4)

ಜ್ಞಾನ and ಭಕ್ತಿ are the two aspects of the path way to God-realisation. These two are not mutually exclusive. Jnāna is a co-relative of Bhakti while Bhakti is a form of Jnāna. There can be no devotion without a firm and adequate knowledge of the object of devotion, nor any pursuit of knowledge without the urge of love.

ವಿನಾ ಜ್ಞಾನಂ ಕುತೋ ಭಕ್ತಿಃ ಕುತೋ ಭಕ್ತಿಂ ವಿನಾ ಚ ತತ್ ।

(ಗೀ. ಭಾ. IX 31)

This close relation of Bhakti and Jnāna becomes more clear if we understand the stages in Bhakti viz ಭಕ್ತಿ, ಪಕ್ವಭಕ್ತಿ and ಪರಿಪಕ್ವಭಕ್ತಿ.

ಭಕ್ತ್ಯಾ ಜ್ಞಾನಂ ತತೋ ಭಕ್ತಿಃ ತತೋ ದೃಷ್ಟಿಸ್ತತಶ್ಚ ನಾ ।
ತತೊ ಮುಕ್ತಿಸ್ತತೊ ಭಕ್ತಿಃ ಸೈವ ಸ್ಯಾತ್ ಸುಖರೂಪಿಣೀ ॥

(ಅನು ವ್ಯಾ.)

The last stage of Bhakti is a stage of devotion when the devotee is released from samsāra. This interpenetrative nature of Bhakti and Jnāna has a metaphysical basis. The Supreme Lord and the souls are in the relation of ಬಿಂಬ and ಪ್ರತಿಬಿಂಬ. The souls as ಪ್ರತಿಬಿಂಬ are entirely dependent upon ಬಿಂಬ the Supreme Lord in respect of ಸ್ವರೂಪ, ಪ್ರಮಿತಿ and ಪ್ರವೃತ್ತಿ and are ಬಿಂಬಸದೃಶ.

ಛಾಯಾ ಯಥಾ ಪುಂಸದೃಶೀ ಪುಮಧೀನಾ ಚ ದೃಶ್ಯತೇ ।
ಏವಮೇವಾತ್ಮಕಾಃ ಸರ್ವೆ ಬ್ರಹ್ಮಾದ್ಯಾಃ ಪರಮಾತ್ಮನಃ ॥

(ಅನು. ವ್ಯಾ.)

Just as a shadow resembles its original and is dependent upon it for its existence, the souls have an affinity with the supreme lord and are dependent upon him in their essential characteristics of reality, consciousness and bliss. This intrinisic spiritual relation of God and souls is obscured during the state of samsāra. ಜ್ಞಾನ the comprehension of the supreme nature of God enables the soul to discover its dependence upon him and ಭಕ್ತಿ the intense love reveals the affinity or ಸಾದೃಶ್ಯ with him. (ಭಕ್ತಿಂ ವಿನಾ ನ ತತ್ಸಾದೃಶ್ಯಂ ಸಮ್ಯಗಭಿವ್ಯಜ್ಯತೆ ಬ್ರ. ಸೂ. ಭಾ. 3-2-19). Thus the ಪ್ರತಿಬಿಂಬತ್ವ nature of the soul consisting of its dependence upon and affinity to God is discovered by Bhakti and Jnāna, the two inter-penetrating pathways of God-realisation. Then comes the grace of God. Just as Bhakti is an attachment of Pratibimba, the soul towards God, grace or ಪ್ರಸಾದ is an appreciation of God the Bimba of such an attachment. Ultimately it is the grace of God which releases the soul from samsāra (ತತೋ ಹಿ ಅಸ್ಯ ಬಂಧವಿಪರ್ಯಯೌ ಬ್ರ. ಸೂ. 3-2-5). The Haridāsas have fully realised this importance of God's grace and crave for it in their songs. This craving for God's grace is known as ಆರ್ತಭಾವ in the devotional literature

೧ ಏನ ಮಾಡಿದರೆನ್ನ ಭವ ಹಿಂಗದು ।
ದಾನವಾಂತಕ ನಿನ್ನ ದಯವಾಗದನಕ ॥

೨ ಯಾರು ಬಿಟ್ಟರು ಕೈಯ ನೀ ಬಿಡದಿರು ಕಂಡ್ಯ ।
॥ ನಾರಾಯಣ ॥

ಸ್ವಾಮಿ— ನೀ ಬಿಟ್ಟರೆ ಮುಂದಿನ್ನಾರ ಕಾಯ್ವರ ಕಾಣೆ ।
॥ ನಾರಾಯಣ ॥

೩ ಆಡುವ ಶಿಶು ತಪ್ಪು ಮಾಡಲು ಜನನಿ–ಕೊಂ ।
ಡಾಡುವಳಲ್ಲದೆ ದೂಡುವಳೆ ॥

೪ ಸತಿ ಸುತರು–ಪಿತೃಬಾಂಧವರು ।
ಪಥವ ತೋರಿಸಬಲ್ಲರೆ ಇವರು ॥
ಗತಿ ನೀನೆ ಪುರಂದರ ವಿಠಲ
ಹಿತವ ತಾಯಿ ತಂದೆ ನೀನು ॥

೫ ಹರಿ ನಿನ್ನೊಲುಮೆಯು ಆಗುವ ತನಕ ।
ಅರಿತು ಸುಮ್ಮನಿರುವುದೆ ಲೇಸು ॥

೬ ಆರು ಬಿಟ್ಟರು ನಿನ್ನ ಬಿಡದೆ ನಾ ನಂಬಿದೆ ರಾಮರಾಮ
—ಸ್ವಾಮಿ

ನೀ ಬಿಟ್ಟರಿನ್ನು ಆದಾರ ಸೇರಲು ಬೇಕೋ–ರಾಮರಾಮ

೭ ಎನಗೂ ಆಣೆ— ನಿನಗೂ ಆಣೆ ।
ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ॥
ನಿನ್ನನು ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ— ರಂಗ ।
ಎನ್ನನು ನೀ ಕೈಬಿಟ್ಟು ಪೋದರೆ ನಿನಗೇ ಆಣೆ ॥

The entire Haridāsa literatuae is a moving illustration of the Upanisadic truth 'ಯಮೇವೈಷ ವೃಣುತೆ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ( ಕಠ ).

This exalted concept of Bhakti leading to ಭಗವತ್-ಪ್ರಸಾದ makes the Haridāsa literature free from the erotic representations of Bhakti as in the Bhakti literature of North India. This has also ruled out the so called representations of Bhakti on the basis ಕಾಮ. ಕ್ರೋಧ, ಭಯ, ದ್ವೇಷ etc. No emotion that is contrary to the realisation of the supreme nature of God can contaminate Bhakti here. No thought that will detract the greatness of God is allowed to enter into the mind of a Bhakta.

ಜೀವಾಭೇದೋ ನಿರ್ಗುಣತ್ವಮಪೂರ್ಣಗುಣತಾ ತಥಾ ।
ಸಾಮ್ಯಾಧಿಕ್ಯೇ ತದನ್ಯೇಷಾಂ ಭೇದಸ್ತದ್ಗತ ಏವ ಚ ॥
ಪ್ರಾದುರ್ಭಾವವಿಪರ್ಯಾಸಃ ತದ್ಭಕ್ತದ್ವೇಷ ಏವ ಚ ।
ತತ್ಪ್ರಮಾಣಸ್ಯ ನಿಂದಾ ಚ ದ್ವೇಷಾ ಏತೇಽಖಿಲಾ ಮತಾಃ ।
ಏತೈರ್ವಿಹೀನಾ ಯಾ ಭಕ್ತಿಃ ಸಾ ಭಕ್ತಿರಿತಿ ನಿಶ್ಚಿತಾ ।

(ಭಾ. ತಾ. ನಿ. I. 113–115)

The thoughts such as the identity between the soul and God, the concept of God without attributes or with only a few attributes, equality with God or there being something higher than God, the thought of distinction among the various forms and incarnations of God, dislike for his devotees, and the light talk about scripture are repugnant to the healthy growth of Bhakti and should be avoided.

Of the twin doctrines of Bhakti and Virakti of Bhagavatadharma, one is apt to think that Bhakti is

positive while Viraktie is negative. However, this is not the full and correct understanding of the concept of Virakti in Bhāgavatadharma. Mere withdrawing of sense from worldly objects does not constitute Virakti. ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ । ರಸವರ್ಜ್ಯಂ (ಭ. ಗೀ. 2. 59). By the non-enjoyment of objects merely, the objects are kept away but the interest will continue. An aspiration not only to rise above the senses but to utilse them for a higher and nobler purpose should be the basis of Virakti. ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ (ಭ. ಗೀ. 2-59) The interest in worldly object should be remodelled by developing Interest in God. All our interest in worldly things should be viewed as arising out of our interest in God.

ಪ್ರಾಣಬುದ್ಧಿಮನಃ ಸ್ವಾತ್ಮದೇಹಾಪತ್ಯಧನಾದಯಃ ।
ಯತ್ಸಂಪರ್ಕಾತ್ ಪ್ರಿಯಾಃ ಆಸನ್ ತತಃ ಕೋನ್ವಪರಃ ಪ್ರಿಯಃ ।
(ಅನು. ವ್ಯಾ.)

Our life, body, relatives and all other belongings are dear to us because these belong to God who is dearest to us. This synthetic concept of Virakti is very well brought out in a number of songs.

೧ ಸಕಲವೆಲ್ಲವು ಹರಿಸೇವೆಯೆನ್ನಿ ।
ರುಕುಮಿಣೀಪತಿಯಲ್ಲದನ್ಯವಿಲ್ಲವೆನ್ನಿ ॥
ನುಡಿವುದೆಲ್ಲವು ನಾರಾಯಣನ ಕೀರ್ತನೆಯೆನ್ನಿ ।
ನಡೆವುದೆಲ್ಲವು ದೇವರ ಯಾತ್ರೆಯೆನ್ನಿ ॥

೨ ಮನವೆಂಬ ಮಂಟಪವ ನಿನಗೆ ಹಾಕಿ ಎನ್ನ ।
ತನುವನೊಪ್ಪಿಸಿ ಕೈ ಮುಗಿಯುವೆನಯ್ಯ ॥

This attitude will change the very significance of life. The conventional sense of Virakti i.e. dis-regard for life no longer holds good ಮಾನವಜನ್ಮ ದೊಡ್ಡದು । ಇದ । ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ॥ ಈಸಬೇಕು । ಇದ್ದು ಜಯಿಸಬೇಕು॥ will be the attitude now. The spirit of ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ is very well adocated in all these songs. No doubt the Haridāsas also sing the miseries of life profusely. ' ಕಾಳ ಬೆಳುದಿಂಗಳು–ಈ ಸಂಸಾರ–ಕತ್ತಲೆ ಬೆಳುದಿಂಗಳು ' they declare.

ಅನುಗಾಲವು ಚಿಂತೆ ಮನುಜಗೆ ।
ಮನಹೋಗಿ ಮಾಧವನ ಒಡಗೂಡುವ ತನಕ ॥
ಹೆಂಡಿರಿದ್ದರು ಚಿಂತೆ ಹೆಂಡಿರಿಲ್ಲದ ಚಿಂತೆ ।
ಬಡವನಾದರು ಚಿಂತೆ ಬಲ್ಲಿದನಾದರು ಚಿಂತೆ ।
ಮನೆಯಿದ್ದರೂ ಚಿಂತೆ ಮನೆಯಿಲ್ಲದ ಚಿಂತೆ ॥

This listing of worries is only to hasten to add that ಮನಸಿಜನಯ್ಯ ಶ್ರೀಪುರಂದರ ವಿಠಲನ । ನೆನೆವರೆ ಚಿಂತೆಯೇ ಇಲ್ಲ ಕಾಣಣ್ಣಾ ॥ They sing with a richness of experience both the comfortable and miserable sides of life only to show that one can transcend both these by developing a spirit of dedication to God of one's entire being and activity. Thus, Virakti is not merely rising above the senses but utilising of them for higher and nobler purpose i.e. service of God.

This diversion of our senses from the sensuous obejects to God takes us to the question of moral improvement. Moral improvement is a necessary preliminary and and incentive for spiritual attainments. The Upanisaḍs have stressed this repeatedly

೧ ಸತ್ಯಧರ್ಮಾಯ ದೃಷ್ಟಯೇ ( ಈಶ )

೨ ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ ( ಕೇನ )

೩ ನಾವಿರತೋ ದುಶ್ಚರಿತಾತ್ ನಾಶಂತೋ ನಾಸಮಾಹಿತಃ
ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ (ಕಠ)

೪ ಋತಂ ಚ ಸ್ವಾಧ್ಯಾಯ ಪ್ರವಚನೇ ಚ etc. (ತೈತ್ತರೀಯ)

೫ ಅಥ ಯತ್ತಪೋ ದಾನಮಾರ್ಜವಮಹಿಂಸಾ ಸತ್ಯವಚನಮಿತಿ
ತಾ ಅಸ್ಯ ದಕ್ಷಿಣಾಃ

The Haridāsa literature gives great importance to the moral improvement of man. They particularly call into question those who for all appearance adopt a religious way of life but are only content with the ritualistic side of it and totally neglect the moral aspect.

೧ ಕ್ಲೇಶ ಒಡಲೊಳಗಿರಲು ತೀರ್ಥಯಾತ್ರೆಗಳೇಕೆ ।
ಆಸೆ ಬಿಡದಿದ್ದವಗೆ ಸಂನ್ಯಾಸವೇಕೆ ॥
ಮತಿಶುದ್ಧಿಯಿಲ್ಲದ ಮಂತ್ರತಂತ್ರಗಳೇಕೆ ।
ಗತಿಯ ಚಿಂತಿಸದವನ ವಿಪ್ರತ್ವವೇಕೆ ॥

೨ ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜವ ಬಿತ್ತಿ ।
ಜೇನು ಮಳೆಗರೆದರೆ ವಿಷ ಹೋಗುವುದೇನಯ್ಯ ।
ಏನ ನೋಡಿದರೇನು ಏನ ಕೇಳಿದರೇನು ।
ಮನದೊಳಗಿನ ತಾಮಸ ಮಾಣದನ್ನಕ ॥

೩ ಭೂತದಯಾಪರನಾಗಿರಬೇಕು ।
ಪಾತಕವೆಲ್ಲವ ಕಳೆಯಲು ಬೇಕು ।
ಆರು ವರ್ಗವನಳಿಯಲು ಬೇಕು ।
ಮೂರು ಗುಣಂಗಳ ಮೀರಲು ಬೇಕು.
ಅಷ್ಟಮದಂಗಳ ತುಳಿಯಲು ಬೇಕು
ದುಷ್ಟರ ಸಂಗವ ಬಿಡಲು ಬೇಕು
ಶಾಂತಿ ಕ್ಷಮೆ ದಮೆ ಹಿಡಿಯಲು ಬೇಕು.
ಭ್ರಾಂತಿ ಕ್ರೋಧವ ಕಳೆಯಲು ಬೇಕು

Some times, they pass a piercing remark on the empty pride of caste to point out that it is not merely the birth in a caste that makes a man noble or ignoble but his moral and spirtiual efforts that give him a stature.

೧ ಹೊಲೆಯ ಹೊರಗಿಹನೆ ಊರೊಳಗಿಲ್ಲವೆ ।
ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ ।
ಉಂಡಮನೆಗೆರಡನ್ನು ಬಗೆವಾತನೇ ಹೊಲೆಯ ।
ಇದ್ದಾಗ ದಾನಧರ್ಮವ ಮಾಡದವ ಹೊಲೆಯ ।
ಅರಿತು ಆಚಾರವನು ನಡೆಸದಾತನೆ ಹೊಲೆಯ ।
ಪರಸತಿಗೆ ಅಳುಪಿದವ ಪಾಪಿ ಹೊಲೆಯ ।

೨ ಹೊಲತಿ ಹೊಲೆಯ ಇವರವರಲ್ಲ ।
ಹೊಲಗೇರಿಲಿ ಹೊಲೆಯ ಹೊಲತಿಲ್ಲ ।
ಬಡತನ ಬಂದರೆ ಅಡಿಗಡಿಗೊಮ್ಮೆ ಹೊಡೆದಾಡಿ ।
ಪತಿಯ ಬೈವಳೆ ಹೊಲತಿ ।
ದುರ್ಬಲ ಜನರನು ಕಂಡು ಮರುಗದೆ । ನಿರ್ಭೀತಿಲಿ
ಇರುವವ ಹೊಲೆಯ

೪  ಬ್ರಾಹ್ಮಣನೆಂದರೆ ಬ್ರಹ್ಮನ ತಿಳಿದವನೀಗ ಬ್ರಾಹ್ಮಣನೋ ।

Thus with the equipment of ಜ್ಞಾನ, ಭಕ್ತಿ, ವೈರಾಗ್ಯ, and ಸದಾಚಾರ Haridāsas advocate the realisation of the supreme nature of God as goal and an active, disciplined and ennobling life in dedication to God as means. For the realisation of both their goal and means they appeal for the grace of God.

Their teachings are not mererly intellectual or poetic. Some of the songs indicate the great moments of mystic experience in their life.

೧  ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದಂತಿದೆ ।

೨  ಕಣ್ಣಿನೊಳಗೆ ನೋಡೋ ಹರಿಯು ಒಳ ।
ಗಣ್ಣಿನೊಳಗಿಂದ ನೋಡೋ ಮುಜ್ಜಗದೊಡೆಯನ ॥
ಆಧಾರ ಮೊದಲಾದ ಆರು ಚಕ್ರ ।
ಶೋಧಿಸಿ ಬಿಡಬೇಕು ಈಕ್ಷಣ ಮೂರು ।
ಸಾಧಿಸಿ ಸುಷುಮ್ನಾ ಏರು ಅಲ್ಲಿ ।
ಭೇಧಿಸಿ ನೀ ಪರಬ್ರಹ್ಮನ ಸೇರು ॥
ಎವೆ ಹಾಕದೆ ಮೇಲೆ ನೋಡಿ ಬೇಗ ।
ಪವನನಿಂದಲಿ ವಾಯುಬಂಧನ ಮಾಡಿ ।
ಸವಿದು ನಾದವ ಪಾನ ಮಾಡಿ ಅಲ್ಲಿ ।
ನವವಿಧ ಭಕ್ತಿಲಿ ನಲಿನಲಿದಾಡಿ ।
ಅಂಡಜದೊಳಾಡುತಾನೆ ಭಾನು ।
ಮಂಡಲನಾರಾಯಣನೆಂಬೊವನೆ ।
ಕುಂಡಲಿ ತುದಿಯೊಳಿದ್ದಾನೆ ಶ್ರೀಪು ।
ರಂದರ ವಿಟ್ಠಲ ಪಾಲಿಸುತಾನೆ ।

೩ ವೈಕುಂಠವುರದಲ್ಲಿ ಯೋಗಿ ಹೃದಯದಲ್ಲಿ
ವೈಕುಂಠಪ್ರಿಯ ಪುರಂದರವಿಠಲ ನೀನಿಪ್ಪೆ
ಕಾಣೋ ಸೂರ್ಯನಲ್ಲಿ

೪ ಅಂತರಗದಲ್ಲಿ ಹರಿಯ ಕಾಣದವ ಹುಟ್ಟುಕುರುಡನೋ

೫ ಒಂದೇ ಗೂಡಿನೊಳು ಒಂದು ಕ್ಷಣವಗಲದೆ
ಎಂದೆಂದು ನಿನ್ನ ಪಾದ ಪೊಂದಿರುವೆ

The heart, the eye and sun (not in the modern physiological classification but in their yogic locations) have been mentioned as the centres of mystic experience in the mystic literature.

೧. ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್
೨. ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೆ
೩. ಯೋ ವೇದ ನಿಹಿತಂ ಗುಹಾಯಾಮ್

These and similar other Upanisadic passages give the clue for these statements.

The Mystic absorption is beautifully summed up in the Bhāgavata.

ವಾಗ್ ಗದ್ಗದಾ ದ್ರವತೇ ಯಸ್ಯ ಚಿತ್ತಮ್ ।
ರುದತ್ಯಭೀಕ್ಷಣಂ ಹಸತಿ ಕ್ವಚಿತ್ ಚ ।
ವಿಲಜ್ಜ ಉದ್ಗಾಯತಿ ನೃತ್ಯತೇ ಚ ।
ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥

Such absorptions are revealed in the songs ಹುಟ್ಟು

ಹಿಡಿಯಿತು ಎನಗೆ ಹುಚ್ಚು ಹಿಡಿಯಿತು, and ಹರಿನಾಮಕ್ಕೆ ಹರಿದಾಸರು. ಕರಗುವರಲ್ಲದೆ ।...ಚಂದ್ರಕಿರಣಕೆ ಚಂದ್ರಕಾಂತಶಿಲೆ ಒಸರುವುದಲ್ಲವೆ ।

In understanding the implications of the mystic experiences embodied in these songs, sometimcs, the doctrinair questions of the nature of God, whether God is ಸಗುಣ or ನಿರ್ಗುಣ, and ನಾಕಾರ or ನಿರಾಕಾರ are introduced. Great philosophers have been at variance in this respect and perhaps such differences will continue in the speculative field But what is important here is that mere use of one or other term is not sfficient ground to classify Haridāsa either as ನಗುಣವಾದಿನ್ or ನಿರ್ಗುಣವಾದಿನ್ and ನಾಕಾರವಾದಿನ್ or ನಿರಾಕಾರವಾದಿನ್. By finding the use of both the terms in different songs of the same Haridāsas to draw a scheme of spiritual development in him first as ಸಗುಣ ವಾದಿನ್ and at a later stage as ನಿರ್ಗುಣವಾದಿನ್ is still worse. The terms ಸಗುಣ. ನಿರ್ಗುಣ, ಸಾಕಾರ, ನಿರಾಕಾರ etc. are time-honoured words used in philosophical discussions by all schools of philosophy in their own way. In the Dvaita School of Vēdanta to which the Haridāsas are wedded, God is described as ನಿರ್ಗುಣ in the sense of ತ್ರಿಗುಣಾತೀತ and as ನಿರಾಕಾರ in the sense of ಪ್ರಾಕೃತದೇಹರಹಿತ ( ಪ್ರಕೃತ್ಯಾದಿ ಪ್ರವರ್ತಕತ್ವೇನ ತದುತ್ತಮತ್ವಾತ್ ನೈವ ರೂಪವತ್ ಬ್ರಹ್ಮ B. S. B. III, 2, 14 ). Therefore, no doctrinair compromises or chaos be read into these mystic utterances of Haridāsas. Their belonging to a parti-

cular school of philosophy and religion in no way reduces the universal appeal of their songs. Passionate advocating of theism, strong appeal for moral improvement, searching criticism of social evils and the universal doctrine of a supreme lord do have a universal appeal, All great thinkers in this country did belong to some or other sect or religion and have set the tenets of the respective sect or religions in their works. But the universal elements in their works have always been respected by all without any interpretational jugglery of universalism even in the theological or doctrinair part of their works. This happy tradition of particular tenets for the faithful and the universal elements for all may be continued instead of either setting aside or reading some kind of universalism in the theological and doctrinair songs of Haridāsas.

With this view, the following songs wherein Dvaita theology and philosophical doctrines are set out may be noticed here.

೧ ಸತ್ಯ ಜಗತಿದು ಪಂಚಭೇದವು, ನಿತ್ಯ ಶ್ರೀ ಗೋವಿಂದನ ।
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂಮು ಸಾರಿರೈ ।
ಜೀವ ಈಶಗೆ ಭೇದ ಸರ್ವತ್ರ ಜೀವ-ಜೀವಕೆ ಭೇದವು ।
ಜೀವ ಜಡರೊಳು ಭೇದ ಜಡರೊಳು ಭೇದ
ಜಡ ಪರಮಾತ್ಮಗೆ ।

೨ ಹರಿಸರ್ವೋತ್ತಮು ನಿತ್ಯ ತರುವಾಯ ರಮಾದೇವಿ
ತರುವಾಯ ವಿಧಿಪ್ರಾಣರು ॥

ಸರಸ್ವತಿ ಭಾರತಿ ಗರುಡ ಅನಂತ ರುದ್ರ
ತರುವಾಯ ಆರು ದೇವಿಗಳು

The central teachings of Haridāsas Viz realisation of the Supreme nature of God, love of God with an awareness of his Supreme nature, detachment from the worldly things resulting in the intensification of the attachment to God, moral improvement, and an optimistic active and ennobling life in dedication to God are all the essentials of Bhāgavatadharma which are beautifully summed up in Bhagavadgītā the perrennial source of Bhakti doctrine and Bhāgavatadharma

ಮತ್ಕರ್ಮಕೃತ್ ಮತ್ಪರಮಃ ಮದ್ಭಕ್ತಃ ಸಙ್ಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥

# ಸಂಪಾದಕರ ಮಾತುಗಳು

## ೧. ಪ್ರಾಸ್ತಾವಿಕ

**"ಪೂಜಾತತ್ತ್ವ"**ವನ್ನು ಕನ್ನಡ ಭಾವುಕರ ಕೈಯಲ್ಲಿರಿಸಿದ ತರುವಾಯ, ಎರಡುವರೆ ತಿಂಗಳ ಅವಧಿಯಲ್ಲಿಯೇ ಈ **'ಆರ್ತಭಾವ'** ಸಂಕಲನವನ್ನು ಅನುಗೊಳಿಸಿ ಸಹೃದಯರಿಗೆ ಸಮರ್ಪಿಸುವ ಸುಯೋಗ ಒದಗಿ ಬಂದುದಕ್ಕಾಗಿ ನಮಗೆ ತುಂಬ ಸಂತೋಷವೆನಿಸುತ್ತಿದೆ, ಅದರೊಂದಿಗೆ ಸಂಕೋಚವೂ ಎನಿಸುತ್ತಿದೆ. ಶ್ರೀದಾಸವರ್ಯರ ೪೦೦ನೆಯ ವರ್ಷದ ಮಹೋತ್ಸವದ ಅವಧಿಯೊಳಗಾಗಿ ಅವರ ಸಂಶೋಧಿತ ಸಾಹಿತ್ಯದ ಎರಡು ಸಂಪುಟಗಳನ್ನು ಪ್ರಕಟಿಸಿಯೇ ತೀರಬೇಕೆಂಬುದು ಉತ್ಸವಮಂಡಲದ ಸಂಕಲ್ಪ. ದೈವಸಹಾಯದಿಂದ ಆ ಸಂಕಲ್ಪವು ಸಿದ್ಧಿಗೊಂಡುದಕ್ಕಾಗಿ ನಮಗೆ ಸಂತೋಷ; ಆದರೆ ಈ ಬಗೆಯ ಸಂಶೋಧನಾತ್ಮಕ ಸಂಕಲನಗ್ರಂಥಗಳು ಅವಧಿಯ ಪರಿಮಿತಿಯಲ್ಲಿ ಸಿಕ್ಕಿಕೊಳ್ಳದೆ ಇರುವುದು— ಅವುಗಳ ಸರ್ವತೋಮುಖವಾದ ಸಂಪೂರ್ಣತೆಗೂ ನಿರ್ದುಷ್ಟತೆಗೂ ಸಾಧಕವೆನಿಸುವುದು. ನಮ್ಮ ಅನುಭವದ ಮಾತೆಂದರೆ : ಒಂದು ಕೃತಿಯನ್ನು, ನಮಗೆ ದೊರೆತಿರುವ ಎಲ್ಲ ಮೂಲ ಪ್ರತಿಗಳಲ್ಲಿಯೂ ಹುಡುಕಿ ನೋಡಿ, ದೊರೆತ ಪ್ರತಿಗಳಲ್ಲಿಯ ಪಾಠಭೇದಗಳನ್ನು ಗುರುತಿಸಿ, ಉಚಿತ ಪಾಠವನ್ನು ನಿರ್ಣಯಿಸಿ, ಶುದ್ಧೀಕೃತ ಕೃತಿಯನ್ನಾಗಿ ಬರೆದು ತೆಗೆಯಬೇಕಾದರೆ ೩–೪ ಗಂಟೆಗಳ ಕಾಲಾವಧಿಯಾದರೂ ಬೇಕು. ಈ ಕೆಲಸ ಅವಧಿಯ ಕಟ್ಟಿಗೆ ಒಳಗಾಗಿ ತೀವ್ರಗತಿಯಿಂದ ನಡೆದರೆ, ಸಂಶೋಧನಾಕಾರ್ಯ ಅಪೂರ್ಣವೆನಿಸೀತು—ಅಪ್ರಾಮಾಣಿಕವೆನಿಸೀತು. ನಾವೀಗ ಅವಧಿಯ ಪರಿಮಿತಿಗೆ ಒಳಗಾಗಿದ್ದರೂ, ಸಂಶೋಧನಾಕಾರ್ಯದಲ್ಲಿ ಅಪ್ರಾಮಾಣಿಕತೆಗೆ ಎಡೆ ದೊರೆಯದಂತೆ ಸಾಕಷ್ಟು ಎಚ್ಚರಿಕೆ ವಹಿಸಿದ್ದೇವೆ; ಆದರೆ ನ್ಯೂನಾತಿರೇಕಗಳ ಭೀತಿ-ಸಂಕೋಚಗಳು ನಮ್ಮನ್ನು ಬಾಧಿಸುತ್ತಲೇ ಇವೆ. ಸಮಯದ ಪರಿಮಿತತೆಯೇ ಇದಕ್ಕೆ ಮುಖ್ಯ ಕಾರಣವೆಂಬುದನ್ನು ಬೇರೆಯಾಗಿ ಹೇಳಬೇಕಾಗಿಲ್ಲ.

ಸಮಯದ ಪರಿಮಿತತೆಯೇ ಇದರಲ್ಲಿ ಕೆಲವೊಂದು ಮುದ್ರಣದೋಷ ಗಳೂ ಉಳಿಯುವಂತೆ ಮಾಡಿದೆಯೆಂಬುದನ್ನು ವಿಷಾದದಿಂದ ಒಪ್ಪಿಕೊಳ್ಳ ಬೇಕಾಗಿದೆ. ಮುದ್ರಣ ಕಾರ್ಯದ ಒಂದು ವಿಶಿಷ್ಟ ವ್ಯವಸ್ಥೆಯ ಮೂಲಕ, ಶುದ್ಧೀಕೃತ ಕರಡುಗಳ ಕೊನೆಯ ಪ್ರತಿಗಳನ್ನು ನೋಡುವುದಕ್ಕೆ ಅನುಕೂಲತೆ ಯಿರಲಿಲ್ಲ; ಆದುದರಿಂದ ಕೆಲವೊಂದು ಮುದ್ರಣದೋಷಗಳು ಹಾಗೆಯೇ ಉಳಿದುಕೊಂಡಿವೆ. ಆದರೆ ಅವು ಬಹುಸಂಖ್ಯೆಯಲ್ಲಿ ಇಲ್ಲ—ಮುಖ್ಯದೋಷ ಗಳೆನಿಸುವುದಿಲ್ಲ—ಇದೇ ಒಂದು ಸಮಾಧಾನದ ಸಂಗತಿ.

## ೨. "ಪೂಜಾತತ್ತ್ವ" ವಿಚಾರ

ಈ ಮೊದಲು ಪ್ರಕಟವಾದ ನಮ್ಮ 'ಪೂಜಾತತ್ತ್ವ' ಈಗಾಗಲೇ ಹಲವರ ಕೈಯನ್ನು ತಲ್ಪಿದೆ. ಅದನ್ನು ಕಂಡವರಲ್ಲಿ ಕೆಲವರು ಮೆಚ್ಚಿ ಕೊಂಡಾಡುವವರೂ ಇರುವರು; ಕೆಲವರು ಮುಖ ಮುದುರಿಸಿ ಮಾತನಾಡುವವರೂ ಇರುವರು. ಹೀಗೆ ಮುಖ ಮುದುರಿಸಿ ಮಾತನಾಡುವವರು, ನಮ್ಮ ಸಂಪಾದಕೀಯ ಕಾರ್ಯದ ದೋಷಗಳನ್ನೇನಾದರೂ ತೋರಿಸಿ ವಿಮರ್ಶೆಯ ಮಾತುಗಳನ್ನಾಡಿ ದ್ದರೆ, ನಾವು ಯಾವುದೇ ಬಗೆಯ ಆಕ್ಷೇಪಣೆಯನ್ನು ಒಡ್ಡದೆ ನಮ್ಮ ದೋಷ ಗಳನ್ನು ನಾವು ತಲೆವಾಗಿ ಒಪ್ಪಿಕೊಳ್ಳಬಹುದಾಗಿದ್ದಿತು. ಆದರೆ ಆ ಟೀಕಾಕಾರರ ಟೀಕೆಯ ಏಕೈಕ ಪಲ್ಲವಿಯೆಂದರೆ : 'ಇದರಲ್ಲಿ ಒಂದು ವಿಶಿಷ್ಟಮತಕ್ಕೆ ಸಂಬಂಧಿ ಸಿದ ಕೃತಿಗಳೇ ಹೆಚ್ಚಾಗಿವೆ' ಎಂಬುದು. ಅಹುದು. ಹೆಚ್ಚಾಗಿವೆ! ಇದು ನಮಗೂ ಗೊತ್ತು. ಆದರೆ ಇದಕ್ಕಾಗಿ ಯಾರೂ ಮೂಗು ಮುದುರಿಸುವ ಕಾರಣವಿಲ್ಲ ವೆಂದು ನಮ್ಮ ಅಭಿಪ್ರಾಯ.

ವರ್ತಮಾನ ರಾಜಕಾರಣದಲ್ಲಿ, ಬರಿಯ ಮಾತಿನಲ್ಲಿ ರೂಢವಾಗಿರುವ 'ಭಾವೈಕ್ಯ' 'ಜಾತ್ಯತೀತ ಭಾವ' 'ಸರ್ವಧರ್ಮ ಸಮನ್ವಯ' 'ವಿಶ್ವಬಂಧುತ್ವ' 'ಮಾನವತಾವಾದ' ಮೊದಲಾದ ಸವಿನುಡಿಗಳು, ತೀರ ಹೊಸಕಾಲದ ನಾಣ್ಯ ಗಳು. ಶ್ರೀಪುರಂದರದಾಸರ ಕಾಲದಲ್ಲಿ—ಅಷ್ಟೇ ಏಕೆ—ಅವರ ತರುವಾಯದ ೩—೪ ಶತಮಾನಗಳಲ್ಲಿ ಬದುಕಿದವರಿಗೆ. ಈ ಹೊಸ ನಾಣ್ಯಗಳ ಪರಿಚಯವಿರಲಿಲ್ಲ. ಇಂದು ಈ ಹೊಸನಾಣ್ಯಗಳ ಬೆಲೆಯನ್ನರಿತ ಕೆಲವರು, ನಮ್ಮ ಹಿಂದಿನ ಭಾರ ತೀಯ ಸಂತ-ಶರಣರು ಬಳಸುತ್ತಿದ್ದ ಧರ್ಮ, ನೀತಿ, ಸದಾಚಾರ, ಸರ್ವಜನ

ಕಲ್ಯಾಣ, ಮೋಕ್ಷಧರ್ಮ, ಪರಮಾತ್ಮನ ಸರ್ವೋತ್ತಮತ್ವ, ಭಕ್ತಿ, ಜ್ಞಾನ, ವೈರಾಗ್ಯ— ಮೊದಲಾದ ಶಬ್ದನಾಣ್ಯಗಳ ಬೆಲೆಯನ್ನು ಅರಿಯದವರಾಗಿರುವರು. ಶ್ರೀಪುರಂದರದಾಸರು ಬಳಸಿದುದು ತಮ್ಮ ಕಾಲದಲ್ಲಿ ಚಲಾವಣೆಯಲ್ಲಿದ್ದ ಸುವರ್ಣನಾಣ್ಯಗಳನ್ನು. ಇಂದಿನ ಕಾಗದದ ನೋಟುಗಳನ್ನು ಅವರು ಕನಸಿನಲ್ಲಿಯೂ ಕಂಡಿರಲಾರರು. ಆದುದರಿಂದಲೇ ಶ್ರೀಪುರಂದರದಾಸರ ಮತತತ್ತ್ವಗಳ ನಾಣ್ಯಸುವರ್ಣವನ್ನು ಶಾಶ್ವತ ಸುಖ-ಶಾಂತಿಗಳ ಒರೆಗಲ್ಲಿಗೆ ತಿಕ್ಕಿ ಪರೀಕ್ಷಿಸಿ ಅವುಗಳ ಬೆಲೆಯನ್ನು ಕಟ್ಟಬೇಕಲ್ಲದೆ, ಇಂದಿನ ಚಲಾವಣೆ ನಾಣ್ಯಶಾಸ್ತ್ರದ ನೀತಿ-ನಿಯಮಗಳಿಂದ ಕಟ್ಟಲಾಗದು.

ನಾವು ಹೊರಟುದು ಶ್ರೀಪುರಂದರದಾಸರ ಸಮಗ್ರಸಾಹಿತ್ಯವನ್ನು ಸಂಪಾದಿಸಿ ಪ್ರಕಟಿಸಲು; ಅದರಲ್ಲಿ ಕೆಲವೊಂದು ಭಾಗಗಳು ಏಕದೇಶೀಯವಾದು ವೆಂಬ ಭೀತಿಯಿಂದ ನಾವು ಅವುಗಳನ್ನು ಬಿಡಲು ಬರುವಂತಿಲ್ಲ. ಬಿಟ್ಟರೆ ಮೂಲಕೃತಿಕಾರನಿಗೆ ಅಪಚಾರ ಮಾಡಿದಂತಾಗುವುದು; ಅಲ್ಲದೆ ನಾವು ಕೈಕೊಂಡ ಕಾರ್ಯವೂ ಅಪೂರ್ಣವೆನಿಸುವುದು, ಹಾಗೆ ಮಾಡಿದರೆ ಶ್ರೀ ದಾಸರ ವ್ಯಕ್ತಿತ್ವದ ಸಂಪೂರ್ಣ ದರ್ಶನವೂ ಆಗಲಾರದು. ಶ್ರೀ ಪುರಂದರದಾಸರೊಬ್ಬರೇ ಏಕೆ—ಭಾರತದಲ್ಲಿಯ ಪ್ರತಿಯೊಬ್ಬ ಸಂತ-ಶರಣನ ಸಾಹಿತ್ಯಕೃತಿಯೂ ಮತ-ಧರ್ಮ + ಸಾರ್ವಲೌಕಿಕಧರ್ಮ ಇವುಗಳನ್ನು ಹೊಂದಿಕೊಂಡೇ ಇರುವುದು; ಇಷ್ಟೇ ಅಲ್ಲ, ವಿಂಗಡಿಸಿ ತೋರಿಸಲು ಬಾರದಂತೆ ಅವೆರಡೂ ಸಮರಸವಾಗಿರು ವುವು. ಯಾವನೊಬ್ಬ ಸಂತನಾಗಲಿ, ಶರಣನಾಗಲಿ, ವಿಶಿಷ್ಟ ಮತತತ್ತ್ವದ ಅನುಯಾಯಿಯೆನಿಸಿಕೊಂಡಿರುವುದರಲ್ಲಿ ಯಾವ ಅಪರಾಧವೂ ಇಲ್ಲ; ಅದು ಅಸ್ವಾಭಾವಿಕವೂ ಅಲ್ಲ. ಮತತತ್ತ್ವವೆಂಬುವು ಜೀವದ ಅಂತಃಸ್ವರೂಪದ ಅಭಿ ರುಚಿಗೆ ಸಂಬಂಧಿಸಿದುವು. ಒಂದು ಜೀವ ದ್ವೈತ ತತ್ತ್ವವನ್ನು ಮೆಚ್ಚೀತು; ಇನ್ನೊಂದು ಜೀವ ಅದ್ವೈತವನ್ನು ಮೆಚ್ಚೀತು. ಮಾವಿನ ಹಣ್ಣಿನ ರುಚಿಗಾರ ಅದರ ಮಾಧುರ್ಯದ ಪವಾಡವನ್ನು ಹಾಡಬಹುದು; ದ್ರಾಕ್ಷಿಯ ರುಚಿಗಾರ ಆ ಹಣ್ಣುಗಳ ಮಧುರತೆಯ ಕೊಂಡಾಟ ನಡೆಯಿಸಬಹುದು. ಅದು ಅವರು ಅನುಭವಿಸಿದ ರುಚಿಯ ಪರಿಣಾಮಸೂಚಕಧ್ವನಿ ಮಾತ್ರ. ಇಂದಿನ ನಾವು ಆ ಫಲಾನುಭವಸೂಚಕಧ್ವನಿಗಳನ್ನು ಕೇಳಿ ಅರಿತುಕೊಳ್ಳಬೇಕು. ಒಂದೇ ಫಲದ ಮಾಧುರ್ಯವನ್ನು ಕೊಂಡಾಡಿರುವನೆಂದು ಆಕ್ಷೇಪಿಸಲಾಗದು.

ಸಾಹಿತ್ಯ ಸಂಪಾದನೆಯ ಕಾರ್ಯ ಮತಾತೀತವಾಗಿರುವುದು. ಇಂದು ಪಂಪ ಮಹಾಕವಿಯ ಸಾಹಿತ್ಯವನ್ನು ಸಂಪೂರ್ಣವಾಗಿ ಸಂಪಾದಿಸಲು ಹೊರಟರೆ, ಆ ಕವಿ ಪುರಸ್ಕರಿಸಿ ಪ್ರಚಾರಮಾಡಿದ ಜೈನ ಮತತತ್ತ್ವದ ಮೇಲ್ಮೆಯ ಮಾತುಗಳನ್ನು ತೆಗೆದುಹಾಕುವುದು ಅನ್ಯಾಯಕಾರ್ಯವೆನಿಸುವುದು. ಅದರಂತೆಯೇ ಶ್ರೀಬಸವಣ್ಣನವರ ಸಾಹಿತ್ಯವನ್ನು ಸಂಪೂರ್ಣವಾಗಿ ಸಂಪಾದಿಸಿ ಪ್ರಕಟಿಸಲು ಹೊರಡುವವನು, ಇಂದಿನ ಸರ್ವಧರ್ಮ ಸಮನ್ವಯ ಭಾವದಿಂದ ಕಾರ್ಯ ಮಾಡಲು ತೊಡಗಿದರೆ, ಅನೇಕ ವಚನಗಳನ್ನು ಅವನು ಬಿಡಬೇಕಾಗಿ ಬಂದೀತು; ಆದರೆ ಇದರಿಂದ ಶ್ರೀಬಸವಣ್ಣನವರ ಸಾಹಿತ್ಯದ ವ್ಯಕ್ತಿತ್ವದ ಸಂಪೂರ್ಣ ದರ್ಶನ ಜನತೆಗೆ ಆದೀತೇ ? ಹಾಗೆಯೇ ದ್ವೈತ ಮತ ಪುರಸ್ಕಾರಿಗಳಾದ ಶ್ರೀಪುರಂದರದಾಸರ ಸಾಹಿತ್ಯವನ್ನು ಸಂಪಾದಿಸುವವನು, ಸರ್ವಜನಾನುರಾಗಕ್ಕಾಗಿ, ಅವರ ದ್ವೈತಮತನಿಷ್ಠಾ ಪ್ರಚಾರಕಸಾಹಿತ್ಯವನ್ನು ಪರಿತ್ಯಜಿಸಿ ಪ್ರಕಟಿಸುವುದು ಸಂಪಾದಕೀಯ ಕರ್ತವ್ಯಕ್ಕೆ ಸಮಂಜಸವಾಗಿ ಕಂಡೀತೆ ? ಎಂತಲೇ 'ಪೂಜಾತತ್ತ್ವ'ದಲ್ಲಿ ಶ್ರೀ ದಾಸರ ದ್ವೈತಭಕ್ತಿಸಾಧನೆಯ ತತ್ತ್ವಕ್ಕೆ ಸಂಬಂಧಿಸಿದ ಸಾಹಿತ್ಯವನ್ನೆಲ್ಲ ಸಂಗ್ರಹಿಸಿ ಒಂದೆಡೆಯಲ್ಲಿ ಕೂಡಿಸಿ ಕೊಡಲಾಗಿದೆ. ಇದನ್ನು ಆಕ್ಷೇಪಿಸುವವರಿಗೆ ಸಂಪಾದಕೀಯ ಔಚಿತ್ಯದ ಕಲ್ಪನೆಯೇ ಇರಲಾರದೇನೋ ಎಂದು ಭಾವಿಸುವಂತಿದೆ.

## ೩. 'ಆರ್ತಭಾವ' ವಿಚಾರ

ಈ ವಿಭಾಗದಲ್ಲಿ ಜೀವದಲ್ಲಿ ಭಕ್ತಿಯ ಬೀಜ ಬಿದ್ದು, ಅದು ಅಂಕುರಿಸಿ, ಬೆಳೆದು ರಸಪರಿಪಾಕದಿಂದ ಕೂಡಿದ ಫಲಬಿಟ್ಟು, ಜೀವ ಅದರ ಮಧುರರಸವನ್ನು ಸವಿದುಂಡು, ಭಕ್ತಿ—ಜ್ಞಾನಾನಂದದಲ್ಲಿ ತಲ್ಲೀನನಾಗುವ ವರೆಗಿನ ಭಕ್ತಿಯ ವಿವಿಧಾವಸ್ಥೆಯನ್ನು ಸೂಚಿಸುವಂತಹ ವಿವಿಧ ಕೀರ್ತನೆ, ಸುಳಾದಿ, ಉಗಾ-ಭೋಗಗಳನ್ನು ಸಂಗ್ರಹಿಸಲಾಗಿದೆ. ಭಕ್ತನ ಮನಸ್ಸಿನ ವಿಕಸನಕ್ರಮದ ಅನೇಕ ಮಾದರಿಗಳು ಈ ವಿಭಾಗದಲ್ಲಿ ನೋಡಲು ದೊರೆಯುವುವು.

ಸಂತ—ಶರಣರೆಲ್ಲರೂ ದೇವಾಂಶರೋ ದೇವತೆಗಳ ಅವತಾರಿಗಳೋ ಎಂಬ ಕಲ್ಪನೆ ನಮ್ಮ ನಾಡಿನ ಭಾವುಕರಲ್ಲಿ ರೂಢವಾಗಿರುವುದಾದರೂ, ಅವರ ಕೃತಿಗಳಲ್ಲಿ ಆ ಆ ಸಂತ-ಶರಣರ ಮನೋಭಾವನೆಯ ಪರಿಳಿತಗಳೂ ಜೀವನಪಥ

ದಲ್ಲಿ ಮಾನವರಾಗಿಯೇ ಮಾರ್ಗಕ್ರಮಣ ಮಾಡಿದ ಹೆಜ್ಜೆಯ ಗುರುತುಗಳೂ ಕಾಣದೆ ಇರವು. ರಾಮ–ಕೃಷ್ಣಾದಿ ಪೂರ್ಣಾವತಾರಿಗಳ ಚರಿತ್ರೆಗಳನ್ನೇ ನಾವಿಂದು ಮಾನವೀಯ ವಾಸ್ತವ ದೃಷ್ಟಿಯಿಂದ ನೋಡಿ ವಿಮರ್ಶಿಸುತ್ತಿರುವಾಗ, ದಾಸ-ಶರಣರ ಜೀವನವನ್ನೂ ನಾವು ಅದೇ ದೃಷ್ಟಿಯಿಂದ ನೋಡಿ ವಿಮರ್ಶಿಸುವುದು, ಇಂದಿನ ವಾಸ್ತವ ದೃಷ್ಟಿಯವರಿಗೆ ಹೆಚ್ಚು ಉಚಿತವೆನಿಸೀತು. ಇದರಿಂದ ಆ ದಾಸ–ಶರಣರ ಗೌರವಕ್ಕೆ ಚ್ಯುತಿಯೇನೂ ಉಂಟಾಗದು.

ಭೌತಿಕಸಂಪತ್ತಿನಲ್ಲಿ ಉತ್ಕಟವಾದ ಆಶೆ ಇಟ್ಟುಕೊಂಡ ಒಬ್ಬ ಸಂಸಾರ-ಲೋಭಿ, ಅದೆಲ್ಲವನ್ನೂ ತ್ಯಾಗವಮಾಡಿ, ಶ್ರೀಹರಿಭಕ್ತಿಯೇ ಜೀವನತಾರಕವೆಂಬ ತಿಳಿವು ಸ್ಥಿರಗೊಳ್ಳುವ ವರೆಗೆ ಆ ಲೋಭಿಯ ಮನಸ್ಸು–ಹೃದಯಗಳು ಎಷ್ಟೊಂದು ಉಯ್ಯಾಲೆಯಾಟ ಆಡಿರಬಹುದು ? ಶ್ರೀಪುರಂದರದಾಸರಂತಹ ಪ್ರಾಚೀನಮಹಾಮಹಿಮರ ಉದಾತ್ತಸಾಹಿತ್ಯದಲ್ಲಿ ಆ ಉಯ್ಯಾಲೆಯ ಆಟದ ವಾಸ್ತವ ಚಿತ್ರಣಗಳು ನಮಗೆ ಕಾಣದೆ ಹೋದರೂ, ಅವುಗಳ ಸಂಕೇತಸೂಚನೆಗಳು ನಮಗೆ ಕಂಡುಬಾರದೆ ಹೋಗವು.

'ದಂಡಿಗೆ-ಬೆತ್ತವ ಹಿಡಿಯುವುದಕ್ಕೆ ಮಂಡೆತಗ್ಗಿಸಿ ನಾಚುತಿದ್ದೆ !' 'ಗೋಪಾಳ ಬುಟ್ಟಿ ಹಿಡಿಯುವುದಕ್ಕೆ ಭೂಪತಿಯಂತೆ ನಾಚುತಿದ್ದೆ !' 'ತುಲಸಿಯ ಮಾಲೆ ಹಾಕುವುದಕ್ಕೆ ಅಲಸಿ ಅಲಸಿ ನಾಚುತಿದ್ದೆ !' ಎಂದು ತಾವೇ ಪ್ರಾಮಾಣಿಕಭಾವದಿಂದ ಒಪ್ಪಿಕೊಂಡ ಶ್ರೀಪುರಂದರದಾಸರು, 'ಆದದ್ದೆಲ್ಲಾ ಒಳಿತೇ ಆಯಿತು !' ಎಂಬ ನೆಲೆಗೆ ಬಂದು ನಿಲ್ಲಬೇಕಾದರೆ, ಅವರ ಮನಸ್ಸು ಎಷ್ಟು ಸಲ ಕಣ್ಣುಮುಚ್ಚಾಲೆ ಆಡಿರಬಹುದು ? ಅವರ ಹೃದಯ ಎಷ್ಟೆಷ್ಟು ಸಲ ಕಳವಳಗೊಂಡಿರಬಹುದು ?

ದೇವಭಕ್ತಿ ನಮ್ಮ ಭಾರತೀಯ ಪರಂಪರೆಯಲ್ಲಿ ಪ್ರತಿಯೊಬ್ಬ ಮಾನವನಿಗೂ ಜನ್ಮದೊಂದಿಗೇ ಬಂದಿರುವ ಒಂದು ವರಪ್ರದಾನವಾಗಿದೆ. ಆದರೆ ಶ್ರೀಪುರಂದರದಾಸರಂತೆ ಆ ವರದ ಪ್ರಯೋಜನಫಲವನ್ನು ಪಡೆದವರು ಅಪೂರ್ವ. ಎಂತಲೇ ಪುರಂದರದಾಸರು ಸಾಮಾನ್ಯರ ಬುದ್ಧಿಗೆ ಅತಿಮಾನುಷರಾಗಿ—ಅವತಾರಿಗಳಾಗಿ—ಕಂಡರೆ ಅದು ಆಶ್ಚರ್ಯಪಡಬೇಕಾದ ವಿಷಯವೇನೂ ಅಲ್ಲ. ಆದರೂ ಅವರ ಮಾನವಸಹಜವಾದ ಮನೋಲಹರಿಗಳು

ಅವರ ಸಾಹಿತ್ಯತರಂಗಿಣಿಯನ್ನು ಶಾಂತವಾಗಿ ಹರಿಯಗೊಟ್ಟಿಲ್ಲವೆಂಬುದು ನಿಜ ವಾದ ಸಂಗತಿ.

ದೇವಭಕ್ತಿ ಜನ್ಮದತ್ತವಾದರೂ ಅದು ಬೆಳೆಯಲು ಯುಕ್ತವಾದ ಸ್ಥಳ–ಕಾಲಗಳ ಪರಿಸರವು ಬೇಕು. ಅದು ನೆಲೆಗೊಂಡು ನಿಲ್ಲಲು ತಕ್ಕ ಪರಿಪೋಷಕ ವಾತಾವರಣವು ಬೇಕು. ಯೋಗ್ಯ ಗುರುಗಳ ದಿಗ್ದರ್ಶನಬೇಕು; ಯೋಗ್ಯ ಜನರ ಸಾಹಚರ್ಯಬೇಕು. ಶ್ರೀಪುರಂದರದಾಸರ ಮನಸ್ಸು ತಮ್ಮ ಪತ್ನಿಯ ಕಾಂತಾ-ಸಮ್ಮಿತ ವಿಚಾರ–ಆಚಾರಗಳ ಪ್ರಭಾವದಿಂದ ಶ್ರೀಹರಿಯ ಭಕ್ತಿಯ ಕಡೆಗೆ ತಿರುಗಿರಬಹುದು. ಅದರಂತೆಯೇ ಅವರು ಮೊದ-ಮೊದಲು ಮುಗ್ಧಭಕ್ತಿಯನ್ನೇ ಜೀವನಕ್ಕೆ ಅಳವಡಿಸಿಕೊಂಡಿರಬಹುದು. ಅದನ್ನು ಬಲಗೊಳಿಸಿಕೊಳ್ಳಲು ತಾವೇ ಏನೇನೋ ಶಾಸ್ತ್ರವಿಚಾರಗ್ರಂಥಗಳನ್ನೂ ಓದಿರಬಹುದು, ಆದರೆ ಅವರ ಸೂಕ್ಷ್ಮಬುದ್ಧಿಗೆ, ಅದೆಲ್ಲವೂ ಆಭಾಸಜ್ಞಾನವೆಂದು ತೋರಿದಾಗ :

" ಗುರುವಿನ ಗುಲಾಮನಾಗುವ ತನಕಾ
ದೊರೆಯದಣ್ಣ ಮುಕುತಿ ॥
ಪರಿಪರಿ ಶಾಸ್ತ್ರವನೇಕವನೋದಿ
ವ್ಯರ್ಥವಾಯ್ತು ಭಕುತಿ ॥
ಆರುಶಾಸ್ತ್ರಗಳನೋದಿದರೇನು ?
ಮೂರಾರು ಪುರಾಣ ಮುಗಿಸಿದರೇನು ?
ಸಾರಸರ್ವಕಥೆ ಕೇಳಿದರೇನು ?
ಧೀರನಾಗಿ ತಾ ಪೇಳಿದರೇನು ? ॥ ೧ ॥ "

ಎಂಬ ವಿಚಾರಕ್ಕೆ ಬಂದು, ಗುರುಗಳನ್ನು ಶೋಧಿಸುತ್ತ ಹೊರಟಿರುವರು. ಅಂದಿನ ಕಾಲದಲ್ಲಿ ಲೌಕಿಕ–ಪಾರಲೌಕಿಕವಿದ್ಯೆಗಳೆರಡರಲ್ಲಿಯೂ ಪಾರಂಗತರೆಂದು ಹೆಸರಾಗಿದ್ದ—ಭಕ್ತಿಸಾಧನನಿಷ್ಠೆಯಲ್ಲಿ ಸಂಪೂರ್ಣ ಶ್ರದ್ಧೆಯನ್ನಿರಿಸಿದ ಶ್ರೀವ್ಯಾಸ-ರಾಯಸ್ವಾಮಿಗಳವರ ಬಳಿಯಲ್ಲಿ ದೀಕ್ಷೆಯನ್ನು ಪಡೆದವರಾಗಿ, ಈ ಬಗೆಯ ಧನ್ಯತೆಯ ಉದ್ಗಾರಗಳನ್ನು ತೆಗೆದಿರುವರು :

" ವ್ಯಾಸರಾಯರ ಚರಣಕಮಲ ದರುಶನವೆನ-
ಗೇಸು ಜನ್ಮದ ಸುಕೃತಫಲದಿ ದೊರಕಿತೊ !—ಎನ್ನ

ಸಾಸಿರ ಕುಲಕೋಟಿ ಪಾವನವಾಯಿತು—
ಶ್ರೀಶನ ಭಜಿಸುವುದಕಧಿಕಾರಿ ನಾನಾದೆ;
ದೋಷರಹಿತನಾದ ಪುರಂದರವಿಠಲನ
ದಾಸರ ಕರುಣವು ಎನ್ನಮೇಲೆ ಇರಲಾಗಿ
ಏಸು ಜನ್ಮದ ಸುಕೃತಫಲವು ಫಲಿಸಿತೊ ! ”

ಶ್ರೀಪುರಂದರದಾಸರ ಗುರುಗಳ ವಿಷಯಕವಾದ ನಿಷ್ಠೆ ಅನ್ಯಾದೃಶವಾದುದು :

“ ಗುರು ಉಪದೇವಿಲ್ಲದ ಜ್ಞಾನವು
ಗುರು ಉಪದೇಶವಿಲ್ಲದ ಸ್ನಾನವು
ಗುರು ಉಪದೇಶವಿಲ್ಲದ ಧ್ಯಾನವು
ಗುರು ಉಪದೇಶವಿಲ್ಲದ ಜಪವು
ಗುರು ಉಪದೇಶವಿಲ್ಲದ ತಪವು
ಗುರು ಉದೇಶವಿಲ್ಲದ ಮಂತ್ರ
ಗುರು ಉಪದೇಶವಿಲ್ಲದ ತಂತ್ರ
ಉರಗನ ಉಪವಾಸದಂತೆ ಕಾಣಿರೋ !
ಗುರು ವ್ಯಾಸರಾಯರೇ ಕರುಣದಿಂದಲಿ ಎನಗೆ
ಪುರಂದರವಿಠಲನೇ ಪರದೈವವೆಂದರುಹಿ
ದುರಿತಭಯವನೆಲ್ಲ ಪರಿಹರಿಸಿದರಾಗಿ
ವರಮಹಾಮಂತ್ರ ಉಪದೇಶಿಸಿದರಾಗಿ ॥

ಇದುವರೆಗೂ—ದೈವಭಕ್ತಿಯ ಆಕರ್ಷಣೆಯಿಂದ ಸಂಪತ್ತ್ಯಾಗ ಮಾಡಿ ಹೊರಬಿದ್ದ ನಾಯಕರಿಗೆ—ಎಂದರೆ—ಶ್ರೀಪುರಂದರದಾಸರಿಗೆ, ತಾವು ಯಾವ ದೈವತವನ್ನು ಸರ್ವೋತ್ತಮವೆಂದು ಭಜಿಸಿ ಭಾವಿಸಬೇಕೆಂಬುದರ ಸಂಪೂರ್ಣ ಕಲ್ಪನೆ ಇರಲಿಲ್ಲವೆಂದು ಇಲ್ಲಿಯ—ಅವರ ‘ ಪುರಂದರವಿಠಲನೇ ಪರದೈವವೆಂದು ಅರುಹಿ ’ ಎಂಬ ಮಾತಿನಿಂದ ನಾವು ಭಾವಿಸಬಹುದಾಗಿದೆ; ಹಾಗೆ ಭಾವಿಸುವುದು ಐತಿಹಾಸಿಕ ಸತ್ಯಕ್ಕೆ ಸುಸಂಗತವೂ ಎನಿಸಬಹುದಾಗಿದೆ. ಏಕೆಂದರೆ ಪುರಂದರ ದಾಸರು ಮೊದಲಿನಿಂದಲೂ ಭಾಗವತಪಂಥಕ್ಕೆ ಸೇರಿದವರಾಗಿರಬಹುದಾದರೂ, ವಿಷ್ಣುದೈವತದ ಪೂಜಕರೇ ಆಗಿರಬಹುದಾದರೂ—ಅಂದಿನ ಭಾಗವತಪಂಥದ ಕಲ್ಪನೆಯಂತೆ, ಇವರೂ ಹರಿ-ಹರರಲ್ಲಿ ಅಭೇದವನ್ನು ಕಲ್ಪಿಸುವವರಾಗಿರ

ಬಹುದು. ಶ್ರೀ ವ್ಯಾಸರಾಯರಿಂದ ದೀಕ್ಷೆ ಪಡೆದ ಮೇಲೆಯೆ ಇವರಿಗೆ ತಾರ ತಮ್ಯ — ಪಚಂಭೇದಾತ್ಮಕವಾದ ದ್ವೈತಭಕ್ತಿ—ಸಾಧನೆಯ ತಿಳಿವಳಿಕೆಯಾಗಿದೆ. ಇದಕ್ಕೆ ಶ್ರೀಪುರಂದರದಾಸರ ಈ ಸುಳಾದಿ ವಚನವೇ ಪ್ರತ್ಯಕ್ಷ ಸಾಕ್ಷಿಯಾಗಿದೆ :

“ ಅಂಕಿತವಿಲ್ಲದ ದೇಹ ನಿಷೇಧ
ಅಂಕಿತವಿಲ್ಲದ ಕಾವ್ಯ ಶೋಭಿಸದು
ಅಂಕಿತವಿಲ್ಲದೆ ಇರಬಾರದೆಂದು ಚ-
ಕ್ರಾಂಕಿತವನು ಮಾಡಿ ಎನ್ನಂಗಕೆ—
ಪಂಕಜನಾಭ ಪುರಂದರವಿಠಲನ
ಅಂಕಿತವೆನಗಿತ್ತ ಗುರುವ್ಯಾಸಮುನಿರಾಯ ! ”

*   *   *

“ ಗುರುವ್ಯಾಸರಾಯರ ಚರಣವೆನಗೆ ಗತಿ
ಪುರಂದರವಿಠಲನ ಅರಿತೆ ಇವರಿಂದ ! ”

ಶ್ರೀಪುರಂದರದಾಸರ ನಿಜವಾದ ಭಕ್ತಿಸಾಧನಾಜೀವನವು ಎಂದಿನಿಂದ ಪ್ರಾರಂಭವಾಯಿತೆಂಬುದು ಮೇಲಿನ ಸುಳಾದಿಭಾಗದಲ್ಲಿಯ ಅವರ ಮಾತಿ ನಿಂದ ನಿಸ್ಸಂದಿಗ್ಧವಾಗಿ ಗೊತ್ತಾಗುವುದು. ಗುರುದೀಕ್ಷೆ ಪಡೆದ ಸಂಭ್ರಮ ದಲ್ಲಿಯೇ ಶ್ರೀದಾಸರಾಯರು ಈ ಹಾಡನ್ನು ರಚಿಸಿ ಹಾಡಿ ಕುಣಿದಿರಬಹು ದಾಗಿದೆ :

“ ಹರಿದಾಸರ ಸಂಗ ದೊರೆಯಿತು ಎನಗೀಗ
ಇನ್ನೇನಿನ್ನೇನು ?
ವರಗುರು ಉಪದೇಶ ನೆರವಾಯ್ತು ಎನಗೀಗ
ಇನ್ನೇನಿನ್ನೇನು ? ॥ ಪ ॥

ಮಾಯದ ಸಂಸಾರ ಮಮಕಾರ ತಗ್ಗಿತು
ಇನ್ನೇನಿನ್ನೇನು ?
ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲಸಿತು
ಇನ್ನೇನಿನ್ನೇನು ? ॥ ೧ ॥

ಇದಾದಮೇಲೆಯೇ ದಾಸರು ತಮ್ಮ ಇದುವರೆಗಿನ ಅಭಾನಜ್ಞಾನ-ಗಳಿಗಾಗಿ ಪಶ್ಚಾತ್ತಾಪವನ್ನು ಪ್ರಕಟಿಸುತ್ತ :

" ಆದದ್ದೆಲ್ಲಾ ಒಳಿತೇ ಆಯಿತು....ನಮ್ಮ
ಶ್ರೀದರನ್ಯ ಸೇವೆಯ ಮಾಡಲು
ಸಾಧನ ಸಂಪತ್ತಾಯಿತು—॥ "

ಎಂದು ಸಮಾಧಾನದ ಉದ್ಗಾರಗಳನ್ನು ಹೊರಹೊಮ್ಮಿಸಿದ್ದಾರೆ. ದಾಸರ ಭಕ್ತಿ-ತತ್ತ್ವದ ಸಾಧನೆಯ ನಿಜವಾದ ಪ್ರಾರಂಭ ಇಲ್ಲಿಂದಲೇ ಆಗುವು ದೆಂದು ಹೇಳಬಹುದು. ಭಕ್ತಿಸಾಧನೆಯಲ್ಲಿಯ ಮೊದಲನೆಯ ಮೆಟ್ಟಿಲೆಂದರೆ ಆರ್ತಭಾವದ ಉತ್ಕಟತೆ. ಆರ್ತಭಾವ ಎಂದರೆ ಶೋಕಭಾವ, ಅಜ್ಞಾನಿಯಾದ ಜೀವ ಸಂಸಾರದುಃಖದಿಂದ ಬೆಂದು ಬೇಗುದಿಗೊಳ್ಳುತ್ತದೆ, ಕಂಗೆಟ್ಟು ನೊಂದು ನಿಟ್ಟುಸಿರಿಕ್ಕುತ್ತದೆ. ' ಸಂಕಟಬಂದಾಗ ವೆಂಕಟರಮಣ ' ಎಂಬ ಅನುಭವ ವಾಣಿಯಂತೆ, ಬೇರೆ ಗತಿಯನ್ನು ಕಾಣದೆ ಅನಿವಾರ್ಯವಾಗಿ ದೇವರ ಮಹಿಮೆ ಯನ್ನು ಜ್ಞಾಪಕಕ್ಕೆ ತಂದುಕೊಂಡು, ಅವನಲ್ಲಿ ಮೊರೆಯಿಡುತ್ತದೆ. ಈ ಸಂಕಲನದ ಪ್ರಾರಂಭದಲ್ಲಿ 'ಸಂಸಾರ ಜುಗುಪ್ಸೆ' ಎಂಬ ವಿಭಾಗದಲ್ಲಿ ಬಂದಿರುವ ಹಾಡು-ಸುಳಾದಿ-ಉಗಾಭೋಗಗಳನ್ನು ನೋಡಿದರೆ, ಆರ್ತಭಕ್ತನ ಒಳಗುದಿ ಎಂತಹದೆಂಬುದು ಗೊತ್ತಾಗುವುದು. ಮನಸ್‌ತತ್ತ್ವಜ್ಞರು ಮಾನವನ ಕಾಮ ಉದಾತ್ತೀಕರಣಹೊಂದುತ್ತ ಪ್ರೇಮವಾಗಿ ಪರಿಣಾಮಗೊಳ್ಳುವುದೆಂದು ಹೇಳು ವರು; ಹಾಗೆಯೆ ಮಾನವನ ಉತ್ಕಟಆರ್ತಭಾವವೇ ಉದಾತ್ತೀಕರಣ ಹೊಂದುತ್ತ ಜ್ಞಾನಯುಕ್ತ ಭಕ್ತಿಯಾಗಿ ಪರಿಣಾಮಗೊಳ್ಳುವುದೆಂದು ಹೇಳಿದರೆ ತಪ್ಪೇನೂ ಎನಿಸದು.

## ೪. ಭಕ್ತನ ನಾಲ್ಕು ಅವಸ್ಥೆಗಳು

ಭಗವದ್ಗೀತೆಯಲ್ಲಿ ಶ್ರೀಕೃಷ್ಣಭಗವಂತನು :

" ನಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ
ಮಾಯಯಾsಪಹೃತಜ್ಞಾನಾಃ ಆಸುರಂ ಭಾವಮಾಶ್ರಿತಾಃ ॥ "

ಎಂದು ಹೇಳಿ, ತನ್ನನ್ನು ಶರಣುಹೊಗದವರು ಎಂತೆಂತಹ ಜನರೆಂಬುದನ್ನು ಚೆನ್ನಾಗಿ ವಿಶ್ಲೇಷಿಸಿ ತೋರಿಸಿದ್ದಾನೆ. ದುರಾಚಾರಿಗಳೂ ಮೂಢರೂ ಅಧ

ಮರೂ ಎಂದೂ ದೇವಭಕ್ತರಾಗುವುದಕ್ಕೆ ಶಕ್ಯವಾಗದು. ಏಕೆಂದರೆ ಅವರೆಲ್ಲರೂ ಆಸುರೀಭಾವದವರು. ದೈವೀಮಾಯೆಯಿಂದ ಅವರೆಲ್ಲರ ತಿಳಿವಳಿಕೆಯೂ ಅಪಹೃತವಾಗಿರುವುದು.

ಅಲ್ಲಿಯೆ ಮುಂದೆ ಶ್ರೀಕೃಷ್ಣ ತನ್ನನ್ನು ಹೊಂದುವ ಭಕ್ತರು ಎಂತೆಂತಹರೆಂಬುದನ್ನೂ ಹೀಗೆ ಹೇಳಿದ್ದಾನೆ :

"ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚ ಭರತರ್ಷಭ ॥"

ಎಂದರೆ ; ಆರ್ತರು, ಜಿಜ್ಞಾಸುಗಳು, ಅರ್ಥಾರ್ಥಿಗಳು, ಜ್ಞಾನಿಗಳು—ಎಂಬ ನಾಲ್ಕು ಬಗೆಯ ಸುಜೀವಿಜನರು, ನನ್ನ ಭಕ್ತರಾಗಲು ಹವಣಿಸುವರು—ಎಂದು.

ಈ ನಾಲ್ಕು ಬಗೆಯ ಭಕ್ತರಲ್ಲಿ ಜ್ಞಾನಿಭಕ್ತನೇ ಸರ್ವಶ್ರೇಷ್ಠನೆಂದೂ, ಅವನೇ ತನಗೆ ತುಂಬ ಪ್ರಿಯನೆಂದೂ ಶ್ರೀಕೃಷ್ಣನು ಹೇಳಿರುವನು.

ಕನ್ನಡ ಹರಿದಾಸರ ದೈವಭಕ್ತಿ ಆರ್ತಭಾವದಿಂದ ಮೊದಲಾಗುವುದಾದರೂ ಅವರ ಆದರ್ಶ ಜ್ಞಾನಿಯಾಗುವುದರ ಕಡೆಗೇ ಇರುವುದೆಂಬುದು ಅವರ ಸಾಹಿತ್ಯದ ಅಭ್ಯಾಸದಿಂದ ನಮಗೆ ಸ್ಪಷ್ಟವಾಗಿ ಕಣುವುದು. ಪುರಂದರದಾಸರು ಭಕ್ತನ ಮೊದಲ ಅವಸ್ಥೆಯಲ್ಲಿರುವಾಗ :

'ಹಾಡಿದರೆ ಎನ್ನೊಡೆಯನ ಹಾಡುವೆ,
ಬೇಡಿದರೆ ಎನ್ನೊಡೆಯನ ಬೇಡುವೆ,
ಒಡೆಯಗೆ ಒಡಲನು ತೋರುತ ನನ್ನಯ
ಬಡತನ ಬಿನ್ನಹ ಮಾಡುವೆ ಕಾಡುವೆ,
ಒಡೆಯ ಪುರಂದರವಿಠ್ಠಲರಾಯನ
ಅಡಿಗಳನು ಸಾರಿ ಬದುಕುವೆನಯ್ಯಾ
ಸಾರಿ ಬದುಕುವೆ !'

ಎಂದು ಆರ್ತಭಾವದ ಸಾಮಾನ್ಯ ನುಡಿಗಳನ್ನು ನುಡಿದಿರುವರಾದರೂ, ಅವರೇ ಮೇಲುಮೇಲಿನ ಮೆಟ್ಟಿಲನ್ನು ಏರಿ ಜ್ಞಾನಿಯ ಸ್ಥಾನದಲ್ಲಿ ನಿಂತಾಗ :

'ಮಾನವಜನ್ಮ ದೊಡ್ಡದು—ವ್ಯರ್ಥ
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ !'

ಎಂದು ಹೇಳಿರುವರು, ಮೊದಮೊದಲು 'ಸಾಕು ಸಾಕಿನ್ನು ಸಂಸಾರಸುಖವು ಎಂದು ಗೋಳಿಟ್ಟವರು : 'ಈಸಬೇಕು ಇದ್ದು ಜಯಿಸಬೇಕು! ಹೇಸಿಕೆಯು ಸಂಸಾರವಿದನು ಆಶೆ ಲೇಶವಿಲ್ಲದ ಹಾಗೆ!' ಎಂದು ಭಕ್ತಿವೀರನ ಸತ್ತ್ವಯುಕ್ತ ನುಡಿಗಳನ್ನು ಆಡುವರು. 'ಏಕೆನ್ನ ಈ ರಾಜ್ಯಕೆಳತಂದೆ ಹರಿಯೇ! ಸಾಕ ಲಾರದೆ ನನ್ನನೇಕೆ ಪುಟ್ಟಿಸಿದೆ?' ಎಂದು ಹೆದರಿ ದೇವರನ್ನು ಪೀಡಿಸಿದ ಶ್ರೀಪುರಂದರದಾಸರೇ ಮುಂದೆ :

'ಆರು ಮುನಿದು ನಮಗೆ ಏನ ಮಾಡುವರಯ್ಯ!
ಊರು ಒಲಿದು ನಮಗೆ ಏನ ಮಾಡುವುದಯ್ಯ!
ಕೊಡಬೇಡ ನಮ್ಮೊಡಲಿಗೆ ತುಸವನು
ಇಡಬೇಡ ನಮ್ಮ ಶುನಕಂಗೆ ತಳಿಗೆಯು
ಆನೆಯ ಮೇಲೆ ಬಪ್ಪನ ಶ್ವಾನ ಕಚ್ಚಲು ಬಲ್ಲುದೆ ?
ದೀನನಾಥ ನಮ್ಮ ಪುರಂವರವಿಠಲನಿರುವನಕ
ಆರು ಮುನಿದು ನಮಗೇನ ಮಾಡುವರಯ್ಯ!'

ಎಂದು ನಿರ್ಭೀತಭಾವದಿಂದ ಉಗ್ಗಡಿಸಿದ್ದಾರೆ. ಮೊದಮೊದಲು ದೇವನ ದರ್ಶನಕ್ಕಾಗಿ ಕಾತರಭಾವದಿಂದ ಕಾಡಿದ ದಾಸರೇ ಮುಂದೆ ಆತನ ಸಂಪೂರ್ಣ ಸ್ವರೂಪ ಜ್ಞಾನವಾದಮೇಲೆ,

"ಜಗದಂತರ್ಯಾಮಿ ನೀನು; ನಿನ್ನ ಬಟ್ಟಬಯಲೆಂದು
ಬಗೆವವನು ಜಗದೊಳಗೆ ಬ್ರಹ್ಮಹತ್ಯಾಕಾರಿ!
ಅಗಣಿತಗುಣ ನೀನು, ನಿನ್ನ ಗುಣಗಳಿಷ್ಟೆಂದು
ಬಗೆವವನು ಜಗದೊಳಗೆ ಸ್ವರ್ಣಸ್ತೇಯಿ!
ಜಗದೊಡೆಯ ನೀನಿರಲು ಅನ್ಯದೇವನು ಒಡೆಯನೆಂದು
ಬಗೆವವನು ಜಗದೊಳಗೆ ಮದ್ಯಪಾನಿ!
ಜಗದ ತಂದೆ ನೀನು, ನಿನ್ನ ದಾಸನೆಂದೆನಿಸದೆ ನೀನೆ ತಾನೆಂದು
ಬಗೆವವನೆ ಜಗದೊಳಗೆ ಗುರುತಲ್ಪಗಾಮಿ!
ಅದು ಕಾರಣದಿಂದ ನೀ ಸತ್ಯ, ನೀ ನಿತ್ಯ, ನೀ ಬಲ ನೀ—
ನಗಣಿತ ಗುಣನಿಲಯ, ನಿ ಸಕಲ ಸುಖಕಾರಣ
ಎಂದು ನಂಬಿದೆ ಸಲಹಯ್ಯ ಪುರಂದರವಿಠಲ!"

ಎಂದು ಭಕ್ತನ ಕೊನೆಯ ಮೆಟ್ಟಿಲಿನ ಮೇಲೆ ನಿಂತು, ತಾವು ಕಂಡ ದೇವನ ಸ್ವರೂಪವನ್ನು ಮಾತಿನಲ್ಲಿ ಮೂಡಿಸಿ ತೋರಿಸಿದ್ದಾರೆ.

ಮೊದಮೊದಲು ಶ್ರೀಹರಿಯ ಪ್ರಸನ್ನತೆಗಾಗಿ ಆತಂಕಪಟ್ಟುಕೊಂಡು
‘ ಹೇಗೆ ಅರ್ಚಿಸಲಿ ಮೆಚ್ಚಿಸಲಿ ನಿನ್ನ ? ’

ಎಂದು ಸಂದೇಹಮನಸ್ಕರಾಗಿ ಕೇಳಿದ ಶ್ರೀಪುರಂದರದಾಸರೇ ದ್ವೈತತಭಕ್ತಿ ತತ್ತ್ವಸಿದ್ಧರಾದಮೇಲೆ :

“ ಸುಲಭಪೂಜೆಯ ಕೇಳಿ ಬಲವಿಲ್ಲದವರು ।
ಕಾಲಕಾಲದ ಧರ್ಮ ಕಮಲಾಕ್ಷಗರ್ಪಿಸಿರಿ ॥ ಪ ॥

ಇರುಳು ಹಚ್ಚುವ ದೀಪ ಹರಿಗೆ ನೀರಾಜನವು
ಮರುವುಡುವ ಧೋತರವು ಪರಮವಸ್ತ್ರ ॥
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು
ಮರಳಿ ಹೊಡೆಮರಳುವುದೆ ನೂರೆಂಟು ದಂಡ ! ॥

ಎಂದು ನಿಶ್ಚಯಧ್ವನಿಯಲ್ಲಿ ಹೇಳಿರುತ್ತಾರೆ.

ಭಕ್ತನ ನಾಲ್ಕೂ ನೆಲೆಯ ಅನುಭವವಾಣಿಗಳೂ ಶ್ರೀಪುರಂದರದಾಸರ ಸಾಹಿತ್ಯದಲ್ಲಿ ನೋಡಲು ಸಿಕ್ಕುವುವು. ಅರ್ಥಾರ್ಥಿಸ್ಥಾನದಲ್ಲಿ ನಿಂತು, ಮಾನವ ಜೀವನಾವಶ್ಯಕ ಧರ್ಮ, ಅರ್ಥ, ಕಾಮ ಪುರುಷಾರ್ಥತ್ರಯಿಯನ್ನು ಕುರಿತು, ದಾಸರು ಸಾಹಿತ್ಯವನ್ನು ರಚಿಸತೊಡಗಿದಾಗ, ಅದು ವಿಶ್ವದ ಮಾನವತೆಯ ಆದರ್ಶಸಂದೇಶವಾಗಿ ನಿಲ್ಲುವುದು. ಶ್ರೀಪುರಂದರದಾಸರ ಸಾಹಿತ್ಯದಲ್ಲಿ ಇಂತಹ ನಿರ್ಮಿತಿಯೇ ಹೆಚ್ಚು ಪ್ರಮಾಣದಲ್ಲಿರುವುದು. ಮೋಕ್ಷ ಪುರುಷಾರ್ಥ ವನ್ನು ಕುರಿತೂ ಉಪಾಸನೆ-ದೈವಸಾಕ್ಷಾತ್ಕಾರವನ್ನು ಕುರಿತೂ ರಚಿಸಿದ ಅವರ ಸಾಹಿತ್ಯ, ದ್ವೈತೇತರ ತತ್ತ್ವವಾದಿಗಳಿಗೆ ಸ್ವಲ್ಪ ಬೇರೆ ಧ್ವನಿಯದಾಗಿ ಕಂಡೀತು, ಇಷ್ಟೇ ! ಈ ಸಂಕಲನದಲ್ಲಿ, ಶ್ರೀಪುರಂದರದಾಸರ ಹೃದಯದಲ್ಲಿ ನಡೆದ ಭಕ್ತಿ-ಭಾವ ವಿಕಾಸಬೋಧಕವಾದ ಹಾಡು—ಸುಳಾದಿ—ಉಗಾಭೋಗಗಳನ್ನು ಮಾತ್ರ ಸಂಗ್ರಹಿಸಲಾಗಿದೆ. ಭಕ್ತಿತತ್ತ್ವಾನುಯಾಯಿಗಳೆನಿಸಿಕೊಳ್ಳುವ ಎಲ್ಲರ ಅಭಿ-ರುಚಿಯನ್ನೂ ಇವು ತಣಿಸಲು ತಕ್ಕವುಗಳಾಗಿವೆ.

## ೫ ಶ್ರೀಪುರಂದರದಾಸರ ಜೀವನಚರಿತ್ರೆ

ಶ್ರೀಪುರಂದರದಾಸರ ಭಕ್ತರನೇಕರು, ನಮ್ಮ ಮೊದಲನೆಯ ಸಂಪುಟ ದಲ್ಲಿಯೇ ಪುರಂದರದಾಸರ ಜೀವನಚರಿತ್ರೆಯನ್ನು ನಿರೀಕ್ಷಿಸಿದ್ದರಂತೆ. ಈಗ ದಾಸರ ೪೦೦ನೆಯ ವರ್ಷದ ಪುಣ್ಯತಿಥಿಯ ಉತ್ಸವಕಾಲದಲ್ಲಿ ಪ್ರಕಟವಾಗ-ಲಿರುವ ಈ ಸಂಪುಟದಲ್ಲಾದರೂ ಅದು ಬರಬಹುದೆಂದು ಅವರು ನಿರೀಕ್ಷಿಸ ಬಹುದಾಗಿದೆ; ಆದರೆ ಅನಿವಾರ್ಯವಾಗಿ ಆ ಸಹೃದಯರನ್ನು ನಿರಾಶೆಗೊಳಿಸ ಬೇಕಾದ ಸಕಾರಣ ಸಂದರ್ಭ ಈಗಲೂ ಇರುವುದರಿಂದ, ನಾವು ವಿಷಾದ ಪಡಬೇಕಾಗಿದೆ.

ಸಾಮಾನ್ಯವಾಗಿ ನಮ್ಮ ಪ್ರಾಚೀನ ಭಾಗವತಪಂಥದ—ವೈಷ್ಣವ—ಕವಿಗಳ ವಾಸ್ತವಜೀವನವೃತ್ತ ದೊರೆಯುವುದು ದುರ್ಲಭವೆಂದೇ ಹೇಳಬಹುದು ತಮ್ಮ ವಿಷಯವನ್ನು ತಾವೇ ವಿವರವಾಗಿ ಹೇಳಿದ ಭಕ್ತಕವಿಗಳು ಹೆಚ್ಚಾಗಿ ದೊರೆ ಯುವುದೇ ಇಲ್ಲ. ಎಂತಲೇ ಕುಮಾರವ್ಯಾಸನಂತಹ ಕನ್ನಡ ಸಾಹಿತ್ಯಪ್ರಪಂಚದ ಸೀಮಾಪುರುಷನ ಕಾಲ—ದೇಶ—ಮತವಿಷಯಗಳು ಇನ್ನೂ ವಿವಾದಾಸ್ಪದ ವಾಗಿಯೇ ಉಳಿದಿವೆ. ಜನಪ್ರಿಯ ಭಕ್ತಕವಿಯಾದ ಲಕ್ಷ್ಮೀಶನ ಗೋತ್ರ-ಪಿತೃ ಗಳ ಹೆಸರುಗಳಷ್ಟು ಗೊತ್ತಾಗಿವೆಯಲ್ಲದೆ, ಆತನ ದೇಶಕಾಲಗಳ ನಿರ್ಣಯವು ಇನ್ನೂ ಆಗಿಲ್ಲ. ತೊರವೆಯ ರಾಮಾಣದ ಕವಿ ಕುಮಾರವಾಲ್ಮೀಕಿಯ ವಿಚಾ ರವೂ ಅಷ್ಟೇ ! ಅವನ ನಿಜವಾದ ಹೆಸರು ಕೂಡ ಗೊತ್ತಾಗಿಲ್ಲ. ಕನ್ನಡ ಭಾಗ-ವತದ ಕರ್ತೃಸ್ಥಾನವನ್ನು 'ನಿತ್ಯಾತ್ಮಶುಕ' 'ಚಾಟುವಿಠಲನಾಥ' ಎಂಬ ಅಜ್ಞಾತನಾಮಗಳು ಯಾವ ಕಾಲದಲ್ಲಿಯೋ ಹೇಗೋ ಆಕ್ರಮಿಸಿ ಕುಳಿತಿವೆ. ನಿಜವಾಗಿಯೂ ಆ ಗ್ರಂಥದ ಭಾಗಭಾಗಗಳನ್ನು ಪ್ರತ್ಯೇಕವಾಗಿ ರಚಿಸಿದ 'ಆರಾಧ್ಯೇಂದ್ರ' 'ಸದಾನಂದಯೋಗಿ' 'ನಿರ್ವಾಣನಾಥ' ಎಂಬ ಭಕ್ತ ಕವಿ ಗಳ ಹೆಸರನ್ನು ಕೇಳಿದವರೂ ನಮ್ಮಲ್ಲಿ ಬಹಳ ಜನ ಇರಲಾರರು. ಇವರಾರೂ ತಮ್ಮ ದೇಶ—ಕಾಲ—ವಂಶಗಳ ವಿವರವನ್ನು ಹೇಳಿಕೊಂಡಿಲ್ಲ. ಭಕ್ತಕವಿಗಳಿಗೆ ಪರಮಾತ್ಮಸಂಬಂಧದ ಕೃತಿರಚನೆಯೆ ಆದರ್ಶವಾಗಿದ್ದಿತಲ್ಲದೆ, ತಮ್ಮ ಹೆಸರು-ಕುಲಕಥೆಗಳನ್ನು ಮೆರೆಯಿಸುವುದು ಉದ್ದೇಶವಾಗಿರಲಿಲ್ಲ. ಇವರೆಲ್ಲರ ಕೃತಿಗಳೂ ಲೋಕಪ್ರಿಯವಾದುವು ಆದುದರಿಂದಲೇ ಇವರ ಕೃತಿಭಕ್ತರಿಂದ ಬೇರೆ ಬೇರೆ

ಕೃತಿಕಾರರ ವಿಷಯದಲ್ಲಿ ಅವಾಸ್ತವವಾದ ಅದ್ಭುತಪವಾಡದ ಕಥೆಗಳು ತಲೆ ಯೆತ್ತಿ ನಿಂತು, ಇವರ ವಾಸ್ತವಚರಿತ್ರೆಯನ್ನು ಮರೆಮಾಡಿಬಿಟ್ಟಿವೆ.

ಎಲ್ಲ ಭಕ್ತಕವಿಗಳಂತೆ ಪುರಂದರದಾಸರ ಜೀವನಚರಿತ್ರೆಯ ಗತಿಯೂ ಆಗಿದೆ. ಇವರ ಅಸ್ತಿತ್ವದ ಬಗೆಗೆ ಅಧಿಕೃತ-ಐತಿಹಾಸಿಕ-ಪ್ರಮಾಣವನ್ನು ಒದವಿ ಸುವುದೆಂದರೆ, ಹಂಪೆಯ ಬಳಿಯ ಕಾಮಲಾಪುರದಲ್ಲಿ, ಇತಿಹಾಸ ಸಂಶೋಧಕ ರಿಗೆ ದೊರೆತ ಸುಮಾರು ಕ್ರಿ. ಶ. ೧೫೩೦ನೆಯ ಇಸವಿಯ ತಾಮ್ರಶಾಸನ. ಶ್ರೀವ್ಯಾಸರಾಯ ಸ್ವಾಮಿಗಳು, ತಮಗೆ ವಿಜಯನಗರದ ಕೃಷ್ಣರಾಯನಿಂದ ದೊರೆತ ಭೂಮಿಯನ್ನು ಬೇರೆ ಬೇರೆ ಬ್ರಾಹ್ಮಣರಿಗೆ ದತ್ತಿಯಾಗಿ ಕೊಟ್ಟ ವೃತ್ತಾಂತವಿದೆ ಅದರಲ್ಲಿ. ದತ್ತಿ ಪಡೆದ ಬ್ರಾಹ್ಮಣರ ಪಟ್ಟಿಯಲ್ಲಿ ಪುರಂದರದಾಸರ ಮೂವರು ಮಕ್ಕಳ ಹೆಸರುಗಳೂ ಇವೆ. ೧ ಲಕ್ಷ್ಮಣದಾಸ, ೨ ಹೇಬಣದಾಸ, ೩ ಮಧ್ವಪತಿದಾಸ ಎಂಬುವೇ ಆ ಹೆಸರುಗಳು. ಇವರ ಗೋತ್ರ ವಸಿಷ್ಠ, ಯಜು ಶ್ಶಾಖೆಗೆ ಸೇರಿದ ಬ್ರಾಹ್ಮಣರಿವರು. ಇವರನ್ನು ಕುರಿತು 'ಪುರಂದರದಾಸಾ ತ್ಮಜಃ' ಎಂದು ಒಬ್ಬೊಬ್ಬರ ಹೆಸರುಗಳ ಹಿಂದೆಯೂ ಹೇಳಲಾಗಿದೆ. ಪುರಂದರ ದಾಸರ ಬಗೆಗೆ ದೊರೆಯುವ ಐತಿಹಾಸಿಕ ಪ್ರಮಾಣ ಸದ್ಯಕ್ಕಂತೂ ಇದು ಒಂದೇ ಒಂದು.

'**ಶ್ರೀಪುರಂದರದಾಸ ಮಾಹಾತ್ಮ್ಯ**' ಎಂಬ ಹೆಸರಿನ—೫ ಅಧ್ಯಾಯ ಗಳಿಂದ ಕೂಡಿದ—ಒಂದು ಸಂಸ್ಕೃತ ಭಾಷೆಯ ಚಿಕ್ಕ ಗ್ರಂಥವೂ ನಮಗೆ ದೊರೆತಿದೆ. ಆದರೆ ಅದರ ನಿರ್ಮಾಣಕಾಲ ೧೦೦ ವರ್ಷಗಳಿಗಿಂತ ಹಿಂದೆ ಹೋಗಲಾರದು. ಪುರಂದರದಾಸರ ವಿಷಯದಲ್ಲಿ ನಾಡಿನಲ್ಲಿ ಪ್ರಚಾರದಲ್ಲಿದ್ದ ಅದ್ಭುತ ಪವಾಡಗಳನ್ನೇ ಒಟ್ಟುಗೂಡಿಸಿ, ಸಂಸ್ಕೃತಪದ್ಯಗಳಲ್ಲಿ ಅದು ರಚನೆ ಗೊಂಡಿದೆ ಇಷ್ಟೇ! ಇತಿಹಾಸದ ಒರೆಗೆ ಹತ್ತಿ ನಿಲ್ಲಬಹುದಾದ ಒಂದೆ ಒಂದು ಜೀವನಘಟನೆಯೂ ಅದರಲ್ಲಿಲ್ಲ.

ಕನ್ನಡ ಲಿಖಿತಸಾಹಿತ್ಯದಲ್ಲಿ ಪುರಂದರದಾಸರ ಜೀವನಕ್ಕೆ ಸಂಬಂಧಿಸಿದ ಕೆಲವು ಮಾತುಗಳು ದೊರೆಯುವುವೆಂದರೆ, ಶ್ರೀವಿಜಯದಾಸರ ಹಾಡು—ಸುಳಾದಿಗಳಲ್ಲಿ; ಇವರ ಶಿಷ್ಯಪರಂಪರೆಗೆ ಸೇರಿದ ಕೆಲವರು ಮಾಡಿದ ಶ್ರೀಪುರಂದರದಾಸರ ವಿಷಯಕವಾದ ಪ್ರಾರ್ಥನಾಗೀತಗಳಲ್ಲಿ. ಪುರಂದರ ದಾಸರ ತರುವಾಯ ೧೫೦—೭೦ ವರ್ಷಗಳ ಮೇಲೆ ಹೇಳಿದ ಈ ಮಾತುಗಳಲ್ಲಿ

ವಾಸ್ತವಸಂಗತಿ ಎಷ್ಟು ಇದೆಯೆಂಬುದು, ಇನ್ನೂ ಸತ್ಯದ ಒರೆಗೆ ಹತ್ತಬೇಕಾಗಿದೆ. ಪುರಂದರದಾಸರ ಪೂರ್ವಾಶ್ರಮದ ನಾಮ-ಜನ್ಮಸ್ಥಳಗಳ ವಿಚಾರದಲ್ಲಿ, ಹರಿದಾಸ ಪರಂಪರೆಯಲ್ಲಿಯೆ ಅಭಿಪ್ರಾಯೈಕ್ಯವಿಲ್ಲ. ಈಗ ಪುರಂದರದಾಸರ ಜೀವನಚರಿತ್ರೆಯೆಂದು ಪ್ರಚಾರದಲ್ಲಿರುವುವು, ಭಾವುಕ ಭಕ್ತರು ಹೇಳುವ ಪವಾಡದ ಕಥೆಗಳು ಮಾತ್ರ. ಇವೆಲ್ಲ ಕಾರಣಗಳ ಮೂಲಕವಾಗಿಯೇ ಶ್ರೀಪುರಂದರದಾಸರ ಜೀವನಚರಿತ್ರೆಯನ್ನು ಒಮ್ಮೆಲೆ ಬರೆದು ದುಡುಕುವ ಕಾರ್ಯವನ್ನು ನಾವು ಮಾಡಿಲ್ಲ. ಆದರೆ ಒಂದು ಭರವಸೆಯನ್ನು ಮಾತ್ರ ನಾವು ಕೊಡುವೆವು; ಮುಂದೆ ಒರಲಿರುವ ದಾಸಸಾಹಿತ್ಯ ಸಂಪುಟ ನಾಲ್ಕರಲ್ಲಿ—ಯಾವುದಾದರೊಂದು ಭಾಗದಲ್ಲಿ — ಶ್ರೀಪುರಂದರದಾಸರ ಜೀವನಚರಿತ್ರೆಯನ್ನು ಕೊಡುತ್ತೇವೆ; ಅದಕ್ಕಾಗಿ ಸಾಧನಗಳನ್ನು ಕಲೆಹಾಕುತ್ತಲಿದ್ದೇವೆ. ಏನೇನನೋ ಬರೆದು ಪುರಂದರದಾಸರ ಜೀವನಚರಿತ್ರೆಯೆಂದು ಕೊಡುವುದು, ಪ್ರಾಮಾಣಿಕ ಸಂಶೋಧನೆಗೆ ಸಲ್ಲದುದೆಂದು ಬೇರೆ ಹೇಳಬೇಕಾಗಿಲ್ಲ.

## ೬ ಈ ಸಂಪುಟದಲ್ಲಿಯ ಸಾಹಿತ್ಯಸಂಗ್ರಹ

ನಾವಿಲ್ಲಿ ಹಾಡುಗಳ ಸಂಗ್ರಹಕ್ಕಾಗಿ ಮುದ್ರಿತಪುಸ್ತಕಗಳನ್ನು ಹೆಚ್ಚಾಗಿ ಅವಲಂಬಿಸಿಲ್ಲ. ನಮಗೆ ದೊರೆತ ಹಸ್ತಲಿಖಿತ ಪ್ರತಿಗಳಿಂದಲೇ ಅವುಗಳನ್ನು ಆಯ್ದು ಸಂಗ್ರಹಿಸಲಾಗಿದೆ. ಇದುವರೆಗೂ ಮುದ್ರಣವನ್ನು ಕಾಣದಿರುವ ಅನೇಕ ಹೊಸ ಹಾಡುಗಳನ್ನು ಇದರಲ್ಲಿ ನೋಡಬಹುದು. ಪ್ರಚಾರದಲ್ಲಿರುವ ವಿಕೃತಪಾಠಗಳ ಮೂಲಸ್ವರೂಪಗಳನ್ನೂ ಇಲ್ಲಿ ಕಂಡು ಗುರುತಿಸಬಹುದು. ಮೊದಲನೆಯ ಸಂಪುಟದ ಸಂಗ್ರಹಕಾಲದಲ್ಲಿ ಇಲ್ಲದ, ೩—೪ ಹಸ್ತಲಿಖಿತ ಪ್ರತಿಗಳು ಈಗ ಹೊಸತಾಗಿ ದೊರೆತಿವೆಯಾದರೂ, ಇನ್ನೂ ಹೆಚ್ಚುಹೆಚ್ಚಾಗಿ ಹಸ್ತ-ಪ್ರತಿಗಳನ್ನು ನಾವು ನಿರೀಕ್ಷಿಸುತ್ತಲಿದ್ದೇವೆ. ಧುಳೆಯ ಪುಸ್ತಕಭಾಂಡಾರದಲ್ಲಿರುವ ಹಸ್ತಪ್ರತಿಗಳನ್ನು ದೊರೆಕಿಸಿಕೊಳ್ಳಲಿಕ್ಕೆ ನಮಗೆ ಇದುವರೆಗೂ ಸಾಧ್ಯವಾಗಿಲ್ಲ.

ನಮಗೆ ದೊರೆತ ಹಸ್ತಲಿಖಿತ ಪ್ರತಿಗಳ ಸಂಖ್ಯೆ ಅಸಮಾಧಾನಕರವೆನಿಸುವಂತೇನೂ ಇಲ್ಲವೆಂಬುದು, ಈ ಸಂಪುಟದಲ್ಲಿಯೆ ಪ್ರತ್ಯೇಕವಾಗಿ ಪ್ರಕಟವಾಗಿರುವ ಆಕರಗ್ರಂಥಗಳ ಪಟ್ಟಿಯಿಂದ ಸ್ಪಷ್ಟವಾಗಿ ಕಂಡುಬರುವಂತಿದೆ.

ಕನ್ನಡನಾಡಿನ ಎಲ್ಲ ಭಾಗದ ಹಸ್ತಲಿಖಿತ ಪ್ರತಿಗಳನ್ನೂ ಶ್ರಮವಹಿಸಿ ಕೂಡಿಸ ಲಾಗಿದೆ. ಕೆಲವು ಜನ ಮಹನೀಯರು ಸ್ವಪ್ರೇರಣೆಯಿಂದಲೆ ಕಳುಹಿದ್ದಾರೆ; ಕೆಲವೊಂದು ಪ್ರತಿಗಳು ಹರಿದಾಸಪರಂಪರೆಯ ಮನೆತನಗಳಿಂದಲೇ ಬಂದು ವಾಗಿವೆ. ಶ್ರೀ. ಪಾಂಷ್ರೀ ಆಚಾರ್ಯರು, (ಬೆಳಗಾಂವಿ) ಶ್ರೀ. ಬೆಂಗೇರಿ ಯವರು, (ಹುಬ್ಬಳ್ಳಿ) ಶ್ರೀ. ಪರ್ವತೀಕರ ತಮ್ಮಣರಾಯರು, (ಧಾರವಾಡ) ಶ್ರೀ, ಗೊರಬಾಳ ಹನುಮಂತರಾಯರು (ಹೈದರಾಬಾದ್ ಕರ್ನಾಟಕ); ಕರ್ನಾಟಕ ವಿಶ್ವವಿದ್ಯಾಲಯದ ಸಂಶೋಧನ ಸಂಸ್ಥೆ (ಮದ್ರಾಸ್—ಮೈಸೂರು ಕರ್ನಾಟಕದ ಪ್ರದೇಶಗಳಲ್ಲಿ ದೊರೆತ ಪ್ರಾಚೀನಸಂಗ್ರಹ) ಇವರೆಲ್ಲರಿಂದ ದೊರೆತ ಹಸ್ತಲಿಖಿತ ಪ್ರತಿಗಳು ವಿಪುಲವಾಗಿದ್ದು, ಅನೇಕ ಹೊಸ ಸಾಹಿತ್ಯ ವನ್ನು ನಮಗೆ ಒದಗಿಸಿಕೊಟ್ಟಿವೆ. ಮೊನ್ನೆಮೊನ್ನೆ ನಮ್ಮ ಕೈಗೆ ಬಂದಿರುವ ನವಲಗುಂದದ ಶ್ರೀ. ಪಾಟೀಲರಿಂದ ದೊರೆತ ಹಸ್ತಪ್ರತಿಯು, ನಮಗೆ ಹೆಚ್ಚಿನ ಪ್ರಯೋಜನವನ್ನು ಒದವಿಸುವಂತಹದಾಗಿದೆ. ನೂರಾರು ವರ್ಷಗಳ ಹಿಂದೆ ಮುದ್ರಿತವಾದ ಕಲ್ಲಚ್ಚಿನ ಪ್ರತಿಗಳೂ ಮೊಳೆಯಚ್ಚಿನ ಪ್ರತಿಗಳೂ, ಪಾಠ-ಶುದ್ಧಿಯ ಕಾರ್ಯದಲ್ಲಿ ನಮಗೆ ತುಂಬ ನೆರವನ್ನು ನೀಡಿವೆ. ಈ ಮೂಲ-ಧನವು ನಮಗೆ ದೊರೆಯದೆ ಹೋಗಿದ್ದರೆ, ಸಂಶೋಧನಾ ಕಾರ್ಯದಲ್ಲಿ ನಾವು ನಿಷ್ಕ್ರಿಯರೇ ಆಗುತ್ತಿದ್ದೆವು. ಪರಮಾತ್ಮನ ಸಂಕೇತವೇ ಇದ್ದರೆ, ಎಲ್ಲ ಅನುಕೂಲತೆಗಳು ತಾವಾಗಿ ಒದಗುವುವಲ್ಲವೆ ?

ಬರೀ ಪುರಂದರದಾಸರ ಕೃತಿಗಳನ್ನಷ್ಟೇ ಬರೆದಿರಿಸಿದ ಪ್ರತಿಗಳು ನಮಗೆ-ದೊರೆತೇ ಇಲ್ಲ. ತಮ್ಮ ಪ್ರೀತಿಗಾಗಿಯೋ ಭಕ್ತಿಸಾಧನೆಗಾಗಿಯೋ—ಬೇಕೆನಿಸಿದ ಬೇರೆಬೇರೆ ದಾಸರ ಕೃತಿಗಳನ್ನು—ಯಾವುದೇ ಬಗೆಯ ಕ್ರಮವನ್ನೂ ಅನುಸರಿಸದೆ— ಸಿಕ್ಕಿಸಿಕ್ಕಿದ ಹಾಗೆ ಬರೆದು ಇರಿಸಿಕೊಂಡ ಹಸ್ತಪ್ರತಿಗಳೇ ಎಲ್ಲವೂ. ಶಬ್ದದೋಷ— ಲಿಪಿದೋಷಗಳಂತೂ ಹೇರಳವಾಗಿರುವುವು. ಓದಿ ರೂಢಿಯಿರದವರಿಗೆ ಆ ಹಸ್ತ ಪ್ರತಿಗಳನ್ನು ಒಮ್ಮೆಲೆ ಓದಲಿಕ್ಕೂ ಸಾಧ್ಯವಾಗದು. ಒಬ್ಬೊಬ್ಬ ಲೇಖಕರ ಬರೆಹದ ಮೋಡಿ ಒಂದೊಂದು ಬಗೆಯದಾಗಿರುವುದು. ಎಲ್ಲ ಮೋಡಿಗಳನ್ನೂ ಸಂಶೋಧಕರು ಪರಿಚಯ ಮಾಡಿಕೊಂಡು ನೆನಪಿಟ್ಟುಕೊಳ್ಳಲೇ ಬೇಕು. ದಕ್ಷಿಣದೇಶದ ಕೆಲವೊಂದು ಅಕ್ಷರಮೋಡಿಗಳನ್ನು ಗುರುತಿಸುವುದೆಂದರೆ ತುಂಬ ಕಠಿನವಿಷಯವಾಗಿ ಪರಿಣಮಿಸುತ್ತಲಿದೆ. ಕಾರ್ಯದ ವಿಷಯದಲ್ಲಿ ಪ್ರೀತಿ—

ಸಹಾನುಭೂತಿಗಳು, ಮನದ ತಾಳ್ಮೆ ಇವು ಇಲ್ಲದೆ ಹೋದರೆ, ಈ ಸಂಶೋಧನೆಯ ಕಾರ್ಯ ಮುಂದುವರಿಯುವಂತೆಯೇ ಇಲ್ಲ. ಕೇವಲ ಕೂಲಿಯಿಂದ ಈ ಕೆಲಸ ಸಾಧ್ಯವಾಗಲಾರದು.

ನಮ್ಮ ಸಂಶೋಧನೆಯಲ್ಲಿಯ ಮೊದಲನೆಯ ಕಾರ್ಯವೆಂದರೆ, ಹಸ್ತಲಿಖಿತ ಪ್ರತಿಗಳನ್ನು ಆಮೂಲಾಗ್ರವಾಗಿ ಓದಿ, ಪುರಂದರದಾಸರ ಅಂಕಿತದ ಹಾಡು-ಕೀರ್ತನೆಗಳನ್ನು ಆಯ್ದು ಗುರುತಿಸುವುದು. ಬಳಿಕ ಆ ಹಾಡುಗಳ ಅಕಾರಾದಿ ಅನುಕ್ರಮಣಿಕೆಯನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಸಿದ್ಧಗೊಳಿಸುವುದು. ಇದರಿಂದ ಯಾವ ಯಾವ ಪ್ರತಿಗಳಲ್ಲಿ ಯಾವ ಯಾವ ಹಾಡು—ಕೀರ್ತನೆಗಳು ಇವೆಯೆಂಬುದನ್ನು, ಒಮ್ಮೆಲೆ ಗುರುತಿಸಲು ಅನುಕೂಲವಾಗುವುದು. ಒಂದೆ ಒಂದು ಹಾಡು ಯಾವ ಯಾವ ಪ್ರತಿಗಳಲ್ಲಿ ದೊರೆಯುವುದೆಂಬುದನ್ನು ಕಂಡು ಕೊಳ್ಳಲೂ ಸುಲಭವಾಗುವುದು ಆ ಪ್ರತಿಯಲ್ಲಿ ಮಾತ್ರ ದೊರೆಯುವ ಹೊಸ ಹಾಡು ಯಾವುದೆಂಬುದೂ ಗೊತ್ತಾಗುವುದು.

ಒಂದು ಹಾಡನ್ನು ಸಂಶೋಧನೆಗೆ ತೆಗೆದುಕೊಳ್ಳುವಾಗ, ಬೇರೆ ಬೇರೆ ಹಸ್ತಪ್ರತಿಗಳ ಅಕಾರಾದಿ ಅನುಕ್ರಮಣಿಕೆಯ ಸಹಾಯದಿಂದ, ಯಾವ ಯಾವ ಪ್ರತಿಗಳಲ್ಲಿ ಆ ಹಾಡು ಇದೆಯೆಂಬುದನ್ನು ಕಂಡು ಹಿಡಿದು. ಆ ಎಲ್ಲ ಪ್ರತಿಗಳಲ್ಲಿಯೂ ಇರುವ ಆ ಹಾಡನ್ನು ತುಲನಾತ್ಮಕ ದೃಷ್ಟಿಯಿಂದ ಓದಿ ಅಭ್ಯಸಿಸಲಾಗುವುದು. ತರುವಾಯ ಬೇರೆ ಬೇರೆ ಪ್ರತಿಗಳಲ್ಲಿಯ ಆ ಹಾಡಿನ ಯುಕ್ತ-ಪಾಠಗಳನ್ನೂ, ಅಪಪಾಠಗಳನ್ನೂ, ಶಬ್ದ—ಅಕ್ಷರಗಳ ದೋಷಗಳನ್ನೂ ಕಂಡು ಹಿಡಿದು, ಯೋಗ್ಯಪಾಠವನ್ನು ಸ್ವೀಕರಿಸಿ ಅಪಪಾಠಗಳನ್ನು ಬಿಟ್ಟುಕೊಟ್ಟು, ಶಬ್ದ—ಅಕ್ಷರದೋಷಗಳನ್ನು ಸರಿಪಡಿಸಿಕೊಂಡು, ಆ ಹಾಡಿನ ಸಂಶೋಧಿತ ಪ್ರತಿಯನ್ನು ಸಿದ್ಧಗೊಳಿಸಲಾಗುವುದು. ಯುಕ್ತಪಾಠಗಳು ಒಂದಕ್ಕಿಂತ ಹೆಚ್ಚಾಗಿ ದೊರೆತರೆ, ಒಂದು ಪಾಠವನ್ನು ಹಾಡಿಗೆ ಸೇರಿಸಿಕೊಂಡು, ಮಿಕ್ಕುವುಗಳನ್ನು ಪಾಠಾಂತರವೆಂದು ಅಡಿಟಿಪ್ಪಣಿಯಲ್ಲಿ ಕೊಡಲಾಗುವುದು.

ಈ ಬಗೆಯ ಸಂಶೋಧನಾಕ್ರಮದ ಮೂಲಕ, ಸದ್ಯ ಜನರ ಬಾಯಿ—ಕಿವಿಗಳಲ್ಲಿ ರೂಢವಾಗಿರುವ ಹಾಡುಗಳಿಗಿಂತ ಸಂಶೋಧಿತಹಾಡುಗಳು ಭಿನ್ನಪಾಠಗಳಿಂದ ಕೂಡಿದುವಾಗಿ ತೋರುವುದು ಸ್ವಾಭಾವಿಕವಾಗಿದೆ. ಇದಕ್ಕಾಗಿ ಯಾರೂ

ಬೆದರಿಬೀಳುವ ಕಾರಣವಿಲ್ಲ; ನಮ್ಮ ಸಂಶೋಧನಾಕಾರ್ಯವನ್ನು ಸಂದೇಹ ಭಾವದವರಾಗಿ ನೋಡಬೇಕಿಲ್ಲ ತಮ್ಮ ಪರಿಚಿತಪಾಠಕ್ಕೂ ಸಂಶೋಧಿತಪಾಠಕ್ಕೂ ಇರುವ ಹೆಚ್ಚು-ಕಡಮೆಗಳನ್ನು ತುಲನಾತ್ಮಕ ರೀತಿಯಿಂದ ಒರೆಗೆ ಹಚ್ಚಿ ನೋಡ ಬೇಕು, ಆಗ ಪಾಠಭೇದದ ಔಚಿತ್ಯ ಅವರಿಗೆ ಕಂಡುಬಾರದಿರದು. ಯಾವುದೇ ಸಂಶೋಧನಾಕಾರ್ಯ, ಸತ್ಯವನ್ನು ಹುಡುಕಿ ಹೊರಗೆ ತರುವುದಕ್ಕಾಗಿ ಇರುವು ದೆಂಬುದನ್ನು ಯಾರೂ ಮರೆಯಲಾಗದು. ಆದುದರಿಂದ ನಮ್ಮ ಕಾರ್ಯ ಕ್ಕಾಗಿ ಕನ್ನಡಿಗರೆಲ್ಲರ ಸೌಹಾರ್ದ—ಸಹಾನುಭೂತಿಗಳನ್ನು ಅಪೇಕ್ಷಿಸುತ್ತೇವೆ.

## ೭ ರಾಗ-ತಾಳಗಳ ವಿಷಯವೇನು ?

ಪುರಂದರದಾಸರು ಕರ್ನಾಟಕಸಂಗೀತಪ್ರಪಂಚದಲ್ಲಿ ಆಚಾರ್ಯಪುರುಷ ರೆಂದು ಹೆಸರುವಾಸಿಯನ್ನು ಪಡೆದವರು. ಅವರ ಕಾಲದಲ್ಲಿ, ಉತ್ತರದಲ್ಲಿ ಈಗ ಬೆಳೆದು ಫಲಭರಿತವಾಗಿ ನಿಂತಿರುವ ಹಿಂದುಸ್ತಾನೀ ಸಂಗೀತಪದ್ಧತಿಯು ಇನ್ನೂ ಅಂಕುರಾವಸ್ಥೆಯಲ್ಲಿ ಇದ್ದಿರಬಹುದು. ಪುರಂದರದಾಸರು ರಚಿಸಿದ ಸಂಗೀತ-ಶಾಸ್ತ್ರಗ್ರಂಥವಾವುದೂ ಉಪಲಬ್ಧವಿಲ್ಲವಾದರೂ, ಅವರು ಸಂಗೀತಪಿತಾಮಹ ರೆಂಬುದನ್ನು, ಸಂಪೂರ್ಣ ದಕ್ಷಿಣಭಾರತವು ಹಿಂದೆಯೂ ಒಪ್ಪಿಕೊಂಡಿದೆ; ಇಂದೂ ಒಪ್ಪಿಕೊಳ್ಳುತ್ತಿದೆ. ಇಂತಹ ಸಂಗೀತನಿಪುಣರಿಂದ ರಚಿತವಾದ ಹಾಡು-ಕೀರ್ತನೆಗಳು, ಅವರು ಪ್ರಭುತ್ವವನ್ನು ಸಂಪಾದಿಸಿದ್ದ ಕರ್ನಾಟಕ ಸಂಗೀತ ಪದ್ಧತಿಯ ರಾಗ—ತಾಳಗಳನ್ನೇ ಅನುಸರಿಸಿರುವುದು ಸ್ವಾಭಾವಿಕ. ಆದರೆ ಇಂದು ಉತ್ತರಕರ್ನಾಟಕದಲ್ಲಿ ಪುರಂದರದಾಸರ ಕೀರ್ತನೆ—ಹಾಡುಗಳನ್ನು, ಇಲ್ಲಿಯ ಸಂಗೀತಗಾರರು ಪರಂಪರೆಯ ರಾಗ-ತಾಳ-ಮಟ್ಟುಗಳಲ್ಲಿ ಹೇಳುವುದಿಲ್ಲ; ತಮ್ಮ ಮನಸ್ಸಿಗೆ ಬಂದ ರೀತಿಯ ರಾಗ—ತಾಳಗಳಲ್ಲಿ ಹೇಳುತ್ತಾರೆ. ದಕ್ಷಿಣಭಾರತದಲ್ಲಿ ಕರ್ನಾಟಕಸಂಗೀತಪದ್ಧತಿಯಲ್ಲಿಯೆ ಹೇಳುವರಾದರೂ, ಪುರಂದರದಾಸೋಕ್ತ ರಾಗ—ತಾಳ—ಮಟ್ಟುಗಳೆ ಉಳಿದಿವೆಯೆಂದು ಹೇಳಲು ಬರುವಂತಿಲ್ಲ. ಆದುದ ರಿಂದ ನಾವು ಪುರಂದರದಾಸರ ಹಾಡುಗಳ ತಲೆಯ ಮೇಲೆ ರಾಗ—ತಾಳಗಳ ನಾಮನಿರ್ದೇಶ ಮಾಡುವಾಗ, ಯಾವ ಸ್ವಾತಂತ್ರ್ಯವನ್ನೂ ವಹಿಸದೆ, ಪ್ರಾಚೀನ ಹಸ್ತಪ್ರತಿಗಳಲ್ಲಿ ಇರುವ ರಾಗ—ತಾಳಗಳ ಹೆಸರುಗಳನ್ನೇ ಹಾಕಿರುವೆವು. ಪ್ರಾಚೀನ ಹಸ್ತಪ್ರತಿಗಳು ರಾಗ—ತಾಳಗಳನ್ನು ಹೇಳದಿರುವಲ್ಲಿ, ಉತ್ತರ ಕರ್ನಾ

ಟಕದಲ್ಲಿ ಪರಂಪರಾಗತವಾಗಿ ಹೇಳುತ್ತ ಬಂದಿರುವ ಧಾಟಿಗಳನ್ನು ಕೇಳಿ ತಿಳಿದು, ಅವುಗಳಿಗೆ ಅನುಸಾರವಾಗಿ ರಾಗ–ತಾಳಗಳನ್ನು ಹೊಂದಿಸಿ ಬರೆದಿದ್ದೇವೆ. ಯಾವನಾದರೂ ಸಂಗೀತಗಾರ, ತಾನು ಹೇಳುವ ಧಾಟಿಯೇ ಸರಿಯೆಂದೂ, ಅದಕ್ಕನುಗುಣವಾದ ರಾಗ–ತಾಳಗಳನ್ನೇ ಹಾಕಬೇಕೆಂದೂ ಹಟಹಿಡಿದು ವಾದಿಸ ತೊಡಗಿದರೆ, ಅವರೊಂದಿಗೆ ಪ್ರತಿವಾದ ಹೂಡಲು ನಮಗೆ ಮನಸ್ಸಿಲ್ಲ; ಅದು ಕರ್ತವ್ಯವೂ ಅಲ್ಲ. ಮಾಡಬೇಕಾದ ಕಾರ್ಯವನ್ನು ನಾವು ಪ್ರಾಮಾಣಿಕವಾಗಿ ಮಾಡಿರುವೆವೆಂಬ ಸಮಾಧಾನ ನಮಗೆ ಇದ್ದೇ ಇದೆ.

## ೮ ಶಬ್ದಾರ್ಥ-ಸಂದರ್ಭಕಥೆ-ವಿವರಣೆ

ಈ ವಿಭಾಗವು ಮೊದಲ ಸಂಪುಟದಷ್ಟು ವಿಸ್ತಾರವಾಗಿಲ್ಲ, ನಿಜ—ಇದಕ್ಕೆ ಕಾರಣ ಇಲ್ಲದೆ ಇಲ್ಲ. ಮೊದಲನೆಯ ಸಂಪುಟವು ಹರಿದಾಸರ ಉಪಾಸನಾ ಪದ್ಧತಿಯ ಪ್ರಮೇಯಗಳಿಂದ ಕೂಡಿದ್ದಿತು. ಅದಕ್ಕಾಗಿ ಗ್ರಂಥಾಂತರಗಳಿಂದ ಅನೇಕ ವಿವರಣೆಗಳನ್ನು ಹುಡುಕಿ ಸಮಾಖ್ಯಾರೂಪದಿಂದ ಪ್ರಕಟಿಸಬೇಕಾಯಿತು. ಮೊದಲಭಾಗದಲ್ಲಿ ಅನಿವಾರ್ಯವಾಗಿ ಹೇಳಬೇಕಾದ ಪುರಾಣಸಂದರ್ಭಕಥೆ ಗಳನ್ನು, ಇಲ್ಲಿ ಮತ್ತೆ ಪುನರುಕ್ತಗೊಳಿಸುವುದೇಕೆಂದು ಅವುಗಳನ್ನು ಬಿಟ್ಟು, ಕೇವಲ ಹೊಸತಾಗಿ ಹೇಳಬೇಕಾದ ಕೆಲವನ್ನು ಮಾತ್ರ ಕೊಡಲಾಗಿದೆ. ಕಠಿನ ಶಬ್ದಾರ್ಥಗಳ ಸಂಖ್ಯೆಯೂ ಇಲ್ಲಿ ಕಡಮೆಯಾಗಿರುವುದಕ್ಕೆ, ಹಿಂದಿನ ಸಂಪುಟದಲ್ಲಿ ಹೇಳಿರುವ ಬಹು ಸಂಖ್ಯಾಕ ಶಬ್ದಾರ್ಥಗಳನ್ನು ಹೇಳದಿರುವುದೇಕಾರಣವಾಗಿದೆ.

ಎಲ್ಲ ಪುರಾಣಗಳನ್ನೂ ಓದಿ ಪ್ರಭುತ್ವ ಸಂಪಾದಿಸಿದ ಪುರಾಣವಿಶಾರದರ ಕೊರತೆ ನಮ್ಮನ್ನು ಮತ್ತೆಮತ್ತೆ ಬಾಧಿಸುತ್ತಲಿದೆ. ನಾವಿದ್ದ ಪರಿಸರದಲ್ಲಿ ಅಂತಹ ಪುರಾಣಾಭ್ಯಾಸಿಗಳು ಇಲ್ಲವೇ ಇಲ್ಲವೆಂದು ಹೇಳಿದರೆ, ಯಾರೂ ತಪ್ಪಾಗಿ ಭಾವಿಸಲಾರರೆಂದು ನಮ್ಮ ಎಣಿಕೆ. ಆದರೂ ಒಬ್ಬಿಬ್ಬರು ಪುರಾಣ ಪಂಡಿತರು ನಮ್ಮ ಪೀಡೆಯನ್ನು ಸಹಿಸಿ, ನಮಗೆ ಅಗತ್ಯವಿದ್ದ ಕೆಲವೊಂದು ಪುರಾಣಸಂದರ್ಭಗಳನ್ನು ಹುಡುಕಿಕೊಡುವ ಉಪಕಾರವನ್ನು ಮಾಡಿದರು. ಅದಕ್ಕಾಗಿ ಆ ಪುರಾಣಪಂಡಿತರಿಗೆ ನಮ್ಮ ಆದರಪೂರ್ವಕ ವಂದನೆಗಳನ್ನು ಸಲ್ಲಿಸುವೆವು.

## ೯. ಅಭಿನಂದನೆ-ಅಭಿವಂದನೆ

ನಮ್ಮ ಸಂಶೋಧನೆಯ ಕಾರ್ಯದಲ್ಲಿ ಅನೇಕರ ಸಹಕಾರ ನಮಗೆ ಅವಶ್ಯವೆನಿಸಿತು. ನಾವು ಬಿನ್ನವಿಸಿಕೊಂಡೊಡನೆಯೆ ಪ್ರೀತಿಯಿಂದ ಯುಕ್ತ ಸಹಕಾರವನ್ನಿತ್ತ ಹಿರಿಯರಿಗೂ ಸ್ನೇಹಿತರಿಗೂ ನಮ್ಮ ಪ್ರೀತಿಯ ವಂದನೆಗಳು.

ಹಸ್ತಲಿಖಿತ ಪ್ರತಿಗಳನ್ನು—ಯಾವ ಕರಾರನ್ನೂ ಹಾಕದೆ – ನಮ್ಮ ಕಡೆಗೆ ಸ್ವಸಂತೋಷದಿಂದ ಒಪ್ಪಿಸಿ, ನಮ್ಮ ಕಾರ್ಯಕ್ಕೆ ಮೂಲಾಧಾರವೆನಿಸಿದ ಮಹನೀಯರಿಗೆ ನಾವೆಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಅದು ಕಡಮೆ ಯೆನಿಸುವಂತಿದೆ,

'ಪೂಜಾತತ್ತ್ವ'ಕ್ಕೆ ಪ್ರೀತಿಯ ಸ್ವಾಗತವನ್ನು ನಲ್ಲಿಸಿದ ಪುರಂದರದಾಸರ ಅಭಿಮಾನಿವರ್ಗ, ಈ 'ಆರ್ತಭಾವ'ವನ್ನೂ ಅದೇ ಬಗೆಯ ಪ್ರೀತಿಯಿಂದ ಸ್ವಾಗತಿಸಿ ಆದರಿಸುವುದೆಂದು ನಮ್ಮ ನಂಬುಗೆ.

ಇನ್ನು ಮುಂದಿನ ಸಂಪುಟ 'ಮಾಹಾತ್ಮ್ಯಜ್ಞಾನ'. ಅದರ ಮುಂದಿನವಾಗಿ ಕ್ರಮವಾಗಿ ಪ್ರಕಟವಾಗುವ ಸಂಪುಟಗಳೆಂದರೆ 'ಕೃಷ್ಣಲೀಲೆ' 'ಲೋಕನೀತಿ' 'ಸಂಕೀರ್ಣಸಂಗ್ರಹ' ಎಂಬುವು. ಅವೆಲ್ಲವುಗಳನ್ನೂ ಸಕಾಲದಲ್ಲಿ ಕನ್ನಡಿಗರ ಕೈಯಲ್ಲಿ ಇರಿಸುವ ಸುಯೋಗವನ್ನು ಶ್ರೀಪುರಂದರದಾಸರ ಹೃದಂತರ್ಯಾಮಿ ಯಾದ ಶ್ರೀರುಕ್ಮಿಣೀವಲ್ಲಭವಿಟ್ಠಲನು, ಬೇಗನೆ ತರಲೆಂದು, ನಮ್ಮ ಈ ಮಾತು ಗಳ ಕೊನೆಯಲ್ಲಿ ಪ್ರಾರ್ಥಿಸುವೆವು. ಹೆಚ್ಚಿನ ನೆರವಿಗಾಗಿ ಕನ್ನಡ ಜನತೆಯಲ್ಲಿ ಬೇಡಿಕೊಳ್ಳುವೆವು.

ದಿನಾಂಕ : ೧೧-೧೨-೧೯೬೩
ಧಾರವಾಡ

**ಬೆಟಗೇರಿ ಕೃಷ್ಣಶರ್ಮ**
**ಬೆಂಗೇರಿ ಹುಚ್ಚರಾಯ**

# ದಾಸಸಾಹಿತ್ಯದ ಆಕರಗಳು

## (ಅ) ಪಾಂಘ್ರಿ ಮನೆತನದ ಸಂಗ್ರಹ, (ಬೆಳಗಾಂವಿ)

| ಅ.ನಂ. | ಹಸ್ತಪ್ರತಿಯಸಂಕೇತ | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|
| ೧ | ಅ(೧) | ನೀಲಿಹೊತ್ತಿಗೆ | ಕನ್ನಡ | ೮೫ | ೧೮೭೫ |
| ೨ | ಅ(ಬಿಡಿ ೧) | ಬಿಡಿಕಾಗದಗಳು | ಕನ್ನಡ–ದೇವನಾಗರಿ | ೨೪ | ೧೮೯೦ |
| ೩ | ಅ(ಬಿಡಿ ೨) | ,, | ,, ,, | ೧೮ | ,, |
| ೪ | ಅ(ಬಿಡಿ ೩) | ,, | ,, ,, | ೨೮ | ,, |
| ೫ | ಅ(ಬಿಡಿ ೪) | ,, | ,, ,, | ೧೬ | ,, |
| ೬ | ಅ(ಬಿಡಿ ೫) | | | ೫೫ | ೧೨೭೫ |
| ೭ | ಅ(ಬಿಡಿ ೬) | ,, | ,, ,, | ೧೦ | ,, |
| ೮ | ಅ(೭) | ಕೋರಿಕಾಗದ | ದೇವನಾಗರಿ | ೩೫ | ೧೮೫೦ |
| ೯ | ಅ(೮) | ,, | ,, | ೮೫ | ,, |
| ೧೦ | ಅ(೧೧) | ,, | ,, | ೮೨ | ,, |

## (ಆ) ಬೆಂಗೇರಿ ಮನೆತನದ ಸಂಗ್ರಹ (ಹುಬ್ಬಳ್ಳಿ)

| ಅ.ನಂ. | ಹಸ್ತಪ್ರತಿಯ ಸಂಕೇತ | | ಲಿಪಿ | ಹಾಡುಗಳ ಸಂಖ್ಯೆ | ಕಾಲ |
|---|---|---|---|---|---|
| ೧೧ | ಆ (I) | ಹಸ್ತಪ್ರತಿ ಬಿಳಿಹಾಳಿ | ಕನ್ನಡ | ೮ | ೧೮೯೦ |
| ೧೨ | ಆ (II) | ,, ,, | ,, | ೩೦ | ,, |
| ೧೩ | ಆ (IIb) | ,, ,, | ,, | ೧೫ | ೧೯೦೦ |
| ೧೪ | ಆ (IIx) | ಕೋರಿಕಾಗದ | ದೇವನಾಗರಿ | | ೧೮೭೫ |
| ೧೫ | ಆ (VI) | ನೀಲಿಹೊತ್ತಿಗೆ | ,, | ೭೧ | ,, |
| ೧೬ | ಆ (೨) | ಕೋರಿ ಕಾಗದ | ,, | ೨೫ | ,, |
| ೧೭ | ಆ (a) | ಹಸ್ತಪ್ರತಿ | ,, | ೩೬ | ೧೮೮೫ |
| ೧೮ | ಆ (c) | ,, | ,, | ೧೫ | ೧೯೦೦ |

| | | | | | |
|---|---|---|---|---|---|
| ೧೯ | ಆ (d) | ,, | ,, | ೫ | ,, |
| ೨೦ | ಆ (E) | ,, | ,, | ೧೫ | ,, |
| ೨೧ | ಆ (F) | ಬಿಡಿಹಾಳೆ | ,, | ೧ | ,, |
| ೨೨ | ಆ (G) | ಹಸ್ತಪ್ರತಿ | ,, | ೧೦ | ,, |
| ೨೩ | ಆ (H) | ,, | ಕನ್ನಡ | ೧೫ | ,, |
| ೨೪ | ಆ (I) | ,, | ದೇವನಾಗರಿ | ೫ | ,, |
| ೨೫ | ಆ (J) | ಬಿಡಿಹಾಳೆ | ,, | ೧ | ,, |
| ೨೬ | ಆ (K) | ,, | ,, | ೨ | ,, |
| ೨೭ | ಆ (M) | ಹಸ್ತಪ್ರತಿ | ,, | ೫ | ,, |
| ೨೮ | ಆ (O) | ,, | ಕನ್ನಡ | ೨೫ | ೧೯೦೦ |
| ೨೯ | ಆ (P) | ಹಸ್ತಪ್ರತಿ | ಕನ್ನಡ | ೮೨ | ೧೮೯೦ |
| ೩೦ | ಆ (ಶ I) | ಮುದ್ರಿತ ಪುಸ್ತಕ | ಕನ್ನಡ | ೬೦ | ? |
| ೩೧ | ಆ (ಹ) | ,, ,, | ತೆಲುಗು | ೪೭ | ೧೯೧೪ |

## (ಇ) ಗೊರಾಬಾಳ ಹಣಮಂತರಾಯರ ಸಂಗ್ರಹ (ಲಿಂಗಸೂಗೂರು)

| | | | | | |
|---|---|---|---|---|---|
| ೩೨ | ಇ (೧೦) | ಕೋರಿಕಾಗದ ಪ್ರತಿ | ದೇವನಾಗರಿ | ೧೦೬ | ೧೮೫೦ |
| ೩೩ | ಇ (೧೨) | ದಪ್ಪಕಾಗದ ,, | ,, | ೪ | ೧೮೮೦ |
| ೩೪ | ಇ (೧೩) | ತಿಳಿ ,, ,, | ,, | ೨೮ | ,, |
| ೩೫ | ಇ (೧೪) | ,, ,, ,, | ,, | ೧೦ | ,, |
| ೩೬ | ಇ (೧೫) | ,, ,, ,, | ,, | ೨೫ | ,, |
| ೩೭ | ಇ (ಕ್ಷ) | ನೀಲಿಹಾಳಿ ,, | ಕನ್ನಡ | ೨೫ | ೧೮೯೦ |
| ೩೮ | ಇ (೧೬) | ಮುದ್ರಿತಪ್ರತಿ | ,, | ೫ | ? |

## (ಈ) ಚೀಕಲಪರಿವೆ ಮೋಲಪ್ಪನವರ ಸಂಗ್ರಹ (ಮಾನವಿ)

| | | | | | |
|---|---|---|---|---|---|
| ೩೯ | ಈ | ದಪ್ಪಕಾಗದದ ಪ್ರತಿ | ಕನ್ನಡ–ದೇವನಾಗರಿ | ೫ | ೧೯೧೦ |

## (ಉ) ಮುಗಳಿ ಭುಜಂಗರಾಯರ ಸಂಗ್ರಹ (ಗದಗ)

| | | | | | |
|---|---|---|---|---|---|
| ೪೦ | ಉ | ಬಿಳಿಕಾಗದ ಹಸ್ತಪ್ರತಿ | ಕನ್ನಡ | ೮೬ | ೧೯೧೦ |

## (ಊ) ಮುದ್ರಿತ ಆಬಾಜಿ ರಾ. ಸಾವಂತ (ಬೆಳಗಾಂವಿ)

೪೧ ಊ (ಖ) ದಾಸರಪದಗಳ ಸಂಗ್ರಹ (ಸಂ ೧) ದೇವನಾಗರಿ ೫೦ ೧೮೮೦
೪೨ ಊ (ಘ) ,, ,, (,, ೨) ,, ೪೦ ,,
೪೩ ಊ (ಚ) ,, ,, (,, ೩) ,, ೩೫ ,,
೪೪ ಊ (ಕ) ,, ,, (೫೦) ,, ೫೦ ೧೮೯೪

## (ಎ) ಸುಬೋಧ ರಾಮರಾವ (ಬೆಂಗಳೂರು)

೪೫ ಎ ಪ್ರಕಟಿತ ಪುರಂದರದಾಸರ ಕೃತಿಗಳು ೧ ೩೬೬ ೧೯೨೬
,, ,, ೨ ೨೯೭ ,,

## (ಏ) ಚಿಟಗೇರಿ ಕೃಷ್ಣಶರ್ಮರ ಸಂಗ್ರಹ (ಧಾರವಾಡ)

೪೬ ಏ (೧) ಹಸ್ತಪ್ರತಿ ಕೋರೀಕಾಗದ ದೇವನಾಗರಿ ೩೨ ೧೮೮೦
೪೭ ಏ (೨) ಬಿಳಿಹಾಳೆ ಕನ್ನಡ ೨೯ ೧೮೯೦
ಮ. ಮುದ್ರಿತ ಕನ್ನಡ ೧೧೧ ೧೮೭೩

## (ಐ) ಮದ್ರಾಸಿನ ಪ್ರಕಟನೆ (ಮದ್ರಾಸು)

೪೮ ಐ ಹರಿಭಜನೆ ಕೀರ್ತನೆಪ್ರಬಂಧ ಮುದ್ರಿತ, ಕನ್ನಡ ೫೦ ೧೮೭೮

## (ಒ) ಸುಳಾದಿ ಪದಗಳು (ಆ. ರಾ. ಸಾವಂತ ಬೆಳಗಾಂವಿ)

೪೯ ಒ ಮುದ್ರಿತ ದೇವನಾಗರಿ ಲಿಪಿ ೨೫ ೧೯೦೮

## (ಓ) ಸಾವಂಜಿ ಗುರುರಾಯರ ಸಂಗ್ರಹ (ಉಡುಪಿ)

೫೦ ಓ ಮುದ್ರಿತ ೧–೫ ಕನ್ನಡ ೧೨೦೦ ೧೯೦೬

## (ಕ) ಸಾವಂಜಿ ಗುರುರಾಯರ ಉದಯರಾಗ (ಉಡುಪಿ)

೫೧ ಕ ಮುದ್ರಿತಪ್ರತಿ ಕನ್ನಡ ೨೫ ೧೯೨೬

## (ಖ ೧) ಹೆಬ್ಬಳ್ಳಿ ಅಣ್ಣಾರಾಯರ ಸಂಗ್ರಹ (ಧಾರವಾಡ)

೫೨ ಖ ೧ (೧) ಹಸ್ತಪ್ರತಿ ಬಿಳಿಕಾಗದ ಕನ್ನಡ ೧೬ ೧೯೦೦
೫೩ ಖ ೧ (೨) ,, ,, ,, ೩ ,,

| | | | | | |
|---|---|---|---|---|---|
| ೫೪ | ಖ ೧ (೩) | ,, | ,, | ,, | ೧ | ,, |
| ೫೫ | ಖ ೧ (೪) | ,, | ,, | ,, | ೫೫ | ,, |
| ೫೬ | ಖ ೧ (೫) | ,, | ,, | ,, | ೧೨ | ,, |
| ೫೭ | ಖ ೧ (೬) | ,, | ,, | ,, | ೧೮ | ,, |
| ೫೮ | ಖ ೧ (೭) | ,, | ದೇವನಾಗರಿ ಲಿಪಿ | ,, | ೬೦ | ,, |
| ೫೯ | ಖ ೧ (೮) | ,, | ಕನ್ನಡ | ,, | ೪ | ,, |
| ೬೦ | ಖ ೧ (೯) | ,, | ,, | ,, | ೨ | ,, |
| ೬೧ | ಖ ೧ (ಬಿಡಿ ೧-೧೮) | ,, | ದೇವನಾಗರಿ | ,, | ೬೨ | ೧೮೮೦ |

### (ಗ) ಪಾವುಡಿ ಮನೆತನದ ಸಂಗ್ರಹ (ಧಾರವಾಡ)

| | | | | | | |
|---|---|---|---|---|---|---|
| ೬೨ | ಗ (A) | ಹಸ್ತಪ್ರತಿ | ದಪ್ಪಕೋರಿಕಾಗದ | ಕನ್ನಡ | ೨೪ | ೧೮೮೨ |
| ೬೩ | ಗ (B) | ,, | ,, | ದೇವನಾಗರಿ | ೪೯ | ,, |
| ೬೪ | ಗ (C) | ,, | ಬಿಳಿಹಾಳಿ | ಕನ್ನಡ | ೧೦ | ೧೯೧೦ |
| ೬೫ | ಗ (D) | ,, | ,, | ,, | ೧ | ,, |
| ೬೬ | ಗ (E) | ,, | ,, | ತೆಲುಗು | ೩೦ | ,, |
| ೬೭ | ಗ (X) | ,, | ,, | ,, | ೭೯ | ,, |

### (ಘ) ಕಮಲಾಪುರ ನರಸಿಂಗರಾಯರ ಸಂಗ್ರಹ (ಧಾರವಾಡ)

| | | | | | | |
|---|---|---|---|---|---|---|
| ೬೮ | ಘ (೧) | ಹಸ್ತಪ್ರತಿ | ಬಿಳಿಹಾಳಿ | ಕನ್ನಡ | ೧ | ೧೯೧೨ |
| ೬೯ | ಘ (೨) | ,, | ,, | ,, | ೨ | ,, |
| ೭೦ | ಘ (೩) | ,, | ,, | ತೆಲುಗು | ೧೦ | ,, |

### (ಚ) ಕರ್ನಾಟಕ ವಿಶ್ವವಿದ್ಯಾಲಯದ ಸಂಗ್ರಹ (ಧಾರವಾಡ)

| | | | | | | |
|---|---|---|---|---|---|---|
| ೭೧ | ಚ (೧) | ತಾಳೆಗರಿಯ ಪ್ರತಿ | ಕನ್ನಡ | (೨೨೯೨) | ೩ | ೧೬೭೦ |
| ೭೨ | ಚ (೨) | ,, | ,, | (೧೮೫೮) | ೯೫ | ೧೭೫೨ |
| ೭೩ | ಚ (೩) | ,, | ,, | ( ೪೯೭) | ೧೭ | ೧೭೦೨ |
| ೭೪ | ಚ (೪) | ,, | ,, | (೨೨೯೩) | ೨೦ | ೧೭೦೨ |
| ೭೫ | ಚ (ಜ್ಞ) | ಕಲ್ಲಚ್ಚಿನ ಪ್ರತಿ | ,, | — | ೫೮ | ೧೮೬೮ |
| ೭೬ | ಚ (೫) | ಹಸ್ತಪ್ರತಿ | ,, | (೧೧೧೪) | ೫ | ೧೮೭೨. |

## (ಛ) ಸತ್ಯಬೋಧರಾವ ನ. ಬಂಕಾಪುರ (ಸವಣೂರು)

| | | | | | |
|---|---|---|---|---|---|
| ೭೭ | ಛ | ಹಸ್ತಪ್ರತಿ ತಿಳಿವುಹಾಳೆ | ಕನ್ನಡ | ೮೬ | ೧೯೦೦ |

## (ಓ ೧. ಓ ೨) B. K. ಕೃಷ್ಣಮೂರ್ತಿರಾವ್ (ಬೆಂಗಳೂರು)

| | | | | | |
|---|---|---|---|---|---|
| ೭೮ | ಓ ೧ ಓ ೨ | ಹಸ್ತಪ್ರತಿ | ಕನ್ನಡ | ೧೫ | ೧೯೧೦ |

## (ಝ) ಪರ್ವತೀಕರ ತಮ್ಮಣ್ಣರಾಯರ ಸಂಗ್ರಹ (ಧಾರವಾಡ)

| | | | | | |
|---|---|---|---|---|---|
| ೭೯ | ಝ (೧) | ಹಾಳೆಪುಸ್ತಕ | ದೇವನಾಗರಿ | | ೧೮೯೦ |
| ೮೦ | ಝ (೨) | ,, | ,, | | ,, |
| ೮೧ | ಝ (೩) | ,, | ಕನ್ನಡ | | ,, |
| ೮೨ | ಝ (೪) | ,, | ಕನ್ನಡ | | ೧೯೦೦ |
| ೮೩ | ಝ (೫) | ,, | ,, | | ,, |
| ೮೪ | ಝ (೬) | ,, | ,, | | ,, |
| ೮೫ | ಝ (೭) | ,, | ,, | | ,, |
| ೮೬ | ಝ (೮) | ,, | ,, | ೧೫೦ | ,, |
| ೮೭ | ಝ (೯) | ,, | ,, | | ,, |
| ೮೮ | ಝ (೧೦) | ,, | ,, | | ,, |
| ೮೯ | ಝ (೧೧) | ,, | ದೇವನಾಗರಿ | | ,, |
| ೯೦ | ಝ (೧೨) | ,, | ಕನ್ನಡ–ಮೋಡಿ | | ,, |
| ೯೧ | ಝ (೧೩) | ,, | ಕನ್ನಡ | | ,, |
| ೯೨ | ಝ (೧೪) | ,, | ,, | | ,, |
| ೯೩ | ಝ (೧೫) | ನೀಲಿಹಾಳಿ | ,, | | ,, |
| ೯೪ | ಝ (೧೬) | ಬಿಳಿಹಾಳಿ | ದೇವನಾಗರಿ | | ,, |
| ೯೫ | ಝ ೧/೧೦ | ,, | ಕನ್ನಡ | ೯೦ | ,, |
| ೯೬ | ಝ ೩/೧೦ | ಕೋರಿಕಾಗದ | ದೇವನಾಗರಿ | | ,, |
| ೯೭ | ಝ ೫/೧೦ | ,, | ,, | | ,, |
| ೯೮ | ಝ ೬/೧೦ | ಬಿಳೀಕಾಗದ | ಕನ್ನಡಲಿಪಿ | ೧೪೯ | ,, |

| | | | |
|---|---|---|---|
| ೯೯ ರಘು ೮/೧೦ | ಕೊರೀಕಾಗದ | ದೇವನಾಗರಿ | |
| ೧೦೦ ರಘು ೯/೧೦ | ಬಿಳೀಕಾಗದ | ಕನ್ನಡ | |
| ೧೦೧ ರಘು ೧೦/೧೦ | ,, | ೩೫ | |

(ಟ) A. R. **ಸಂಜೀವರಾಯರು—ಅರಕೆರೆ** (ತುಮಕೂರು)

| | | | |
|---|---|---|---|
| ೧೦೨ ಟ ಹಸ್ತಪ್ರತಿ | ಕನ್ನಡ | ೭೫ | ೧೯೩೭ |

(ಠ ೧ ಠ ೨) T. V. **ಗೋಪಿನಾಥರಾವ್** (ಬೆಂಗಳೂರು)

| | | | |
|---|---|---|---|
| ೧೦೩ ರ (೧) ಹಸ್ತಲಿಪಿ | ಕನ್ನಡ | ೫೦ | ೧೯೦೦ |
| ೧೦೪ ರ (೨) ಕಲ್ಮುದ್ರಿತ | ,, | ೬೦ | ೧೮೫೦ |

(ತ) M. **ಗುರುರಾಜ ಶರ್ಮ** (ಮೈಸೂರು)

| | | | |
|---|---|---|---|
| ೧೦೫ ತ ೧–೨ ಹಸ್ತಪ್ರತಿ ಬಿಳಿಕಾಗದ ಕನ್ನಡ | | ೫೦ | ೧೯೩೫ |

(N) L. R. M **ಪಾಟೀಲರ ಸಂಗ್ರಹ** (ನವಿಲ್ಗುಂದ)

| | | | |
|---|---|---|---|
| ೧೦೬ N. ಕೋರಿಕಾಗದ | ಹಸ್ತಪ್ರತಿ | ದೇವನಾಗರಿ ೧೦೦ | ೧೮೭೦ |

(ಶ್ರೀ) **ಲಕ್ಷ್ಮಣರಾವ ಇನಾಮದಾರ** (ಧಾರವಾಡ)

| | | | |
|---|---|---|---|
| ೧೦೭ ಶ್ರೀ ಹಸ್ತಪ್ರತಿ | ಕೋರಿಕಾಗದ | ೨೦೨ | ೧೮೭೦ |



# ಆಧಾರ ಗ್ರಂಥಗಳು


೧ ಭಾರತೀಯ ಪ್ರಾಚೀನ ಚರಿತ್ರಕೋಶ (ಮರಾಠಿ)
ಸಿದ್ಧೇಶ್ವರಶಾಸ್ತ್ರಿ ಚಿತ್ರಾವ್

೨ ಪುರಾಣನಾಮ ಚೂಡಾಮಣಿ (ಕನ್ನಡ) [ಪಾನ್ಯಂ ಸುಂದರಶಾಸ್ತ್ರಿ
[ಬೆನಗಲ್ ರಾಮರಾಯರು

೩ ಭಾಗವತ (ಕಲ್ಯಾಣಸಂಪುಟ)

೪ ಭಾರತ (ಕುಂಭಕೋಣಂ ಸಂಪುಟ)

೫ ಭಾರತ ತಾತ್ಪರ್ಯನಿರ್ಣಯ (ಉಡುಪಿ)

೬ ರಾಮಾಯಣ (ಕಲ್ಯಾಣಸಂಪುಟ)

೭ ತೀರ್ಥಾಂಕ (ಕಲ್ಯಾಣ)

೮ ಪುರಾಣಗಳು (ಇದರಲ್ಲಿಯ ಪ್ರಮಾಣಗಳನ್ನೆಲ್ಲ ಭಾರತೀಯ-
ಪ್ರಾಚೀನ ಚರಿತ್ರಕೋಶದಿಂದ ತೆಗೆದುಕೊಂಡಿದೆ.)

೯ ವಾಯುಸ್ತುತಿ (ಶ್ರೀತ್ರಿವಿಕ್ರಮ ಪಂಡಿತಾಚಾರ್ಯಕೃತ)

೧೦ ಮಧ್ವವಿಜಯ (ಶ್ರೀನಾರಾಯಣ ಪಂಡಿತಾಚಾರ್ಯಕೃತ)

೧೧ ದ್ವಾದಶಸ್ತೋತ್ರ (ಶ್ರೀಮಧ್ವಾಚಾರ್ಯಕೃತ)

೧೨ ತಂತ್ರಸಾರ ( ,, ,, )

೧೩ ಭಗವದ್ಗೀತೆ

೧೪ ನಾರದಭಕ್ತಿಸೂತ್ರಗಳು

೧೫ ಸಂಗೀತ (South Indian Music 1—V P. Sambamurti)

೧೬ ಕುಮಾರವ್ಯಾಸನ ಭಾರತ

೧೭ Epigraphia- Indica Vol XXXI July 1955

೧೮ ಹರಿಕಥಾಮೃತಸಾರ (ವರದೇಂದ್ರ ಹರಿದಾಸ ಸಾಹಿತ್ಯ ಮಂಡಳಿ
ಲಿಂಗಸೂಗೂರು)

೧೯ ವಿಜಯದಾಸರ ಸುಳಾದಿ ,, ,, ,,

೨೦ ದಶೋಪನಿಷತ್ತುಗಳು

## ಶ್ರೀ ಕಾಗಲಕರ ಶ್ರೀನಿವಾಸರಾಯರ

ಅಧ್ಯಕ್ಷತೆಯಲ್ಲಿ ಕಾರ್ಯಮಾಡುತ್ತಿರುವ, ಬೆಂಗಳೂರಿನ ಕರ್ನಾಟಕ-
ಮಿತ್ರವೃಂದವು "**ಆರ್ತಭಾವ**" ಎಂಬ ಈ ಗ್ರಂಥಪ್ರಕಾಶನಕ್ಕೆ
ಸಪಸ್ಕಾರನ್ನು ಮಾಡಿ ನಿಧಿ ಸಂಗ್ರಹಿಸಿ ಸಹಾಯ ಮಾಡಿದ
ಕ್ಕಾಗಿ, ಧಾರವಾಡದ ಪುರಂದರದಾಸರ ಉತ್ಸವ
ಸಮಿತಿಯು ಮಿತ್ರವೃಂದಕ್ಕೆ ಧನ್ಯವಾದಗಳನ್ನು
ಅರ್ಪಿಸುತ್ತದೆ.

# ಪ್ರಕಾಶಕರ ಎರಡು ಮಾತು

ಶ್ರೀಪುರಂದರದಾಸರ ಚತುಶ್ಶತಮಾನೋತ್ಸವವು ನಾಡಿನಲ್ಲೆಲ್ಲ ಅತ್ಯಂತ ಸಂಭ್ರಮದಿಂದ ಆಚರಿಸಲ್ಪಡುತ್ತಿರುವುದನ್ನು ಕಂಡು ಸಂತೋಷವಾಗುತ್ತದೆ. ೪-೫ ವರ್ಷಗಳ ಹಿಂದೆ ಹೊಳೆದ ಈ ಕಲ್ಪನೆಯು, ಇಂದು ಭವ್ಯಸ್ವರೂಪವನ್ನು ತಾಳಿ ರಾಷ್ಟ್ರವ್ಯಾಪಕವಾದುದನ್ನು ನೋಡಿದರೆ, ಶ್ರೀಪುರಂದರದಾಸರ ದೈವೀ ಶಕ್ತಿಯೇ ಈ ಕಾರ್ಯದ ಹಿಂದೆ ಸ್ಫೂರ್ತಿಸೆಲೆಯಾಗಿ ನಿಂತು ಕಾರ್ಯಮಾಡಿಸು ತ್ತದೆ—ಎಂದು ಕಾಣುತ್ತದೆ.

ಈ ಮಂಗಲಸಮಯದಲ್ಲಿ '**ಆರ್ತಭಾವ**' ಎಂಬ ಪುರಂದರದಾಸರ ಸಾಹಿತ್ಯದ ಎರಡನೆಯ ಗ್ರಂಥವು ಪ್ರಕಟವಾಗುತ್ತಿರುವುದು,ಪರಮಸಂತೋಷದ ಸಂಗತಿಯು, ಈ ಉತ್ಸವದ ಕಾರ್ಯದಲ್ಲಿಯೂ ಗ್ರಂಥಪ್ರಕಾಶನದ ಕಾರ್ಯ ದಲ್ಲಿಯೂ, ನಾಡಿನ ಸಜ್ಜನರೆಲ್ಲರೂ ಸ್ವಹಸ್ತ-ಪರಹಸ್ತಗಳಿಂದ ಸಹಾಯ ಮಾಡುತ್ತಿರುವುದನ್ನು ನೋಡಿದರೆ, ಕರ್ನಾಟಕರಾಜ್ಯವೇ ಈ ಉತ್ಸವಕ್ಕೆ ಟೊಂಕ ಕಟ್ಟಿದ್ದನ್ನು ನೆನೆದರೆ, ಜಗತ್ಪಾಲಕನಾದ ಶ್ರೀಪುರಂದರವಿಠ್ಠಲನೇ ಅನಂತಹಸ್ತಗಳಿಂದ ಕಾರ್ಯಮಾಡಿ ಮಾಡಿಸುತ್ತಿದ್ದಾನೆಂಬ ಪ್ರಜ್ಞೆಯು ಜಾಗೃತ ವಾಗುತ್ತದೆ.

ಶ್ರೀಪುರಂದರದಾಸರ ಸಾಹಿತ್ಯಪ್ರಕಟನೆಯ ಕಾರ್ಯದಲ್ಲಿ, ತಮ್ಮ ತಮ್ಮ ಹೊತ್ತಿಗೆಗಳನ್ನು ಕೊಟ್ಟು ನೆರವಾದ, ಈ ಸಂಗ್ರಹದ ಕಾರ್ಯದಲ್ಲಿ ಪರಿಶ್ರಮ ವಹಿಸಿದ, ನಿಧಿಸಂಗ್ರಹದಲ್ಲಿ ಸಹಾಯಮಾಡಿದ, ಬಂದ ಸಂಗ್ರಹವನ್ನೆಲ್ಲ ಬಳಸಿ, ಪರಿಶುದ್ಧಗೊಳಿಸಿ, ಶಾಸ್ತ್ರೀಯವಾಗಿ ಗ್ರಂಥಗಳನ್ನು ಸಿದ್ಧಪಡಿಸಿದ ಅನೇಕ ಬಗೆ ಯಿಂದ ಸಲಹೆ-ಸೂಚನೆಗಳನ್ನಿತ್ತು, ಉತ್ಸಾಹದಿಂದ ಕಾರ್ಯಮಾಡಲು ಮುಂದೆ ಬಂದ ಎಲ್ಲ ದಾಸಭಕ್ತವೃಂದಕ್ಕೆ ಅ. ಕ. ಪುರಂದರದಾಸರ ಉತ್ಸವ ಕಮಿಟಿಯು ಅನಂತ ಧನ್ಯವಾದಗಳನ್ನು ಅರ್ಪಿಸುತ್ತದೆ.

ಈ ಕಮಿಟಿಯ ಸಂಕಲ್ಪದಂತೆ, ಮುಂದಿನ ವರ್ಷದ ಆರಾಧನಾ ಮಹೋ ತ್ಸವದ ಒಳಗಾಗಿ ಉಳಿದ ೪ ಹೊತ್ತಗೆಗಳನ್ನು ಪ್ರಕಟಿಸಲು ಶಕ್ತಿ-ಸಾಮರ್ಥ್ಯ ಗಳನ್ನು ಕೊಟ್ಟು ಕಾರ್ಯವನ್ನು ಪೂರ್ಣಮಾಡಿಸಿಕೊಳ್ಳಲೆಂದೂ, ಜನತೆಯು ಅನಂತ ಹಸ್ತಗಳಿಂದ ಈ ಕಾರ್ಯಕ್ಕೆ ನೆರವನ್ನು ನೀಡಲು ಪ್ರೇರಿಸಲೆಂದೂ ಜಗತ್ಪಾಲಕನಾದ ಶ್ರೀಪುರಂದರವಿಠಲನನ್ನು ಪುನಃ ಪುನಃ ಪ್ರಾರ್ಥಿಸುತ್ತೇವೆ.

ತಾ. ೧೪ ೧-೬೪

**ಬುರ್ಲಿ ಬಿಂದುಮಾಧವ**

**ಅ. ಕ. ಪುರಂದರದಾಸರ ಉತ್ಸವಮಂಡಲ**

ಧಾರವಾಡ

# ಪರಿವಿಡಿ


| ಅ ನಂ. | ವಿಷಯ | | ಪುಟಾಂಕ |
|---|---|---|---|
| ೧ | Shri Purandaradasa, and the Central teachings of Haridasa literature | | I—XXI |
| ೨ | ಸಂಪಾದಕರ ಮಾತುಗಳು | | ೧ರಿಂದ ೨೦ |
| ೩ | ಆಕರಗ್ರಂಥಗಳು | | ೧ರಿಂದ ೭ |
| ೪ | ಆಧಾರಗ್ರಂಥಗಳು | | ೮ |

*     *     *

| | | | |
|---|---|---|---|
| ೧ | **ಭವಬಂಧಕಾತರ** | | ೧ರಿಂದ ೩೪ |
| | ೧ ಸಂಸಾರಜುಗುಪ್ಸೆ | (೨-೧೪) | |
| | ೨ ಪಶ್ಚಾತ್ತಾಪ | (೧೫—೨೩) | |
| | ೩ ಬಿನ್ನಹ | (೨೩—೩೪) | |
| ೨ | **ಉದ್ಧಾರಪ್ರಜ್ಞೆ** | | ೩೫ರಿಂದ ೫೬ |
| | ೧ ಪ್ರಾಕ್ತನಕರ್ಮವಿವೇಕ | (೩೬—೪೨) | |
| | ೨ ಪತಿತಪಾವನ ಶ್ರೀಹರಿ | (೪೩—೪೭) | |
| | ೩ ಕಾರುಣ್ಯಯಾಚನೆ | (೪೮—೫೧) | |
| | ೪ ಭಕ್ತಿದರ್ಶನ | (೫೨—೫೬) | |
| ೩ | **ಸಾಧನಸಂದರ್ಶನ** | | ೫೭ರಿಂದ ೭೮ |
| | ೧ ದೇಹಾನಿತ್ಯವಿವೇಕ | (೫೭—೬೦) | |
| | ೨ ಸತ್ಸಂಗಮಹತಿ | (೬೧—೬೪) | |
| | ೩ ಮಾನವಜನ್ಮವಿವೇಕ | (೬೫—೬೮) | |
| | ೪ ನಾಮಸ್ಮರಣದರ್ಶನ | (೬೯—೭೮) | |

## ಭಕ್ತಿಭಾವವಿಕಾಸ


| ಅ ನಂ. | ವಿಷಯ | ಪುಟಾಂಕ |
|---|---|---|
| ೪ | **ಭಕ್ತಿಭಾವವಿಕಾಸ** | **೭೯ ರಿಂದ ೧೦೮** |
| | ೧ ನಾಮಸ್ಮರಣನಿಷ್ಠೆ (೮೦–೯೪) | |
| | ೨ ಪತಿತಪಾವನದೇವ (೯೫–೧೦೧) | |
| | ೩ ಭಕ್ತಿವಿಚಾರವಿವೇಕ (೧೦೨–೧೦೮) | |
| ೫ | **ಭಕ್ತಿಭಾವಮೀಮಾಂಸೆ** | **೧೦೯ ರಿಂದ ೧೨೮** |
| | ೧ ನಿಶ್ಚಲಪ್ರೇಮ (೧೧೦–೧೧೫) | |
| | ೨ ಭಕ್ತಸಾಹಚರ್ಯ (೧೧೬–೧೧೯) | |
| | ೩ ಭಕ್ತಿವಿನೋದ (೧೨೦–೧೨೮) | |
| ೬ | **ಭಕ್ತಿಜ್ಞಾನವಿವೇಕ** | **೧೨೯–೧೭೨** |
| | ೧ ಭಕ್ತಿಭಾವಪರಿಣಾಮ (೧೩೦–೧೩೮) | |
| | ೨ ಇದು ಭಾಗ್ಯ, ಇದು ಭಾಗ್ಯ ! (೧೩೯–೧೪೨) | |
| | ೩ ಸುಲಭಪೂಜೆ (೧೪೩–೧೪೬) | |
| | ೪ ಭಕ್ತಿನಿರ್ಭರಿತ (೧೪೭–೧೫೯) | |
| | ೫ ಶುಭಂ, ಮಂಗಲಂ । (೧೬೦–೧೭೨) | |
| | **ಪರಿಶಿಷ್ಟಗಳು** | |
| | ೧ ಶಬ್ದಾರ್ಥ, ಸಂದರ್ಭಕಥೆ, ವಿವರಣೆ | ೧೭೩ರಿಂದ ೨೪೬ |
| | ೨ ಹಾಡುಗಳ ಅಕಾರಾದಿ ಸೂಚಿ | ೨೪೭ರಿಂದ ೨೫೪ |
| | ೩ ವಿವಿಧವಿಷಯ ವಿಚಾರ | ೨೫೫ರಿಂದ ೨೫೬ |
| | ೪ ಪ್ರಮುಖಪದಸೂಚಿ | ೨೫೭ರಿಂದ ೨೭೨ |
| | ೫ ಒಪ್ಪೋಲೆ | ೨೭೩ರಿಂದ ೨೭೬ |






ಹಂಪಿಯಲ್ಲಿಯ ಶ್ರೀಪುರಂದರದಾಸರ ಮಂಟಪ

# ೧ ಭವಬಂಧಕಾತರ

೧ ಸಂಸಾರಜುಗುಪ್ಸೆ

೨ ಪಶ್ಚಾತ್ತಾಪ

೩ ಬಿನ್ನಹ

ಶ್ರೀಪತಿಯು ನಮಗೆ ಸಂಪದವೀಯಲಿ !

# ೧. ಸಂಸಾರಜುಗುಪ್ಸೆ

## ೧

ರಾಗ—ಕಾಂಬೋದಿ (ಕಲ್ಯಾಣಿ) ತಾಳ—ಝಂಪೆ

ಏನ ಬರೆದೆಯೊ ಬ್ರಹ್ಮ ಎಂತು ನಿರ್ದಯನು—ಅಭಿ-।
ಮಾನವನು ತೊರೆದು ಪರರನು ಪೀಡಿಸುವುದ ॥ ಪ ॥

ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು ।
ಸೊಲ್ಲುಸೊಲ್ಲಿಗೆ ಅವರ ಕೊಂಡಾಡುತ ॥
ಇಲ್ಲ ಈ ವೇಳೆಯಲಿ ನಾಳೆ ಬಾ— ಎನಲಾಗಿ ।
ಅಲ್ಲವನೆ ತಿಂದ ಇಲಿಯಂತೆ ಬಳಲುವುದ ॥ ೧ ॥

ಗೇಣೊಡಲ ಹೊರೆವುದಕೆ ಹೋಗಿ ನರರೊಳು ಪಂಚ-।
ಬಾಣ ಸಮರೂಪ ನೀನೆಂದು ಪೊಗಳೆ ॥
[೨]ಮಾಣು ಎನ್ನಾಣೆ ನೀ ನಾಳೆ ಬಾ ಎಂದೆನಲು ।
ಗಾಣ ತಿರುಗುವ ಎತ್ತಿನಂತೆ ಬಳಲುವುದ ॥ ೨ ॥

ಹಿಂದೆ ಬರೆದಾ ಬರೆಹ ಏನಾದರಾಗಲಿ ।
ಮುಂದೆನ್ನ ವಂಶದಲಿ ಪುಟ್ಟುವರಿಗೆ ॥
ಸಂದೇಹ ಬೇಡ ಶ್ರೀಪುರಂದರವಿಠಲನೇ ।
ಕಂದರ್ಪನಯ್ಯ ಉಡುಪಿಯ ಕೃಷ್ಣರಾಯ ॥ ೩ ॥

---

೧ ಆ (VI) ಮತ್ತು ಕ. ವಿ. ವಿ. ತಾಳೆಗರಿ (ನಂ. ೧೮೫೮–೧೭೫೦) ಪ್ರತಿಗಳನ್ನು ಹೊಂದಿಸಿ ಬರೆದಿದೆ.

೨. ಓಣಿ–ಓಣಿಯ ತಿರುಗಿ (ಅ. ೧)

## ೨

ರಾಗ—ಮುಖಾರಿ ತಾಳ—ಝಂಪೆ

೧ ಭಂಡನಾದೆನು ನಾನು ಸಂಸಾರದಿ ।
ಕಂಡು ಕಾಣದ ಹಾಗೆ ಇರಬಹುದೆ ನರಹರಿಯೆ ॥ ಪ ॥

ಕಂಡ ಕಲ್ಲುಗಳಿಂಗೆ ಕೈಮುಗಿದು ಸಾಕಾದೆ ।
ದಿಂಡೆಗಾರರ ಮನೆಗೆ ಬಲು ತಿರುಗಿದೆ ॥
ಶುಂಡಾಲನಂತೆನ್ನ ಮತಿ ಮಂದವಾಯಿತ್ತೈ ।
ಪುಂಡರೀಕಾಕ್ಷ ನೀ ಕರುಣಿಸೈ ಬೇಗ ॥ ೧ ॥

ನಾನಾವ್ರತಂಗಳನು ನಾ ಮಾಡಿ ಬಳಲಿದೆನು ।
ಏನಾದರೂ ಎನಗೆ ಫಲವಿಲ್ಲವು ॥
ಆ ನಾಡು ಈ ನಾಡು ಸುತ್ತಿ ನಾ ಮರುಳಾದೆ ।
ನೀನಾದರೂ ಕೃಪೆಯನಿಡು ಬೇಗ ಹರಿಯೆ ॥ ೨ ॥

ಬುದ್ಧಿಹೀನರ ಮಾತ ಕೇಳಿ ನಾ ಮರುಳಾದೆ ।
ಶುದ್ಧಿ ಇಲ್ಲದೆ ಮನವು ಕೆಟ್ಟುಹೋಯ್ತು ॥
೨ಮಧ್ವನುತ ಸಿರಿಪುರಂದರವಿಠಲ ತತ್ತ್ವದ ।
ಸಿದ್ಧಿಯನು ದಯೆಗೆಯ್ದು ೩ಉಳುಹು ನೀ ಎನ್ನ ॥ ೩ ॥

೧) ಅ (I) ಇ. ಪ್ರತಿಗಳನ್ನು ಹೊಂದಿಸಿ ಬರೆದಿದೆ. (೨) ಸಿದ್ಧನುತ (ಓ)
(೩) ಉದ್ಧರಿಸು ಎನ್ನ. (ಓ)

೩

ರಾಗ—ಆನಂದಭೈರವಿ ತಾಳ – ರೂಪಕ

೧ಮಾಯೆ ಎನ್ನ ಕಾಯವನ್ನುಪಾಯದಿಂದ ಮೋಹಿಸಿ ।
ಬಾಯ ಮುಚ್ಚಿ ಕೊಲ್ಲುತಿಹಳು ಕಾಯೊ ಲಕ್ಷ್ಮೀರಮಣನೆ ॥ ಪ ॥

ಮಾತೆ-ಪಿತರ ವಿಷಯದಿಂದ ಶ್ವೇತಬಿಂದು ಬೀಳಲಾಗಿ ।
ಕೀತ ತತ್ತಿ ಬಲಿದು ಮಾಸಚೀಲದೊಳಗೆ ಬೆಳೆದೆನು ॥
ರಕ್ತಗೂಡಿ ಬಸಿರೊಳೊಂಬತ್ತುತಿಂಗಳಿದ್ದೆ ನಾನು ।
ನತ್ತು ಮತ್ತೆ ಹುಟ್ಟಿ ಹೋಗಲಾರೆ ಲಕ್ಷ್ಮೀರಮಣನೆ ॥ ೧ ॥

ಎಲುವು ಕಂಬಮಾಡಿ ನರದ ಬಳ್ಳಿಯಲ್ಲಿ ಬಿಗಿದು ಬಿಗಿದು ।
ಒಳಗೆ ರಕ್ತದಿಂದ ಮೆತ್ತಿ ಹೊಸೆ ವಾವದಿಂದ ನಿಂದೆ ॥
ನೆಲೆಯ ಮನೆಯ ಮಾಡಿ ಚರ್ಮ ಹೊಲಿದು ಹೊದಿಕೆ ಹೊದಿಸಿದಂಥ ।
ಹೊಲೆಯ ಗೂಡಿನಲ್ಲಿ ಜನಿಸಲಾರೆ ಲಕ್ಷ್ಮೀರಮಣನೆ ॥ ೨ ॥

ಎನ್ನ ಸತಿಯು ಎನ್ನ ಸುತರು ಎನ್ನ ಬಂಧು-ಬಳಗವು ।
ಎನ್ನ ನಾಕಿ ಸಲಹು ಎಂದು ಹರಿದು ತಿಂಬರು ॥
ಎನ್ನ ತನುವ ಜವನು ಬಂದು ಎಳೆದುಕೊಂಡು ಒಯ್ಯುವಾಗ ।
ಬೆನ್ನಬಪ್ಪರಾರ ಕಾಣೆ ಚೆನ್ನ ಲಕ್ಷ್ಮೀರಮಣನೆ ॥ ೩ ॥

ಇರುವೆ ಮೊದಲು ಆನೆ ಕಡೆಯು ಬಸಿ-ಬಸಿರೊಳು ಬಂದೆ ನಾ ।
ಹರಿದು ಪಾಪಕರ್ಮದಿಂದೆ ತೊಳಲಿ ಬಳಲಿ ನೊಂದೆ ನಾ ॥
ಬಿರುಗಾಳಿಗೆ ಸಿಕ್ಕ ಮರದ ತರಗೆಲೆಯಂತುದುರಿ ನಾ ।
ಮರಳಿ ಮರಳಿ ಸತ್ತು ಹುಟ್ಟಲಾರೆ ಲಕ್ಷ್ಮೀರಮಣನೆ ॥ ೪ ॥

ಲಕ್ಷ ಜೀವರಾಶಿಗಳನು ಕುಕ್ಷಿಯೊಳಗೆ ಇರಿಸಿ ನಿನ್ನ ।
ಅಕ್ಷಯ—ಅನಂತ, ನನ್ನನೇಕೆ ಹೊರಗೆ ಮಾಡಿದೆ ॥
ಈಕ್ಷಿಸುತಿರು ಎನ್ನ ನೀನು ಕುಕ್ಷಿಯೊಳಗೆ ಇಂಬನಿತ್ತು ।
ರಕ್ಷಿಸಯ್ಯ ಲಕ್ಷ್ಮೀಪತಿ ಪುರಂದರವಿಠಲನೆ ॥ ೫ ॥

---

೧) ಇ(೧೦), ಗ. ಮ. ಶ್ರೀ ಪ್ರತಿಗಳಿಂದ ಆರಿಸಿದೆ.

## ೪

ರಾಗ — ಭೈರವಿ ತಾಳ — ಅಟ

[೧]ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು ।
ನಾಯಿಕುನ್ನಿಗಳಂತೆ ಪರರ ಪೀಡಿಸುತೆ ॥ ಪಲ್ಲ ॥

ಉದಯಕಾಲದಲೆದ್ದು ಸಂಧ್ಯಾವಿಧಿಯ ಬಿಟ್ಟು ।
ಪದುಮನಾಭನ ಪಾದಸ್ಮರಣೆ ಮೊದಲಿಲ್ಲದೆ ॥
ಮುದದಿ ನಿನ್ನರ್ಚಿಸದೆ ನರರ ಸದನವ ಪೊಕ್ಕು ।
ಒದಗಿ ಸೇವೆಯ ಮಾಡಿ ಅವರ ಬಾಗಿಲನು ॥ ೧ ॥

ಕಲ್ಲ ಕರಗಿಸಬಹುದು ಹುರಿಗಡಲೆಯನು ಅರೆದು ॥
ತೈಲವನು ತೆಗೆದಾದರುಣಲು ಬಹುದು ॥
ಬಲ್ಲಿದವರಾ ಮನಸು ಮೆಚ್ಚಿಸಲರಿಯೆನೈ ।
ಹಲ್ಲು ಕಿರಿಯುತಲಿ ಹಂಬಲಿಸಿ ಬಾಯ್ಬಿಡುತ ॥ ೨ ॥

ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ ।
ಭ್ರಾಂತಿಯೆಂತೆಂಬ ಹೆಬ್ಬುಲಿಯೊಳು ಸಿಲುಕಿ ।
ಅಂತ್ಯವ ನಾ ಕಾಣೆ ಆದರಿಸುವರಿಲ್ಲ ।
ಚಿಂತೆಯ ಬಿಡಿಸಯ್ಯ ಪುರಂದರವಿಠಲ ॥ ೩ ॥

## ೫

## ಸುಳಾದಿ

### ಧ್ರುವತಾಳ

[೨]ಸ್ವರ್ಗ-ಮರ್ತ್ಯ-ಪಾತಾಳಗಳಲ್ಲಿ ತಿರುತಿರುಗಿ ಬಳಲಿದೆನು ।
ದೇಹಯೋಗ ವಿಯೋಗ ಹಮ್ಮು ಮಮತೆಯಿಂದಲಿ ಬಳಲಿದೆನು ।

---

೧) ಮುದ್ರಿತ ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದೆ.
೨) ಇ (ಮುದ್ರಿತ) ಮತ್ತು ಓ (ಮುದ್ರಿತ) ಪ್ರತಿಗಳಿಂದ ಆರಿಸಿಕೊಂಡಿದೆ.

ಯಮನ ಪಟ್ಟಣಕೆ ಎಂಬತ್ತೆಂಟುಸಾಸಿರ ಬಾರಿ
ಹೋಗಿ ಬಂದು ಬಂದು ಬಳಲಿದೆನಯ್ಯ ।
ಅಲ್ಲಿ ಯಮನಾಳ್ಗಳಿಂದ ನೊಂದೆನು ನಾನಲ್ಲಿ ।
ವೈತರಣಿಯಿಂದ ಬಳಲಿದೆನು ನಾನಲ್ಲಿ ।
ನರಕಭಾಜನನಾಗಿ ಹೋದೆನೊ ಪುರಂದರವಿಠಲ ।
ಇನ್ನು ಆರೆ ಅರೆನಯ್ಯ ಕರುಣಿಸು ಕರುಣಿಸಯ್ಯ
ಕರುಣಾಕರನೆ ದಮ್ಮಯ್ಯ ॥ ೧ ॥

ಮಟ್ಟತಾಳ

ಸಂಚಿತಕರ್ಮಗಳನಂತಕೋಟಿಗಳು ।
ಪ್ರಾರಬ್ಧ ಕರ್ಮಗಳು ಕೋಟಿಕೋಟಿಗಳು ।
ಆಗಾಮಿ ಕರ್ಮಗಳು ಕೋಟಿ ಕೋಟಿಗಳು ।
ಪುರಂದರವಿಟ್ಠಲನ ಕಂಡಲ್ಲದೆ ಎಲ್ಲಿಯು ಮುಕುತಿ ? ॥ ೨ ॥

ಝಂಪೆತಾಳ

ಜ್ಞಾನ ಭಕುತಿ ವೈರಾಗ್ಯವಿಲ್ಲದ
ಮಾನವ ಜನ್ಮವದೇತಕೆ ಸುಡುಸುಡು ।
ಆಹಾರ ಭಯ ನಿದ್ರೆ ಸ್ತ್ರೀಗೋಷ್ಠಿ ಎಂಬುವು
ವಿಹಾರ ಪಶು-ಪಕ್ಷಿ-ಮೃಗಕೆ ದಕ್ಕಲು ಸರಿ ।
ದೀನವತ್ಸಲ ಪುರಂದರವಿಠಲನ
ನೆನೆವ ಕ್ರಿಮಿಕೀಟಕ ಜನುಮವೆ ಸಾಕು ॥ ೩ ॥

ರೂಪಕತಾಳ

ಕೃಚ್ಛ್ರ-ತಪದಿಂದೆ ಬರಿದೆ ಬಳಲುವರು ಗೋ ।
ವತ್ಸಪಥದಂತೆ ಭವಸಾಗರವ ದಾಂಟಿ ಆ ।
ಚಿತ್ಸುಖನೋಲಯಿಸಬಲ್ಲವರು ಗೋ ।
ವತ್ಸಪದದಂತೆ ಭವಸಾಗರವ ದಾಂಟಿ ಶ್ರೀ- ।
ವತ್ಸ ಚಿಹ್ನಾಂಕಿತ ಪುರಂದರವಿಟ್ಠಲನ ಸಾರುವರು ॥ ೪ ॥

### ತ್ರಿಪುಟತಾಳ

ಚಂದ್ರಮ ನಿನ್ನ ಕಿರ್ತಿಳಿಯ ಹಣ್ಣಿಂದ ।
ಇಂದ್ರ ನಿನ್ನ ಪಾರಿಜಾತವ ತಂದ ।
ಎಲೆ ದೇವತೆಗಳಿರ ಅಂಜಿ ಬೆಚ್ಚುತ್ತಲಿರಿ ।
ಪುರಂದರವಿಠಲನೆ ಉದ್ದಂಡ ದೈವ ನೋಡಿ ॥ ೫ ॥

### ಅಟತಾಳ

ವರುಣ ದೂತರು ಬಂದು ನಂದಗೋಪನ ಪಿಡಿದು ।
ವರುಣಪಾಶದಿ ಕಟ್ಟಿ ಕೊಂಡೊಯ್ಯಲು ।
ವರುಣಲೋಕಕ್ಕೆ ದಾಳಿಯನ್ನಿಟ್ಟು ।
ವರುಣನ ಕೈಯಲಿ ಪೂಜೆಮಾಡಿಸಿಕೊಂಡ ।
ಪುರಂದರವಿಟ್ಠಲ ಈಶರಿಗೀಶ ॥ ೬ ॥

### ಆದಿತಾಳ

ಸಾಸಿರಶಿರನೆ ಸಾಸಿರಲೋಚನನೆ ।
ಸಾಸಿರಭುಜನೆ ಸಾಸಿರಕರನೆ ।
ಸಾಸಿರ ಉದರನೆ ಸಾಸಿರಚರಣನೆ ।
ಸಾಸಿರ ನಮೋನಮೋ ಪುರಂದರವಿಠಲ ॥ ೭ ॥

### ಜತೆ

ಎಲ್ಲಿ ಕಂಡೆರಗುವೆ ಎಲ್ಲಿ ಕೊಂಡಾಡುವೆ ।
ಫುಲ್ಲಲೋಚನ ನಮ್ಮ ಪುರಂದರವಿಠಲನ ॥ ೮ ॥

## ೬

ರಾಗ— ಆನಂದಭೈರವಿ (ಪಂತುವರಾಳಿ) ತಾಳ - ಅಟ

೧ಸುಮ್ಮನೆ ಕಾಲವ ಕಳೆವರೆ— ಯಮ- ।
ಧರ್ಮರಾಯನ ದೂತರೆಳೆಯರೆ ॥ ಪ ॥

ನರಿ-ನಾಯಿಜನುಮವು ಬಾರದೆ—ಹಾಗೆ- ।
ನರಜನ್ಮದಲಿ ಬಂದು ಸೇರಿದೆ ॥
ಹರಿಯ ಸ್ಮರಣೆ ಮಾಡಲಾರದೆ—ಸುಮ್ಮ- ।
ನಿರಲು ಪಾಪದ ವಿಷವೇರದೇ ॥ ೧ ॥

ಬಾಲನಾಗಿದ್ದಾಗ ಬಹುಲೀಲೆ—ಮುಂದೆ- ।
ಲೋಲನಾಗಿ ಬಾಳಿದ ಮೇಲೆ ॥
ಮೂಳವೃದ್ಧಾಪ್ಯ ಬಂತಾ ಮೇಲೆ—ಇನ್ನು- ।
ಬಾಳುವುದೆಲ್ಲವು ನೂಲಮಾಲೆ ॥ ೨ ॥

ಮಡದಿ-ಮಕ್ಕಳ ಕೂಡಣ ಬಾಳು—ತನ್ನ- ।
ಒಡಲಿಗಾಗೆ ತಾನು ಕರವಾಳು ॥
ಬಿಡದೆ ಸಂಕೀರ್ತನೆ ಮಾಡೇಳು—ಮಿಕ್ಕ- ।
ನುಡಿದ ನುಡಿಗಳೆಲ್ಲವು ಬೀಳು ॥ ೩ ॥

ಮನೆ ಮನೆವಾರ್ತೆಯು ಸ್ಥಿರವಲ್ಲ— ಈ- ।
ಮನುಜರ ಮಾತೇನು ಘನವಲ್ಲ ॥
ವನಜಸಂಭವಗೂ ನಿಶ್ಚಯವಿಲ್ಲ—ಮುಂದೆ- ।
ಹನುಮಂತ ಪಟ್ಟಕೆ ಬಹನಲ್ಲ ॥ ೪ ॥

---

೧) ಅ (೧), ಆ, ಝ, ಶ್ರೀ ಪ್ರತಿಗಳಲ್ಲಿ ಈ ಹಾಡಿಗೆ ಮೂರು ನುಡಿಗಳು ಮಾತ್ರ (೧–೫–೭) ಇವೆ ಅ. (೧೨). ಎ. ಓ. ಮ ಪ್ರತಿಗಳಲ್ಲಿ (೨ ೩–೪–೬) ನಾಲ್ಕು ನುಡಿಗಳು ಹೆಚ್ಚಿಗಿವೆ.

ಇಂದಿನ ಹಮ್ಮು ನಾಳೆಗೆ ಇಲ್ಲ—ಭವ- ।
ಬಂಧನದೊಳು ಸಿಕ್ಕಿ ನರಳಿದೆನಲ್ಲ ॥
ಮುಂದನರಿತ ನಡೆದುದಿಲ್ಲ—ಮೃತ್ಯು- ।
ಬಂದಾಗ ಬಿಡಿಸಿಕೊಳ್ಳುವರಿಲ್ಲ ॥ ೫ ॥

ಮರಣವು ಆವಾಗ ಬರುವುದೊ—ತನ್ನ ।
ಶರೀರವು ಆವಾಗ ಮುರಿವುದೊ ॥
ಕರಣಂಗಳೆಲ್ಲವು ಜರಿವುದೊ—ತನ್ನ- ।
ಗರುವದುಬ್ಬಸವೆಲ್ಲ ಮುರಿವುದೊ ॥ ೬ ॥

ಮರಣಕಾಲಕೆ ಅಜಮಿಳನಾಗ—ತನ್ನ- ।
ತರಳನ ನಾರಗನೆಂದು ಕರೆದಾಗ ॥
ಕರುಣದಿ ವೈಕುಂಠಪದವೀಗ—ನಿತ್ಯ- ।
ಪುರಂದರವಿಠಲನ ನೆನೆ ಬೇಗ ॥ ೭ ॥

## ೭

ರಾಗ—ಮೋಹನ ತಾಳ ಝಂಪೆ

(ಸಾವೇರಿ)

[೧]ಸಾಕುಸಾಕಿನ್ನು ಸಂಸಾರಸುಖವು ।
ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ ॥ ಪ ॥

ಉದಿಸಿದುವು ಪಂಚಭೂತಗಳಿಂದ ಔಷಧಿಗ- ।
ಳುದಿಸಿದುವು ಔಷಧಿಗಳಿಂದನ್ನವು ॥
ಉದಿಸಿದುವು ಅನ್ನದಿಂ ಶುಕ್ಲ-ಶೋಣಿತವೆರಡು ।
ಉದಿಸಿದುವು ಸ್ತ್ರೀ-ಪುರುಷರಲ್ಲಿ ಹರಿಯೆ ॥ ೧ ॥

೧) ಕ ವಿ. ವ. ತಾಳೆಗರಿಯಿಂದ ಪ್ರತಿಮಾಡಿದೆ. (೧೭೫೦–ನಂ. ೧೮೫೮)

ವಿ. ಸೂ — ಈ ಹಾಡು ಪುರಂದರದಾಸರದೆಂದು ಎಲ್ಲ ಪ್ರತಿಗಳಲ್ಲಿಯೂ ಇರುವುದಾದರೂ ಮೇಲ್ಕಾಣಿಸಿದ ಪ್ರತಿಯಲ್ಲಿ 'ಆದಿಕೇಶವ'ನ ಮುದ್ರಿಕೆ ಕಾಣುತ್ತಿದೆ. ಆದರೆ ಅದು ಅಲ್ಲಿ ಸಹಜವೆಂದು ಕಾಣುವುದಿಲ್ಲ.

ಸತಿ-ಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ ।
ಪತನವಾದಿಂದ್ರಿಯವು ಹೊಲೆ-ರುಧಿರವು ॥
೨ಸುದತಿಯುದರದೊಳೆರಡು ಏಕದಲಿ ಸಂಧಿಸಲು ।
ಬುದುಬುದನೆ ಮಾಸಪರ್ಯಂತರದಿ ಹರಿಯೆ ॥ ೨ ॥

ಮಾಸವೆರಡರಲಿ ಶಿರ ಮಾಸ ಮೂರರಲಂಗ ।
ಮಾಸ ನಾಲ್ಕರಲಿ ಚರ್ಮದ ಹೊದಿಕೆಯು ॥
ಮಾಸವೈದರೊಳು ನಖ ರೋಮ ನವರಂಧ್ರಗಳು ।
ಮಾಸವೇಳಲಿ ಧಾತು ಹಸಿವು ತೃಷೆಯು ॥ ೩ ॥

ತಿಂಗಳೆಂಟರಲಿ ಪೂರ್ವಾನುಭವ ಕರ್ಮಗಳ ।
ಭಂಗವನು ಪಡಲಾರೆ ಭವಭವದೊಳು ॥
ಅಂಗನೆಯ ಉದರಕಿನ್ನೆಂದಿಗೂ ಬರೆನೆಂದು ।
ಹಿಂಗದಲೆ ಧ್ಯಾನಿಸುತ ಕಳೆದೆನೈ ದಿನವ ॥ ೪ ॥

ಇನಿತು ಗರ್ಭದೊಳು ನವಮಾಸ ಪರಿಯಂತರದಿ ।
ತನು ಸಿಲುಕಿ ನರಕದಲಿ ಆಯಾಸಗೊಂಡು ॥
ಘನಮರುತವೇಗದಿಂ ಅರುಹನಲ್ಲಿಯೆ ಮರೆತು ।
ಜನಿಸುವಲಿ ಮೃತಭಾವದೊಳು ನೊಂದೆ ಹರಿಯೆ ॥ ೫ ॥

ಧರೆಯುಮೇಲುದಿಸಿ ಬಹು ವಿಷ್ಣುಮಾಯೆಗೆ ಸಿಲುಕಿ ।
ಪರವಶದೊಳಿರಲು ಹೀರಡಿಸಲಾಗ ॥
ಹೊರಳಿ ಗೋಳಿಡುತ ಕಣ್ದೆರೆಯ ಹರಿಯನು ಮರೆವ ।
ದುರಿತರೂಪದ ತನುವ ಧರಿಸಿದೆನೊ ಹರಿಯೆ ॥ ೬ ॥

ಶಿಶುತನದೊಳಿರಲು ನೊಣಮುಸುಕಲಂದದಕಳಲು ।
ಹಸಿದನಿವನೆಂದು ಹಾಲನೆ ಎರೆವರು ॥
ಹಸು-ತೃಷೆಗಳಿಂದಳಲು ಹಾಡಿ ತೂಗುವರಾಗ ।
ಪಶುವಂತೆ ಶಿಶುತನದೊಳಿರಲಾರೆ ಹರಿಯೆ ॥ ೭ ॥

---

೨) ವಿಷಯಮಹತ್ತ್ವವನ್ನನುಲಕ್ಷಿಸಿ ಇಲ್ಲಿ ಪ್ರಾಸಪದ್ಧತಿಯನ್ನು ಒದಲಿಸಿದಂತೆ ಕಾಣುತ್ತಿದೆ.

ನಡೆಯಲರಿಯದ ದುಃಖ ಮನಸಿನೊಳು ಬಯಸಿದುದ ।
ನುಡಿಯಲರಿಯದ ದುಃಖ ವಿಷಮದಿಂದ ॥
ಅಡಿಯಿಡುತ ಮೆಲ್ಲನೇಳುತ ಬೀಳುತಲಿ ತೊದಲು- ।
ನುಡಿಯೊಳಿಹ ಬಾಲ್ಯದೊಳಗಿರಲಾರೆ ಹರಿಯೆ ॥ ೮ ॥

ಬಾಲ್ಯದೊಳು ಕೆಲವು ದಿನ ಬರಿದೆ ಹೋಯಿತು ಹೊತ್ತು ।
ಗೋಳಿಡುತವಿದ್ಯೆ ಕರ್ಮಗಳ ಕಲಿತು ॥
ಮೇಲೆ ಯೌವನದುಬ್ಬಿನೊಳು ಮದುವೆಯಾಗಿ ನಾ ।
ಬಾಲೆಯರ ಬಯಸಿ ಬಹು ಮರುಳಾದೆ ಹರಿಯೆ ॥ ೯ ॥

ಜ್ವರದ ಮೇಲತಿಸಾರ ಬಂದಂತೆ ಯೌವನದಿ ।
ತರುಣಿಯೊಡನಾಡಿ ಕೂಡಿದ ವಿಷಯದಿ ॥
ತರುಣಿ-ಸುತರ್ಗನ್ನ ವಸ್ತ್ರಾಭರಣವೆಂದೆನುತ ।
ಪರರ ಸೇವೆಯಲಿ ನಾ ಕಡುನೊಂದೆ ಹರಿಯೆ ॥ ೧೦ ॥

ನೆತ್ತರವು ತೊಗಲು ಮಾಂಸದ ಹುತ್ತು ಜೊತ್ತುಗಳ ।
ಹತ್ತು ಇಂದ್ರಿಯದ ಬಹುರೋಗದಿಂದ ॥
ಮತ್ತೆ ಕಾಲನ ಬಾಯತುತ್ತು ಬಹುವಿಧ ಕರ್ಮ- ॥
ಕತ್ತಲೆಯೊಳೀ ದೇಹ ಕರಡಾಯ್ತು ಹರಿಯೆ ॥ ೧೧ ॥

ದಿಟ್ಟತನದಲಿ ಗಳಿಸಿ ತರುವಾಗ ಸತಿಸುತರು ।
ಕಟ್ಟಿ ಕಾದಿಹರು ಮುಪ್ಪಡಸಲಾಗ ॥
ತಟ್ಟನೇ ಕೆಟ್ಟನುಡಿಗಳ ಬಯ್ಯುತಳಲುವರು ।
ಮುಟ್ಟಿನೋಡರು ಸರಕುಮಾಡರ್ರೆ ಹರಿಯೆ ॥ ೧೨ ॥

ವಿಷ್ಟವಜ್ಜ್ನೆಯು ಮಾಡೆ ಮತ್ತವನಿಗಳಲುತಿರೆ ।
ಕಟ್ಟಳೆಯು ದಿನ ತುಂಬಿ ಮೃತನಾಗಲು ।
ಕುಟ್ಟಿಕೊಂಡಳುತ ಹೋಯೆನುತ ಬಂಧುಗಳಿಲ್ಲ ।
ಮುಟ್ಟದಲೆ ಹೆಣನೆಂದು ದೂರದೊಳಗಿಹರು ॥ ೧೩ ॥

ಸತ್ತ ಹೆಣಕಳಲೇತಕೆಂದು ಬಂಧುಗಳೆಲ್ಲ ।
ಸುತ್ತಿದುರ್ಗ ಹೊತ್ತುಹೋಯಿತು ಎನ್ನುತ
ಹೊತ್ತುಕೊಂಡಗ್ನಿಯಲಿ ತನುವ ಬೀಸಾಡುವರು ।
ಮತ್ತೆ ಧರಣಿಯಲಿ ನಾ ಜನಿಸಬೇಡವೊ ಹರಿಯೆ ॥ ೧೪ ॥

ಇನ್ನು ಈ ಪರಿಪರಿಯ ಯೋನಿಮುಖದಲಿ ಬಂದು ।
ಬನ್ನವನು ಪಡಲಾರೆ ಭವಭವದೊಳು ॥
ಜನ್ಮ-ಮರಣಾದಿ ಕ್ಲೇಶಗಳನ್ನು ಪರಿಹರಿಸಿ ।
ಸನ್ಮತಿಯನೊಳಿರಿಸೆನ್ನ ಪುರಂದರವಿಠಲ ॥ ೧೫ ॥

೮

ರಾಗ—ಕಾಂಬೋದಿ ತಾಳ—ತ್ರಿವಿಡಿ

[೧]ನಂದಿತಯ್ಯ ಪ್ರಾಯವು ।
ಸಂದಿತಯ್ಯ ಪ್ರಾಯವು ॥ ಪ ॥

ತಂದೆಯುದರದಿ ಮೂರು ತಿಂಗಳು ।
ಸಂದು ಹೋಯಿತು ತಿಳಿಯದೆ ॥
ಬಂದೆ ತಾಯಿಯ ಜಠರದಲಿ ಮು- ।
ತ್ತೊಂದು ಬುದ್ಧಿಯನರಿಯದೆ ॥
ಬೆಂದೆ ನವಮಾಸದಲಿ ಗರ್ಭದಿ ।
ಒಂದು ದಿವಸವು ತಡೆಯದೆ ॥
ಕುಂದದೀಪರಿಯೊಂದು ವರುಷವು ।
ಇಂದಿರೇಶನೆ ಕೇಳು ದುಃಖವ ॥ ೧ ॥

ಕತ್ತಲೆಯೊಳಿರಲಾರೆನೆನುತಲಿ ।
ಹೊತ್ತೆ ಪರಕೆಯ ನಿನ್ನನು ॥

---

೧ ಅ (I) ರ–೨. ಜ್ಞಾ. ಪ್ರತಿಗಳಿಂದ ಆರಿಸಿಕೊಂಡಿದೆ.

ಮತ್ತೆ ಜನಿಸಲು ಭೂಮಿಯೊಳು ನಾ ।
ಅತ್ತು ನಿನ್ನನು ಮರೆತೆನು ॥
ಮತ್ತೆ ಮಲ-ಮೂತ್ರದೊಳು ಬಾಲ್ಯದಿ ।
ಹೊತ್ತು ದಿನಗಳ ಕಳೆದೆನು ॥
ಮತ್ತೆ ನರಕದೊಳುರುಳುತುರುಳುತ ।
ಉತ್ತಮೋತ್ತಮ ನಿನ್ನ ನೆನೆಯದೆ ॥ ೨ ॥

ಚಿಕ್ಕತನವನು ಮಕ್ಕಳಾಟದಿ ।
ಅಕ್ಕರಿಂದಲಿ ಕಳೆದೆನು ॥
ನೊಕ್ಕಿ ಹದಿನಾರರಲಿ ನಾನತಿ ।
ಮಿಕ್ಕಿ ನಡೆದೆನು ನಿನ್ನನು ॥
ಸಿಕ್ಕಿ ಬಹು ಸಂಸಾರಮಾಯೆಯ ।
ಕಕ್ಕುಲಿತೆಯೊಳು ಬಿದ್ದೆನು ॥
ಹೊಕ್ಕುದಿಲ್ಲವು ನಿನ್ನ ಪಾದವ ।
ರಕ್ಕನಾರಿಯೆ ಕೇಳು ದುಃಖವ ॥ ೩ ॥

ಸುಳಿದೆ ಮನೆಮನೆ ಕಳೆದೆ ಕಾಲವ ।
ಉಳಿದ ಯೋಚನೆ ಮಾಡದೆ ॥
ಬೆಳೆದೆ ತಾಳೆಯ ಮರದ ತೆರದಲಿ ।
ಉಳಿವ ಬಗೆಯನು ನೋಡದೆ ॥
ಎಳೆಯ ಮನದೊಳೆ ಇಳೆಯ ಜನರೊಳು ।
ಬಳಕೆ ಮಾತುಗಳಾಡಿದೆ ॥
ಕಳೆದೆ ಈ ಪರಿಯಿಂದ ಕಾಲವ ।
ನಳಿನನಾಭನೆ ನಿನ್ನ ನೆನೆಯದೆ ॥ ೪ ॥

ಎಡೆಬಿಡದೆ ಅನುದಿನದಿ ಪಾಪದ ।
ಕಡಲೊಳಗೆ ನಾನಾಳ್ದೆನು ॥
ದಡವ ಕಾಣದೆ ಮಧ್ಯದಲಿ ಎ- ।
ನ್ನೊಡಲೊಳಗೆ ನಾನೊಂದೆನು ॥

ದೃಢದಿ ನಿನ್ನಯ ಧ್ಯಾನವೆಂಬಾ ।
ಹಡಗವೇರಿಸು ಎನ್ನನು ॥
ಒಡೆಯ ಪುರಂದರವಿಠಲ ಎನ್ನನು ।
ಬಿಡದೆ ಕಾಯ್ಯೊ ಬೇಗ ಶ್ರೀಹರಿ ॥ ೫ ॥

೯

## ಉಗಾಭೋಗ

(೧)

೧ಇಂದಿಗೆಂಬಾ ಚಿಂತೆ ನಾಳಿಗೆಂಬಾ ಚಿಂತೆ ।
ನಾಡಿದಿಗೆಂಬಾ ಚಿಂತೆ ತೊತ್ತಿಗೇಕಯ್ಯ ।
ಒಡೆಯನುಳ್ಳನಕ ಕೊತ್ತಿಗೇತರ ಚಿಂತೆ ।
ಅಡಿಗಡಿಗೆ ನನ್ನುನಾಳುವ ಕಾವ ಚಿಂತೆಯುವ ।
ನೊಡೆಯ ಪುರಂದರವಿಠಲರಾಯನು ಇರುತಿರೆ ।
ಒಡೆಯನುಳ್ಳ ಕೊತ್ತಿಗೇತರ ಚಿಂತೆ ॥

(೨)

೨ಗಾಣದೆತ್ತಿನಂತೆ ತಿರುಗಾಡಲಾರೆ ।
ದಂಡಿಯ ನೊಗದಂತೆ ಬೀಳಲಾರೆ ।
ನವಿಲಂತೆ ನಾನಿನ್ನು ನೆಗೆದಾಡಲಾರೆ ।
ಗಿಳಿಯಂತೆ ನಾನಿನ್ನು ಕೂಗಾಡಲಾರೆ ।
ಪುರಂದರವಿಠಲನ್ನ ಕಾಣದೆ ।
ಧರೆಮೇಲೆ ಮತ್ತೆ ಕೇಳಲಾರೆ ॥

---

೧) ಓ ೨ ಪ್ರತಿಯಿ ೦ಕೊಂಡಿದೆ.
೨) ಜ (III) ಪ್ರತಿಯಿಂದ ತೆಗೆದುಕೊಂಡಿದೆ.

# ೨ ಪಶ್ಚಾತ್ತಾಪ

## ೧೦

ರಾಗ— ಕೇದಾರಗೌಳ                    ತಾಳ ಅಟ

[೧]ಇನ್ನೇನು ಗತಿ ಎನಗೆಲೊ ಹರಿಯೆ ।
ನಿನ್ನನು ನೆನೆಯದೆ ಮೋಸಹೋದೆನಲ್ಲ ॥ ಪ ॥

ಅಂಕದೊಳಾಡುವ ಶಿಶುವಿನ ಮುದ್ದಿನ ।
ಬಿಂಕದ ನುಡಿಗಳ ಕೇಳುತಲಿ ॥
ಕಿಂಕಿಣಿಧ್ವನಿಯನು ಕಿವಿಗೊಟ್ಟು ಕೇಳುತ ।
ಮಂಕುಹರಿಣನಂತೆ ಆದೆನಲ್ಲ ॥ ೧ ॥

ಪರವನಿತೆಯರ ಲಾವಣ್ಯಕೆ ಲೋಚನ ।
ಚರಿಸುತಲವರ ಕೂಟಕೆ ಬೆರಸಿ ॥
ಉರಿವ ಕಿಚ್ಚು ತನಗೆ ಹಿತವೆಂದು ಅದರೊಳು ।
ಎರಗಿದ ಪತಂಗದಂತಾದೆನಲ್ಲ ॥ ೨ ॥

ತೊಡೆಯೆಡೆ ಗುಹ್ಯಕಾಂಬೆನೊ ಕಾಣೆನೋ ಎಂದು ।
ಮಡದಿಯರಂಗಸಂಗವ ಮಾಡುತ ॥
ಒಡಲ ತೀಟಕೆ ಪೋಗಿ ಬಡಿಗಲ್ಲ ಕೆಡಹಿಕೊಂ- ।
ಡಡಗಿದ ಮೂಷಕನಂತಾದೆನಲ್ಲ ॥ ೩ ॥

ಸಲೆ ನಿಜವೃತ್ತಿಯ ಬಿಟ್ಟು ಪರಾನ್ನವ ।
ನಲಿದುಂಡು ಹೊಟ್ಟೆಯ ಹೊರೆಯುತಲಿ ॥
ಬಲೆಯ ತುದಿಯ ಮಾಂಸಕೆ ಬಂದೆರಗುತ ।
ಸಿಲುಕಿದ ಮೀನನಂತಾದೆನಲ್ಲ ॥ ೪ ॥

---

(೧) ಅ (೧೧) ಪ್ರತಿಯಿಂದ ತೆಗೆದುಕೊಂಡಿದೆ. ಮುದ್ರಿತ ಪ್ರತಿಗಳಲ್ಲಿ ಈ ಹಾಡು ಬಹಳ ವಿಕಾರಗೊಂಡಿದೆ. ೩ನೆಯ ನುಡಿ ಅಲ್ಲಿ ಕಾಣುವುದಿಲ್ಲ.

ಲಂಪಟನಾಗಿ ನಾರಿಯರ ಮುಖಾಬ್ಜದ ।
ಸೊಂಪಿನ ಕಂಪನಾಘ್ರಾಣಿಸುತ ॥
ಸಂಪಿಗೆಹೂವಿನ ಮೇಲೆ ಮಲಗಿ ತನ್ನ ।
ಸೊಂಪಳಿದಳಿಯಂತೆ ನಾನಾದೆನಲ್ಲ ॥ ೫ ॥

ಇಂತು ಪಂಚೇಂದ್ರಿಯ ತಮತಮ್ಮ ವಿಷಯಕೆ ।
ಮುಂತಾಗಿ ತಮ್ಮ ತಾವಲೆಯುತಿರೆ ॥
ಸಂತತ ತಮತಮ ವಿಷಯಕೆ ಎಳಸಲು ।
ಕಾಂತಾರದರಸನಂತೆ ಆದೆನಲ್ಲ ॥ ೬ ॥

ಕಂದರ್ಪಲೀಲೆಯ ಗೆಲಿದುಳ್ಳ ಭಕ್ತಿಯ ।
ತಂದು ಪಂಚೇಂದ್ರಿಯಗಳಿಗೆನ್ನಯ ॥
ತಂದೆಪುರಂದರ ವಿಠಲನ ನೆನೆದರೆ ।
ಮುಂದೆಂದಿಗೂ ಭವಬಂಧನ ಬಾರದಲ್ಲ ॥ ೭ ॥

## ೧೧

ರಾಗ—ಕಾಂಬೋದಿ ತಾಳ—ಅಟ

೧ಚಿಹಿ ಹಳಿ— ಧೂ ಖೋಡಿ ಪಾಪಿ ಮನವೇ ಇಂಥ- ।
ಕುಹಕಬುದ್ಧಿಯನು ನೀ ಬಿಡು ಕಾಣೊ ಮನವೇ ॥ ಪ ॥

ಬಣ್ಣದ ಬೀಸಣಿಕೆಯಂತೆ ಹೆಣ್ಣು ತಿರುಗುವುದ ಕಂಡು ।
ಕಣ್ಣಸನ್ನೆಮಾಡಿ ಕೈಯ ಹೊನ್ನ ತೋರಿಸಿ ॥
ತಣ್ಣೀರು ಹೊಯ್ದು ಹೊಸ ಸುಣ್ಣದಂದದಿ ಕುದಿದು ಕುದಿದು ।
ಕಣ್ಣಿನೊಳು ಮಣ್ಣ ಚೆಲ್ಲಿಕೊಂಬರೇ ಮನವೆ ॥ ೧ ॥

ಪಗಡೆ ಚದುರಂಗ ಲೆತ್ತವನಾಡೆ ಕರೆದರೆ ।
ನಿಗುರಿದುವು ಕರ್ಣಗಳು ಪೂಚ್ಚಿಯಂತೆ ॥
ಜಗದೀಶ್ವರನ ದಿನದಿ ಜಾಗರಕೆ ಕರೆದರೆ ।
ಮುಗಿಲು ಹರಿದು ಧರೆಗಿಳಿದಂತೆ ಮನವೇ ॥ ೨ ॥

---

(೧) ಅ(೧), ಅ (H), ಇ. ಶ್ರೀಪತಿಗಳಲ್ಲಿ ಈ ಹಾಡು ಸಿಕ್ಕುತ್ತಿದೆ.

ವಾಸುದೇವನ ಪೂಜೆ ಒಮ್ಮೆ ಮಾಡೆಂದರೆ ।
ಬೇಸತ್ತು ತಲೆಯು ಚಿಟ್ಟೆಕ್ಕಿ ಕುಳಿತೆ ॥
ಆಸಮಯದಲೊಬ್ಬ ಕಾಸು ಕೊಡಲು ಅವನ ।
ದಾಸಿಯ ಮಗನಂತೆ ಬೆಂಬಿಡಿದೆ ಮನವೇ ॥ ೩ ॥

ನೆರೆಮನೆ ಹೊರೆಮನೆ ಪ್ರಸ್ತವಾದರೆ ಅವರು ।
ಕರೆಯದ ಮುನ್ನವೆ ಹೊರಹೊರಟೆ ॥
ಬರಿಗಂಟು ಬರಿಮಾತು ಸುಳ್ಳುಸುದ್ದಿಯ ಹೇಳಿ ।
ಹಿರಿಯ ಮಗನಂತೊಡಲ ಹೊರಕೊಂಬೆ ಮನವೆ ॥ ೪ ॥

ಬಿಂದುಮಾತ್ರವೆ ಸುಖ–ದುಃಖವರ್ವತದಷ್ಟು ।
ಸಂದೇಹವಿಲ್ಲವಿದು ಶಾಸ್ತ್ರಸಿದ್ಧ ॥
ಎಂದೆಂದಿಗೂ ನಮ್ಮ ಪುರಂದರವಿಠಲನ ।
ಹೊಂದಿಹೊಂದಿ ನೀ ಸುಖಬಾಳೊ ಮನವೇ ॥ ೫ ॥

## ೧೨

ರಾಗ— ತೋಡಿ ತಾಳ— ಅಟ

[೧]ಮನವೆನ್ನ ಮಾತಕೇಳದು–ಮಂದಜ್ಞಾನದಿ ।
ತನುವಿನಾಸೆಯ ಬಿಡಲೊಲ್ಲದು ॥ ಪ ॥

ವನಜನಾಭನೆ ನಿನ್ನ ನಾಮ ಸಾಸಿರವ ।
ನೆನೆಯದೆ ಕಂಡಕಡೆಗೆ ಎರಗುತಲಿದೆ ॥ ಅ. ಪ ॥

ದೇಹಸಂಬಂಧಿಗಳಾದವರ್ಕೆವರು ।
ಮೋಹವಾಶದಿ ಕಟ್ಟಿ ಬಿಗಿದಿಹರ್ಕೈ ॥
ಕಾಯ ಅನಿತ್ಯವೆಂಬುದನರಿತರಿಯದೆ ।
ಮಾಯಾಪ್ರಪಂಚದಿಂದಲಿ ಬದ್ಧನಾಗಿಹೆ ॥ ೧ ॥

(೧) ಮು–ಪ್ರತಿಯಿಂದ ತೆಗೆದುಕೊಂಡಿದೆ.

ಸಾಧುಸಜ್ಜನರ ಸಂಗವ ಮಾಡಿ ಪರಗತಿ- ।
ಗಾಧಾರವನು ಮಾಡಲೊಲ್ಲದಯ್ಯ ॥
ಕ್ರೋಧ ಕುಹಕ ದುಷ್ಟರೊಡನಾಡಿ ಕಾಲನ ।
ಬಾಧೆಗೆ ಒಳಗಾಗುವಂತೆ ಮಾಡುತಲಿದೆ ॥ ೨ ॥

ಮದಗಜ ಮೈಯ ಮರೆತು ಮುಂದುಗಾಣದೆ ।
ಕದುವಿನೊಳಗೆ ಬಿದ್ದಂತಾದೆನಯ್ಯ ॥
ಹೃದಯ ಕಮಲದಲಿ ನಿಂತು ರಕ್ಷಿಸೋ ಎನ್ನ ।
ಪದುಮಾಕ್ಷ ವರದ ಶ್ರೀಪುರಂದರವಿಠಲ ॥ ೩ ॥

## ೧೩

ರಾಗ — ಶಂಕರಾಭರಣ ತಾಳ — ಅಟ

[1]ಧರ್ಮಕ್ಕೆ ಕೈಬಾರದೀ ಕಾಲ—ಪಾಪ- ।
ಕರ್ಮಕ್ಕೆ [2]ಮನ ಬಾಹುದೀ ಕಲಿಕಾಲ ॥ ಪ ॥

ದಂಡ-ದೋಷಕೆ ಉಂಟು ಪುಂಡು-ಪೋಕರಿಗುಂಟು ।
ಹೆಂಡಿರು-ಮಕ್ಕಳಿಗಿಲ್ಲವೀ ಕಲಿಕಾಲ ॥
ಭಂಡೆಯರಿಗುಂಟು ದಿಂಡೆಯರಿಗುಂಟು—ಬೇಡಿ- ।
ಕೊಂಡವರಿಗಿಲ್ಲವು ಈ ಕಲಿಕಾಲ ॥ ೧ ॥

ಒತ್ತೆ ಸೂಳೆಗುಂಟು ಮತ್ತೆ ಹಾದರಕುಂಟು ।
ಹೆತ್ತತಾಯಿಗಿಲ್ಲ ಈ ಕಲಿಕಾಲ ॥
ತೊತ್ತೆಯರಿಗೆ ಉಂಟು ಆರ್ತಿಕಾರ್ತಿಗಿಲ್ಲ ।
ಉತ್ತಮರಿಗೆ ಇಲ್ಲವೀ ಕಲಿಕಾಲ ॥ ೨ ॥

---

೧ ಕ. ವಿ. ವಿ. ತಾಳೆಗರಿಯಿಂದ ಪ್ರತಿಮಾಡಿದೆ. (೧೭೫೦. ನಂ. ೧೮೫೮)
೨ ಮನಸೋಲುವುದೀಕಾಲ (ಬಹುಮತ)

ಹುಸಿ ದಿಟವಾಯಿತು ರಸ-ಕಸವಾಯಿತು ।
ಮಸಿ ಮಾಣಿಕವಾಯಿತೀ ಕಾಲ ॥
ವಸುಧೆಯೊಳಗೆ ನಮ್ಮ ಪುರಂದರವಿಠಲನ ।
ಬೆಸಸಿ ಪೂಜಿಪರ್ಗಿಲ್ಲ ಈ ಕಲಿಕಾಲ ॥ ೩ ॥

## ೧೪

ರಾಗ—ಸುರಟಿ ತಾಳ—ಆದಿ

ಮೋಸಹೋದೆನಲ್ಲ—ಸಕಲವು- ।
ವಾಸುದೇವ ಬಲ್ಲ ॥ ಪ ॥

ಭಾಸುರಾಂಗ ಶ್ರೀ—ವಾಸುಕಿಶಯನನ ।
ಸಾಸಿರನಾಮವ ಲೇಸಾಗಿ ಪಠಿಸದೆ ॥ ಅ ಪ ॥

ದುಷ್ಟಜನರ ಕೂಡಿ—ನಾನತಿ- ।
ಭ್ರಷ್ಟನಾದೆ ನೋಡಿ ॥
ಸೃಷ್ಟಿಗೊಡೆಯ ಮುರ-ಮುಷ್ಟಿಕ ವೈರಿಯ ।
ದೃಷ್ಟಿಯಿಂದ ನಾ ನಿಟ್ಟಿಸಿ ನೋಡದೆ ॥ ೧ ॥

ಕಾಯವು ಸ್ಥಿರವಲ್ಲ—ಎನ್ನೊಳು- ।
ಮಾಯೆ ತುಂಬಿತಲ್ಲ ॥
ಪ್ರಾಯಮದದಿ ಪರಸ್ತ್ರೀಯರ ಕೂಡುತೆ ।
ಕಾಯಜಜನಕನ ಧ್ಯಾನವ ಮಾಡದೆ ॥ ೨ ॥

ಕಂಗಳಿಂದಲಿ ನೋಡೊ—ದೇವಾ ನಿ- ।
ನ್ನಂಗಸಂಗವ ನೀಡೊ ॥
ಮಂಗಳಮಹಿಮ ಶ್ರೀಪುರಂದರವಿಠಲ ನಿ- ।
[೨]ನ್ನಂಗದೊಳಿರುವಂತೆ ದಯವನು ಮಾಡೊ ॥ ೩ ॥

೧ ಕ. ವಿ. ವಿ. ತಾಳೆಗರಿಯಿಂದ ಪ್ರತಿಮಾಡಿದೆ. (೧೭೫೦- ನಂ ೧೮೫೪)
೨ ಮುನ್ನಂಗಬಾರದಂತೆ ನೀ ದಯಮಾಡೊ (ಬಹುಮತ)

೧೫

## ಸುಳಾದಿ

### ಧ್ರುವತಾಳ

[೧]ಒಂದಪರಾಧವೆ ಹರಿಹರಿ, ಎರಡಪರಾಧವೆ ಹರಿಹರಿ. ।
ಒಂದೊಂದೂ ಪರ್ವತದಂತಹದೋ ದೇವಾ ।
ಒಂದನಂತ ಸಾಸಿರ ಲಕ್ಷ ಕೋಟಿ ಅಪರಾಧ ।
ಒಂದಾಗಿನೋಡದೆ ಹರಿ ನೀ ಹಿಂದಿಕ್ಕಿಕೊಂಡು ಕಾದೆ ।
ಎಂದೆಂದೂ ನಿನಗೆ ನಾ ಸಲೆ ದೂರ ದೂರ ಹೋದೆ ಪು- ।
ರಂದರವಿಟ್ಠಲ ಕೃಪಾಸಿಂಧುವೆ ನೀನಲ್ಲದುಂಟೆ ॥ ೧ ॥

### ಮಟ್ಠತಾಳ

ಆನೆಂತಾಡುವೆ ಆನೆಂತು ಪಾಡುವೆ ।
ಆನೆಂತೆಂತು ಮನಬಂದಂತೆ ನಡೆವೆ ನುಡಿವೆ ।
ಒಡನಾಡಿಯಾಗಿರ್ಪ ಒಡನಿರ್ದು ಆಡಿಸುತಿಪ್ಪ ।
ಪುರಂದರವಿಠಲನೊಬ್ಬನೆ ಕಾಣಿರೊ ॥ ೨ ॥

### ತ್ರಿಪುಟತಾಳ

ಶ್ರುತಿಗಳಿವೆ ಸ್ಮೃತಿಗಳಿವೆ ।
ಯತಿತತಿ ಪರಕೋಟಿಗಳ ಮಂತ್ರಂಗಳಿವೆ ।
ಇದೇನಯ್ಯ ಅತರ್ಕ್ಯನಪ್ರಮೇಯವಾಣಿ
ಇದೇನಯ್ಯ ಪುರಂದರವಿಠಲ ।
ಒಲಿದವರಿಗಳವಡುವೆಯಲ್ಲವೆ ॥ ೩ ॥

### ಅಟ್ಟತಾಳ

ಉತ್ತುಂಗಸತ್ತ್ವ ಉತ್ತುಂಗನಾಮ ಉತ್ತುಂಗಮಹಿಮ
ತುರಿಯಾತುರಿಯ-ತುರಿಯಾತೀತ ।
ಉತ್ತುಂಗ ಪಾಂಡುರಂಗ
ಉತ್ತುಂಗ ಪುರಂದರವಿಟ್ಠಲರಾಯ ॥ ೪ ॥

---

(೧) ಇ (ಮುದ್ರಿತ) ಪ್ರತಿಯಿಂದ ಅರಿಸಿಕೊಂಡಿದೆ.

### ರೂಪಕತಾಳ

ಹಿರಿಯರಿಗೆ ಗುರುಗಳಿಗೆ ದೈವಜ್ಞರುಗಳಿಗೆ ।
ಶರಣೆನ್ನದೆ ಅನ್ಯಥಾ ಹರಿಭಕುತಿ ಪುಟ್ಟುವುದೆ ।
ಪುರಂದರ ವಿಠಲ ಹಿರಿಯರ ಕೈಪಿಡಿದವನಯ್ಯ ॥ ೫ ॥

### ಆದಿತಾಳ

ಸಾತ್ತ್ವಿಕರ ದೈವವೆ ನಿನ್ನ ।
ಸಾತ್ತ್ವಿಕ ಭಕುತಿದೊರೆಕೊಂಬುದಲ್ಲವೇ ।
ಸಾತ್ತ್ವಿಕಪ್ರಿಯ ಪುರಂದರವಿಟ್ಠಲರಾಯ ॥ ೬ ॥

### ಏಕತಾಳ

ಸನಕ ಸನಂದನ ಸನತ್ಕುಮಾರ ಸನತ್ಸುಜಾತ ।
ಹನುಮಂತ ತುಂಬುರು ನಾರದಾದಿಗಳು ।
ಅನೇಕಾನೇಕ ವಿಧದಲಿ ಪಾಡುತಿರೆ ।
ಅನರ್ಘ್ಯ ರತುನಾದಿಗಳು ಪಾದಾ- ।
ರ್ಚನೆಗೈಸಿರಿ ಬರೆ ನೋಡೆ ನುಡಿಸಿ ।
ಅನೇಕವಿಧದಲಿ ಪಾಡುತಿರೆ ।
ಇದೇನು ಮಹಿಮೆ ಇದೇನು ಘನತೆಯೊ ।
ನೀನೆ ಬಲ್ಲೆ ಪುರಂದರವಿಠಲ ॥ ೭ ॥

### ಜತೆ

ವೈಕುಂಠಪುರದಲ್ಲಿ ಯೋಗಿಹೃದಯದಲ್ಲಿ ।
ವೈಕುಂಠಪ್ರಿಯ ಪುರಂದರವಿಠಲ ನೀನಿಪ್ಪೆ ಕಾಣೊ
ಸೂರ್ಯನಲ್ಲಿ ॥

## ೧೬

ರಾಗ— ಆನಂದಭೈರವಿ                    ತಾಳ—ಆದಿ

ಹೇಗೆ ಉದ್ಧಾರ ಮಾಡುವನು—ಶ್ರೀಹರಿ ।
ಹೀಗೆ ದಿನಗಳೆದುಳಿದವನ ॥ ಪ ॥

ರಾಗದಿಂದಲಿ ಭಾಗವತರಿಗೆ ।
ಬಾಗದಲೆ ತಲೆ ಹೋಗುವಾತನ ॥ ಅ. ಪ ॥

ಅರುಣೋದಯದಲೆದ್ದು ಹರಿಯೆನ್ನದಲೆ ಗೊಡ್ಡು ।
ಹರಟೆಯಲಿ ಹೊತ್ತು ಏರಿಸಿದವನ ॥
ಸಿರಿತುಲಸಿಗೆ ನೀರನೆರೆದು ನಿರಂತರ ।
ಧರಿಸದೆ ಮೃತ್ತಿಕೆ ತಿರುಗುತಲಿಪ್ಪನ ॥
ಮರೆತು ಸ್ನಾನ ಮನೆಮನೆ ತಿರುಗುತ ಹೊಟ್ಟೆ ।
ಕೆರೆದಾಗ ಬೇಯಿಸಿಕೊಂಡು ತಿನ್ನುವನ ॥ ೧ ॥

ಗುರು-ಹಿರಿಯರ ಸೇವೆ ಜರೆದು ನಿರಂತರ ।
ಪರನಿಂದೆಯ ಮಾಡಿ ನಗುತಿಹನ ॥
ಪರಹೆಣ್ಣು ಪರಹೊನ್ನು ಕರಗತವಾಗಲೆಂದು ।
ಪರಲೋಕ ಭಯಬಿಟ್ಟು ತಿರುಗುವನ ॥
ತರುಣಿ ಮಕ್ಕಳನು ಇರದೆ ಪೋಷಿಸಲೆಂದು ।
ಪರರ ದ್ರವ್ಯ ಕಳವು ವಂಚನೆ ಮಾಳ್ಪನ ॥ ೨ ॥

ನಡೆಯಿಲ್ಲ ನುಡಿಯಿಲ್ಲ ಪಡೆಯಲಿಲ್ಲ ಪುಣ್ಯವ ।
ಬಿಡವು ನಿನ್ನ ಪಾಪಕರ್ಮಗಳೆಂದಿಗು ॥
ಸಡಿಲಿದಾಯುಷ್ಯವು ಕಡೆಗೂ ಸ್ಥಿರವೆಂದು ।
ಕಡುಮೆಚ್ಚಿ ವಿಷಯದೊಳಿಪ್ಪನ ॥
ಒಡೆಯ ಶ್ರೀಪುರಂದರವಿಟ್ಠಲರಾಯನ ।
ಅಡಿಗಳ ಪಿಡಿಯದೆ ಕಡೆಗೂ ಕೆಟ್ಟವನ ॥ ೩ ॥

---

(೧) ಇದು (೬) ಪ್ರತಿಯಲ್ಲಿಯೇ ದೊರಕುತ್ತದೆ.

## ೧೭

ರಾಗ—ಕಲ್ಯಾಣಿ ತಾಳ—ಝಂಪೆ

೧ಕಲಿಯುಗದ ಮಹಿಮೆಯನು ಕಾಣಬೇಕಿಂತು ॥ ಪ ॥

ಹರಿಸ್ಮರಣೆಯನು ಬಿಟ್ಟು ಹೀನರನೆ ಸ್ತುತಿಸುವರು ।
ಗುರುಹಿರಿಯರೊಳು ದೋಷವೆಣಿಸುತಿಹರು ।
ಪೊರೆದ ತಾಯ್ತಂದೆಗಳ ಮಾತ ಕೇಳದೆ ತಮ್ಮ ।
ತರುಣಿಯರ ನುಡಿಗಳನು ಲಾಲಿಸುತ್ತಿಹರು ॥ ೧ ॥

ಕಂಡುದನೆ ಹೇಳರು ಕಾಣದನೆ ಹೇಳುವರು ।
ಉಂಡ ಮನೆಗೆರಡನ್ನೆ ಎಣಿಸುತಿಹರು ॥
ಕೊಂಡಾಡಿ ಬೇಡಿದರೆ ಕೊಡರೊಂದು ರುವಿಯನು ।
ದಂಡಿಸುವರಿಂಗೆ ಧನಗಳನು ಕೊಡುತಿಹರು ॥ ೨ ॥

ಕಳ್ಳರೊಳು ಕಡುಸ್ನೇಹ ಸುಳ್ಳರೊಳು ಸೋಲುವರು ।
ಒಳ್ಳೆಯವರೊಡನೆ ವಂಚನೆ ಮಾಳ್ಪರು ॥
ಇಲ್ಲದ ಅನಾಥರಿಗೆ ಇದ್ದಷ್ಟು ತಾವ್ ಕೊಡರು ।
ಬಲ್ಲಿದವರಿಗೆ ಬಾಯ ಸವಿಯನುಣಿಸುವರು ॥ ೩ ॥

ಪಟ್ಟದರಸಿಯನಗಲಿ ಮೋಸದಲಿ ತಪ್ಪುವರು ।
ಕೊಟ್ಟ ಸಾಲವ ನುಂಗಿ ಕೊಡದಿಪ್ಪರು ॥
ಮುಟ್ಟಿ ಪರಹೆಣ್ಣಿಂಗೆ ಮೋಸದಲಿ ಕೂಡುವರು ।
ಬಿಟ್ಟು ಕುಲಸ್ವಾಮಿಯನು ಬಡದೈವಕೆರಗುವರು ॥ ೪ ॥

ಮಾಡಿದುಪಕಾರವನು ಮರೆತು ಕಳೆವರು ಮತ್ತೆ ।
ಕೂಡಾಡಿ ಬೇಡುವರು ಕುಟಿಲತ್ವದಿಂದ ॥
ರೂಢಿಗೊಡೆಯನು ನಮ್ಮ ಪುರಂದರವಿಟ್ಠಲನ ।
ಪಾಡಿ ಪೊಗಳುವರಿಂಗೆ ಭವಭಯಗಳಿಲ್ಲ ॥ ೫ ॥

೧) ಈ ಹಾಡನ್ನು ಕ. ವಿ. ವಿ. ತಾಳೆಗರಿಯ ಪ್ರತಿಯಲ್ಲಿದ್ದಂತೆ ಬರೆದಿದೆ. (೧೭೫೦. ನಂ. ೧೮೫೮) ಉಳಿದ ಪ್ರತಿಗಳಲ್ಲಿ ವಿಕಾರಗಳು ಹೆಚ್ಚಾಗಿವೆ.

# ೩. ಬಿನ್ನಹ

## ೧೮

ರಾಗ— ಆಹಿರ (ಕಾಂಬೋದಿ) ತಾಳ—ಝಂಪೆ

[೧]ಬಿನ್ನಹಕೆ ಬಾಯಿಲ್ಲ ಎನಗೆ ಆದರಿಂದ ।
[೨]ನಿನ್ನ ಮರೆದೆನೊ ಸ್ವಾಮಿ ಎನ್ನ ಕಾಯಯ್ಯ ॥ ಪ ॥

ಅನ್ನಮದ ಅರ್ಥಮದ ಅಖಿಳ ವೈಭವದ ಮದ ।
ಮುನ್ನ ಪ್ರಾಯದ ಮದವು ರೂಪಮದವು ॥
ತನ್ನ ಸತ್ತ್ವದ ಮದ ಧರಿತ್ರಿ ವಶವಾದ ಮದ ।
ಇನ್ನು ಎನಗಿದಿರಿಲ್ಲವೆಂಬ ಮದದಿ ॥ ೧ ॥

ಶಶಿವದನೆಯರ ಮೋಹ ಜನನಿ-ಜನಕರ ಮೋಹ ।
ರಸಿಕ ಭ್ರಾಂತಿಯ ಮೋಹ ರಾಜಮನ್ನಣೆ ಮೋಹ ॥
ಪಶುಮೋಹ ಶಿಶುಮೋಹ ಬಂಧುವರ್ಗದ ಮೋಹ ।
ಹಸನುಳ್ಳವಸ್ತ್ರ ಆಭರಣಗಳ ಮದದಿ ॥ ೨ ॥

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ ।
ಅಷ್ಟು ದೊರಕಿದರೆ ಮತ್ತಷ್ಟರಾಸೆ ॥
ಕಷ್ಟ ಜೀವನದಾಸೆ ಕಾಣಾಚಿಕೊಂಬಾಸೆ ।
ನಷ್ಟಜೀವನ ಬಿಡಿಸೊ ಪುರಂದರವಿಠಲ ॥ ೩ ॥

---

(೧) ಆ (II). ಇ (೧೦) ಪ್ರತಿಗಳಲ್ಲಿ ಸಿಕ್ಕುತ್ತಿದೆ.
(೨) ಅನಂತ ಅಪರಾಧ ಎನ್ನಲ್ಲಿ ಇರಲಾಗಿ (ಎ ಓ).

## ೧೯

ರಾಗ—ಕಾಂಬೋದಿ ತಾಳ—ಝಂಪೆ

೧ ಇಷ್ಟು ಪಾಪವನು ಮಾಡಿದುದೆ ಸಾಕೊ ।
ಸೃಷ್ಟಿಗೀಶನೆ ಎನ್ನನುದ್ಧರಿಸಬೇಕೊ ॥ ಪ ॥

ಒಡಲ ಕಿಚ್ಚಿಗೆ ಪರರ ಕಡು ನೋಯಿಸಿದೆ ಕೃಷ್ಣ ।
ಕೊಡದೆ ಅನ್ಯರ ಋಣವನಪಹರಿಸಿದೆ ॥
ಮಡದಿಯ ನುಡಿ ಕೇಳಿ ಒಡಹುಟ್ಟಿದವರೊಡನೆ ।
ಹಡೆದ ತಾಯಿಯ ಕೂಡ ಹಗೆ ಮಾಡಿದೆ ॥ ೧ ॥

ಸ್ನಾನ ಸಂಧ್ಯಾನ ಜಪ ಮಾಡದಲೆ ಮೈಗೆಟ್ಟೆ ।
ಜ್ಞಾನಮಾರ್ಗವನಂತು ಮೊದಲೆ ಬಿಟ್ಟೆ ॥
ಏನ ಹೇಳಲಿ ಪರರ ಮಾನಿನಿಗೆ ಮನಸಿಟ್ಟೆ ।
ಶ್ವಾನ-ಸೂಕರನಂತೆ ಹೊರೆದೆ ಹೊಟ್ಟೆ ॥ ೨ ॥

ವ್ರತ ನೇಮ ಉಪವಾಸ ಒಂದುದಿನ ಮಾಡಲಿಲ್ಲ ।
ಅತಿಥಿಗಳಿಗನ್ನವನು ನೀಡಲಿಲ್ಲ ॥
ಶ್ರುತಿ ಶಾಸ್ತ್ರ ಪೌರಾಣ ಕಥೆಗಳನು ಕೇಳಲಿಲ್ಲ ।
ವೃಥವಾಗಿ ಬಹುಕಾಲ ಕಳೆದನಲ್ಲ ॥ ೩ ॥

ಶುದ್ಧವೈಷ್ಣವ ಕುಲದಿ ಉದ್ಭವಿಸಿದೆನೊ ನಾನು ।
ಮಧ್ವಮತಸಿದ್ಧಾಂತಪದ್ಧತಿಗಳ ॥
ಬುದ್ಧಿಪೂರ್ವಕ ತಿಳಿದು ಪದ್ಮನಾಭನ ದಿನದಿ ।
ಕದ್ದುಂಡು ಕಾಯವನು ವೃದ್ಧಿಮಾಡಿದೆನಯ್ಯೊ ॥ ೪ ॥

ತಂದೆ-ತಾಯ್ಗಳ ಸೇವೆ ಒಂದು ದಿನ ಮಾಡಲಿಲ್ಲ ।
ಮುಂದಭಾಗ್ಯದ ಭವಣೆ ತಪ್ಪಲಿಲ್ಲ ॥
ಹಿಂದೆ ಮಾಡಿದ ದೋಷ ಒಂದುಳಿಯದರುಹಿದೆನು ।
ತಂದೆ ಪುರಂದರವಿಠಲ ಮುಂದೆನ್ನ ಕಾಯೊ ॥ ೫ ॥

೧) ಉ. ಪ್ರತಿಯಿಂದ ಆರಿಸಿ ಬರೆದಿದೆ, ಎ. ಓ ಪ್ರತಿಗಳಲ್ಲಿ ದೋಷಗಳಿವೆ

## ೨೦

ರಾಗ—ಕಾಂಬೋದಿ (ಮುಖಾರಿ) ತಾಳ—ಝಂಪೆ

[೧]ಋಣವೆಂಬ ಸೂತಕವು ಬಹುಬಾಧೆಬಡಿಸುತಿದೆ ।
ಗುಣನಿಧಿಯೆ ನೀ ಎನ್ನ ಕಡಹಾಯಿಸಯ್ಯ ॥ ಪ ॥

ಒಡಲಿನಾಸೆಗೆ ಪರರ ಕಡೆಯಿಂದ ಧನವನ್ನು ।
ತಡೆಯದಲೆ ತಂದು ಸಂತೋಷಪಡುವೆ ॥
ಕೊಡುವ ವೇಳೆಗೆ ಅವರ ಬಿರುನುಡಿಗಳನು ಕೇಳ್ವ ।
ಕಡುಪಾಪವನ್ನು ನೀ ಕಡೆಹಾಯಿಸಯ್ಯ ॥ ೧ ॥

ಕೊಟ್ಟ ದೊರೆಗಳು ಬಂದು ನಿಷ್ಠುರದ ಮಾತಾಡಿ ।
ಎಷ್ಟು ಬೆಯ್ವರೊ ತಮ್ಮ ಮನದಣಿಯಲು ॥
ದಿಟ್ಟತನವಿಲ್ಲದಲೆ ಕಳೆಯಗುಂದಿದೆನಯ್ಯ ।
ಸೃಷ್ಟಿಗೊಡೆಯನೆ ಎನ್ನ [೨]ಕಷ್ಟಪರಿಹರಿಸೊ ॥ ೨ ॥

ಆಳಿದೊಡೆಯನ ಮಾತ ಕೇಳಿ ನಡೆಯಲುಬಹುದು ।
ಉಳಿಗವ ಮಾಡಿ ಮನದಣಿಯಬಹುದು ॥
ಕಾಳಗವ ಪೊಕ್ಕು ಕಡಿದಾಡಿ ಜಯಿಸಲುಬಹುದು ।
ಪೇಳಲಳವಲ್ಲ ಋಣದವಗೊಂದು ಸೊಲ್ಲ ॥ ೩ ॥

[೩]ಹರಿವ ಹಾವನು ಹಿಡಿದು ತಲೆಗೆ ಸುತ್ತಲುಬಹುದು ।
ಮುರಿವ ಮಾಳಿಗೆಯ ಕೈಯೊಳು ನಿಲಿಸಬಹುದು ॥
ಉರಿವ ಉರಿಯೊಳು ಹೊಕ್ಕು ಹೊರ ಹೊರಟು ಬರಬಹುದು ।
[ಬೆರೆದು] ಸೇರಲು ಬಹುದು ವೈರಿಗಳ ಮನೆಯ ॥ ೪ ॥

---

೧) ಖ (೧) ಝ (೯) ಪ್ರತಿಗಳಿಂದ ಆರಿಸಿಕೊಂಡಿದೆ.
೨) ಝ (೯) ಪ್ರತಿಯ ಪಾಠಾಂತರ
೩) ಧರೆಯೊಳಗೆ ಋಣದವನ ಜಯಿಸಲಳವಲ್ಲ (ಎ. ಪ್ರತಿ)

ಹೆತ್ತ ಸೂತಕ ಹತ್ತುದಿನಕೆ ಪರಿಹಾರವು ।
ಮೃತ್ಯುಸೂತಕವು ಹನ್ನೆರಡು ದಿನವು ॥
ಮತ್ತೆ ಋಣಸೂತಕವು ಜನ್ಮಜನ್ಮಾಂತರದಿ ।
ಹತ್ತಿಕೊಂಡಿಹುದು ಎತ್ತಲು ಹೋಗಗೊಡದೆ ॥ ೫ ॥

ಅವರ ದ್ರವ್ಯವ ದಾನ-ಧರ್ಮವನು ಮಾಡಿದರೆ ।
ಅವರಿಗಲ್ಲದೆ ಪುಣ್ಯ ಇವರಿಗುಂಟೆ ॥
ಅವರ ದ್ರವ್ಯದಿ ತೀರ್ಥ-ಯಾತ್ರೆಯನು ಮಾಡಿದರೆ ।
ಅವರ ಮನೆಬಾಡಿಗೆಯ ಎತ್ತಿನಂದದಲಿ ॥ ೬ ॥

ಬಂಧುಗಳ ಮುಂದೆನ್ನ ಬಹುಮಾನಗಳು ಹೋಗಿ ।
ಕಂದಿ ಕುಂದಿದೆನಯ್ಯ ಕರುಣಾನಿಧೆ ॥
ಇಂದಿರಾರಮಣ ಶ್ರೀಪುರಂದರವಿಠಲನೆ ।
ಇಂದೆನ್ನ ಋಣದಿಂದ ಕಡೆಹಾಯಿಸಯ್ಯ ॥ ೭ ॥

೨೧

ರಾಗ—ಭೈರವಿ ತಾಳ—ತ್ರಿಪುಡಿ

[೧]ಅಗಲಿ ಸೈರಿಸಲಾರದೀ ಮನ ।
ಅಗಲದಿಪ್ಪುದೆ ಜೀವನ ॥
ಪೊಗರೊಗೆವ ನಗೆಮೊಗದ ಸೊಬಗಿನ ।
ಸುಗುಣಸಿರಿ ಗೋಪಾಲನ ॥ ಪ ॥

ಮುನ್ನ ಸಂಸೃತಿಪಾಶದೊಳು ಬಿದ್ದನ್ಯಥಾ ರಕ್ಷಕರ ಕಾಣದೆ ।
ಬನ್ನಬಡುತಿಹ ಜನರನೀಕ್ಷಿಸಿ ಪೂರ್ಣ ಕರುಣಕಟಾಕ್ಷದಿ ॥
ತನ್ನ ನಾಮದ ಸುಧೆಯನುಣ್ಣಿಸಿ ತನ್ನ ಭಜನೆಯ ಸುಖವ ತೋರಿಸಿ ।
ತನ್ನ ದಾಸರಮಾಡಿಕೊಂಡಿಹ ಚೆನ್ನಸಿರಿಗೋಪಾಲನ ॥ ೧ ॥

೧) ಅ (ಲ). ಆ (II)ಇ ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದ ಅಚ್ಚಾದ ಪ್ರತಿಗಳಲ್ಲಿಲ್ಲ.

ಶೀಲಗುಣಕಥನಗಳನರಸದೆ ಕೀಳು ಚಾರಿತ್ರ್ಯಗಳ ಬಗೆಯದೆ ।
ಲೋಲಚಿತ್ತದಿ ಮಾಡುತಿಹ ಅಘಜಾಲ ಕೋಟಿಗಳೆಣಿಸದೆ ॥
ಕಾಲದಿಂ ಬಹುನಂಬಿದವರನು ಲೀಲೆಯಿಂದಭಿಮಾನಿಸುತ-ಪರಿ- ।
ಪಾಲಿಸುತ್ತಿಹ ಮಂಗಳಾತ್ಮಕ ಶೀಲ ಶ್ರೀಕರಮೂರ್ತಿಯ ॥ ೨ ॥

ಭಕ್ತಿಕರ್ಮಜ್ಞಾನ ಯೋಗವಿರಕ್ತಿಯೆಂಬುದನೇನು ಕಾಣದೆ ।
ಮತ್ತೆ ಕೇವಲ ಮೂಢಭಾವದ ಚಿತ್ತದಲಿ ನೆರೆನಂಬಿದ ॥
ಆರ್ತರನು ಅಬಲರ ಅನಾಥರ ಮೃತ್ಯುಮುಖದಿಂದವರ ತಾನೊಲಿ- ।
ದೆತ್ತಿ ಸಲಹುತಲಿಪ್ಪ ನೊಬಗಿನ ಕೀರ್ತಿವಂತ ಮಹಾತ್ಮನ ॥ ೩ ॥

ಕರುಣದಿಂದೆಳಗಂದಿ ಕರುವಿನ ಮೊರೆಯ ಲಾಲಿಸಿ ಬಿಡದೆ ತೃಪ್ತಿಯ ।
ಕರೆದು ಮಾಡುವ ಪರಿಯೆ ತನ್ನಯ ಸ್ಮರಿಸುತಿಹ ಕಡುದೀನರ ॥
ಹೊರಗೆ ಶಿಕ್ಷಿಸಿ ಒಳಗೆ ರಕ್ಷಿಸಿ ಪಿಡಿದು ತನ್ನಯ ನಿಜವನವರಿಗೆ ।
ತೆರುವ ಕರುಣಾಳುಗಳ ದೇವನ ಶರಣಜನ ಮಂದಾರನ ॥ ೪ ॥

ನೇಮದಲಿ ನಂಬಿದರ್ಗೆ ಸೂಚಿಸಿ ಕಾಮವಾಸನೆಗಳನು ಖಂಡಿಸಿ ।
ಪಾಮರರ ಪಂಡಿತರ ಮಾಡಿ ಮಹಾಮಹಿಮೆಗಳ ತಿಳಿಸುತ ॥
ರಾಮರಮಣಿಯ ಸಹಿತ ಸಾಲಿಗ್ರಾಮದಲಿ ನೆರೆ ನೆಲಸಿ ಭಕುತರ ।
ಪ್ರೇಮದಿಂದಲಿ ಪೊರೆಯುತಿಹ ಸುಖಧಾಮ ಪುರಂದರವಿಠಲನ ॥ ೫ ॥

## ೨೨

ರಾಗ—ಆನಂದಭೈರವಿ ತಾಳ—ಆದಿ

[೧]ನಾರಾಯಣ ನಿನ್ನ ನಾಮದ ಸ್ಮರಣೆಯ ।
ಸಾರಾಮೃತವೆನ್ನ ನಾಲಗೆಗೆ ಬರಲಿ ॥ ಪ ॥

ಕೂಡುವಾಗಲು ನಿಂತಾಡುವಾಗಲು ಮತ್ತೆ ।
ಹಾಡುವಾಗಲು ಹರಿದಾಡುವಾಗ ॥

೧) ಎ. ಓ ಪ್ರತಿಗಳಿಂದ ತೆಗೆದುಕೊಂಡಿದೆ.

ಖೋಡಿ ವಿನೋದದಿ ನೋಡದೆ ನಾ ಬಲು ।
ಮಾಡಿದ ಪಾಪ ಬಿಟ್ಟೋಡಿ ಹೋಗುವ ಹಾಗೆ ॥ ೧ ॥

ಊರಿಗೆ ಹೋಗಲಿ ಊರೊಳಗಿರಲಿ— ।
ಕಾರಣಾರ್ಥಗಳೆಲ್ಲ ಕಾದಿರಲಿ ॥
ವಾರಿಜನಾಭ ಸರಸಾರಥಿ ಸನ್ನುತ ।
ಸಾರಿಸಾರಿಗೆ ನಾ ಬೇಸರಿಯದ ಹಾಗೆ ॥ ೨ ॥

ಹಸಿವು ಇದ್ದಾಗಲಿ ಹಸಿವಿಲ್ಲದಾಗಲಿ ॥
ರಸ-ಕಸವಿರಲಿ ಹರುಷವಿರಲಿ ॥
ವಸುದೇವಾತ್ಮಜ ಶಿಶುಪಾಲಕ್ಷಯ ।
ಅಸುರಾಂತಕ ನಿನ್ನ ಹೆಸರು ಮರೆಯದಂತೆ ॥ ೩ ॥

ಕಷ್ಟದಲ್ಲಿರಲಿ ಉತ್ಕೃಷ್ಟದಲ್ಲಿರಲಿ— ।
ಎಷ್ಟಾದರು ಮತಿಗೆಟ್ಟಿರಲಿ ॥
ಕೃಷ್ಣ ಕೃಷ್ಣ ಎಂದು ಶಿಷ್ಟರು ಪೇಳುವ ।
ಅಷ್ಟಾಕ್ಷರ ಮಹಾಮಂತ್ರದ ನಾಮದ ॥ ೪ ॥

ಕನಸಿನೊಳಾಗಲಿ ಕಳವಳಿಕಾಗಲಿ ।
ಮನಸುಗೊಟ್ಟಿರಲಿ— ಮುನಿದಿರಲಿ ॥
ಜನಕಜಾಪತಿ ನಿನ್ನ ಚರಣಕಮಲವನು ।
ಮನಸಿನೊಳಗೆ ಒಮ್ಮೆ ನೆನೆಸಿಕೊಳ್ಳುವ ಹಾಗೆ ॥ ೫ ॥

ಜ್ವರ ಬಂದಾಗಲು ಚಳಿ ಬಂದಾಗಲು ।
ಮರಳಿ ಮರಳಿ ಮತ್ತೆ ನಡೆವಾಗಲು ॥
ಹರಿನಾರಾಯಣ ದುರಿತ ನಿವಾರಣ ।
ಇರುಳು ಹಗಲು ನಿನ್ನ ಸ್ಮರಣೆ ಮರೆಯದಂತೆ ॥ ೬ ॥

ಸಂತತ ಹರಿ ನಿನ್ನ ಸಾಸಿರನಾಮವ ।
ಅಂತರಂಗದಾ ಒಳಗಿರಿಸಿ ॥
ಎಂತೋ ಪುರಂದರವಿಟ್ಠಲರಾಯನೆ ।
ಅಂತ್ಯಕಾಲದಲಿ ಚಿಂತಿಸುವಂತೆ ॥ ೭ ॥

### ೨೩

ರಾಗ—ಬಿಲಹರಿ ತಾಳ—ಅಟ

(೧)ಕಾಯಬೇಕೆನ್ನ ಗೋಪಾಲ—ಒಂದು- ।
ಪಾಯವನರಿಯೆನು ಭಕುತರ ಪಾಲ ॥ ಪ ॥

ಹಲವು ಜನ್ಮಗಳೆತ್ತಿ ಬಂದೆ—ಮಾಯಾ- ।
ಮಲವೆಂಬುದರಿಯದೆ ಭವದೊಳು ನೊಂದೆ ॥
ಬಲು ಭಯವಾಯಿತು ಮುಂದೆ—ನೀನು- ।
ಸುಲಭನೆಂದು ಕೇಳಿ ಶರಣೆಂದೆ ತಂದೆ ॥ ೧ ॥

ವಿತ್ತದೊಳಗೆ ಮನವಿಟ್ಟು—ನಿನ್ನ- ।
ಉತ್ತಮ ನಾಮದ ಸ್ಮರಣೆಯ ಬಿಟ್ಟು ॥
ಮತ್ತನಾದೆನು ಮತಿಗೆಟ್ಟು—ಇದ- ।
ಚಿತ್ತದಲಿ ತಿಳಿದು ಬಲು ದಯವಿಟ್ಟು ॥ ೨ ॥

ಜರುಗಿದ ಪಾಪಂಗಳೆಲ್ಲ—ಅನ್ಯ- ।
ನರರೇನ ಬಲ್ಲರು ಯಮಧರ್ಮ ಬಲ್ಲ ॥
ನರಕಕೆ ಒಳಗಾದೆನಲ್ಲ—ಸಿರಿ- ।
ವರನಾರಾಯಣ ಪುರಂದರವಿಠಲ ॥ ೩ ॥

---

೧) ಉ ಪ್ರತಿಯಿಂದ ಆರಿಸಿಕೊಂಡಿದೆ.

## ೨೪

ರಾಗ—ಮಧ್ಯಮಾವತಿ ತಾಳ—ಅಟ

೧ಇಲ್ಲಿರಲಾರೆ ಅಲ್ಲಿಗೆ ಪೋಗಲಾರೆ ।
ಫುಲ್ಲನಾಭನೆ ನೀನಿದ್ದಲ್ಲಿ ಇರಿಸೆನ್ನ ॥ ಪ ॥

ಮರಳಿ ಮರಳಿ ಜನ್ಮಮರಣವನೊಲ್ಲೆ ।
ದುರಿತಕೋಟಲೆಯ ಸಂಸಾರವನೊಲ್ಲೆ ॥
ತುರುಕಾದು ಕೊಳಲನೂದುವ ಮುರಮರ್ದನ ।
ಚರಣಕಮಲಗಳ ಸ್ಮರಣೆಯೊಳಿರಿಸೆನ್ನ ॥ ೧ ॥

ಬಂದು ಸಂಸಾರದ ಬೇನೆಯೊಳಗೆ ಬಿದ್ದು ।
ನೊಂದೆನು ಕಡುಮೋಹದಿಂದ ನಾ ಬೆಂದು ॥
ನಂದಗೋಪನ ಕಂದ ವೃಂದಾವನಪ್ರಿಯ ।
ಬಂದೆಂದು ತವಪಾದ ಸ್ಮರಣೆಯೊರಿಸೆನ್ನ ॥ ೨ ॥

ಪುತ್ರ-ಪೌತ್ರರು ಬಂಧು-ಮಿತ್ರ ಬಾಂಧವರೆಂದು ।
ಕತ್ತಲೆಯೊಳು ಕಡುನೊಂದೆನಯ್ಯ ॥
ಸತ್ಯಮೂರುತಿ ಶ್ರೀಉಡುಪಿಯ ಶ್ರೀಕೃಷ್ಣ ।
ಭಕ್ತವತ್ಸಲ ಶ್ರೀಪುರಂದರವಿಠಲ ॥ ೩ ॥

## ೨೫

ರಾಗ—ಪಂತುವರಾಳಿ ತಾಳ—ಆದಿ

೨ಎನ್ನ ಮನದ ಡೊಂಕ ತಿದ್ದಿ-
ಚರಣದಲ್ಲಿ ಸೇರಿಸೋ ।
ನಿನ್ನ ಸೇವಕನಾದ ಮೇಲೆ-
ಇನ್ನು ಸಂಶಯವೇಕೆ ಕೃಷ್ಣ ॥ ಪ ॥

---

೧) ಉ ಪ್ರತಿಯಿಂದ ತೆಗೆದುಕೊಂಡಿದೆ. ಎ. ಓ. ಪ್ರತಿಗಳಲ್ಲಿ ತಪ್ಪುತಡೆಗಳು ತುಂಬಿವೆ.

೨) ಏ ಪ್ರತಿಯಿಂದ ಆರಿಸಿದೆ. ಓ ಪ್ರತಿಯಲ್ಲಿ ಬಹಳ ದೋಷಗಳಿವೆ

ಉದಯವಾದರೆ ಊಟದ ಚಿಂತೆ ಆದರ ಮೇಲೆ ಭೋಗದ ಚಿಂತೆ ।
ಹದಿನಾಲ್ಕು ಲೋಕಂಗಳನಾಳಬೇಕೆಂಬ ಚಿಂತೆ ॥
ಇದು ಪುಣ್ಯ ಪಾಪವೆಂದು ಹೃದಯದಲ್ಲಿ ಭಯವಿಲ್ಲದಲೆ ।
ಮದಮೋಹಿತನಾದೆ ನಿನ್ನ ಪದವ ನಂಬದೆ–ದಯಾಳೊ ॥ ೧ ॥

ನೆರೆಮನೆಗಳ ಭಾಗ್ಯವ ನೋಡಿ—ತರಹರಿಸುತ ಅಸೂಯೆಯಿಂದ ।
ಹರಿಯ ಸ್ಮರಣೆಗೆ ವಿಮುಖನಾದೆ—ನರರ ಸ್ತುತಿಯ ನಾ ಮಾಡಿದೆ ॥
ಪರರ ಸತಿಗೆ ಪರರನ್ನಕ್ಕೆ ತಿರುಗಿ ತಿರುಗಿ ಚಪಲನು ಆದೆ ।
ಗುರುಹಿರಿಯರ ದೂಷಿಸುತಲಿ ಮರುಳನಾದೆ ದೀನಶರಣ್ಯ ॥ ೨ ॥

ಅಗಣಿತ ಸುಖ ಬಂದರೆ ನಾನು—ಅಗಣಿತ ದುಃಖಕೆ ಹರಿಯೆನ್ನುವೆನು ।
ಜಗದೊಳಾವ ಲಾಭವು ಬಂದರು ಧನಿಯು ನಾನೆ ಎಂಬೆ ॥
ಮಿಗೆ ಹಾನಿಗೆ ಹರಿಯನು ದೂಷಿಸಿ ನೆಗೆದು ಪತಂಗವು ಕಿಚ್ಚಲಿ ಬೀಳುವ ।
ಬಗೆ ನಾನಾದೆನು ಪುರಂದರವಿಠಲ ಖಗರಾಜಸುವಾಹನ
ಶ್ರೀಕೃಷ್ಣ ॥ ೩ ॥

## ೨೬

### ಉಗಾಭೋಗ

(೧)

[೧]ಆನೆಯನ್ನು ಕಾಯುವಾಗ ಜ್ಞಾನವಿದ್ದುದು ಏನು ।
ನಾನೀಗ ಕೂಗಲು ಕೇಳದಿದ್ದುದು ಏನು ।
ದಾನವಾಂತಕ ಹರಿ ದೀನರಕ್ಷಕನೆಂಬ ।
ಮಾನ ಉಳಿಸಿಕೊಳ್ಳೊ ಪುರಂದರವಿಠಲ

(೨)

ಬಡವರೊಳಗೆ ಎನ್ನಿಂದಾರು ಬಡವರಿಲ್ಲ ।
ಕೊಡುವರೊಳಗೆ ನಿನ್ನಿಂದಾರು ಕೊಡುವರಿಲ್ಲ ।

೧) ಝ (೮) ಪ್ರತಿಯಿಂದ ಆಯ್ದುಕೊಳ್ಳಲಾಗಿದೆ.

ದೃಢಭಕ್ತಿ ಎನಗೆ ನಿನ್ನಲ್ಲಿಯೆ ಕಲ್ಪಿಸಿ ।
ಬಿಡದೆ ಸಲಹಯ್ಯ ಶ್ರೀಪುರಂದರವಿಠಲ !

(೩)

ಎನ್ನಮ್ಮ ಸಿರಿದೇವಿ ಇನ್ನೂ ಅರಿಯಳು ಮಹಿಮೆ ।
ಕುನ್ನಿಮಾನವ ನಾನೇನ ಬಲ್ಲೆನೊ ।
ಪನ್ನಗಾದ್ರಿ ನಿಲಯನೆ ಪಾವನಮೂರುತಿಕೃಷ್ಣ ।
ಎನ್ನನುದ್ಧರಿಸಯ್ಯ ಪುರಂದರವಿಠಲ !

(೪)

ಇರಲಿ ನಿನ್ನಲ್ಲಿ ಭಕ್ತಿ ಎನಗೆ ಇರದಿರಲಿ ।
ಹರಿದಾಸನೆಂದೆನ್ನ ಕರೆವರು ಸಜ್ಜನರು ।
ಹರಿದಾಸರನು ಯಮನೆಳೆವನೆಂಬಪಕೀರ್ತಿಯ ।
ಪರಿಹರಿಸಿಕೊಳ್ಳೊ ಶ್ರೀಪುರಂದರವಿಠಲ !

(೫)

ತಂದೆ, ನೀ ತಂದೆ—ನಾ ಬಂದೆ ನಿನ್ನ ಹಿಂದೆ ।
ಕಾಮದಲಿ ನೀ ತಂದೆ ಕ್ರೋಧದಲಿ ನೀ ತಂದೆ ।
ತಾಮಸ ದುರ್ಯೋನಿಯಲಿ ನೀ ತಂದೆ ನಾ ಬಂದೆ ।
ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ ।
ಒಂದಿ ಎಂಬತ್ನಾಲ್ಕುಲಕ್ಷ ಯೋನಿಗಳ ।
ತಂದೆ, ನೀ ತಂದೆ, ನಾ ಬಂದೆ ನಿನ್ನ ಹಿಂದೆ ।
ಹಿಂದಿನ ಜನ್ಮವು ಹೇಗಾದರಾಗಲಿ ॥
ಮುಂದೆನ್ನ ಸಲಹೊ ಶ್ರೀಪುರಂದರವಿಠಲ !

(೬)

ಮನೆಯೆಂಬಾಶೆಯು ಎನ್ನ ಮಂದುಗೆಡಿಸುತಿದೆ ।
ಮನೆವಾರ್ತೆಯು ಎನ್ನ ಭಂಗಪಡಿಸುತಿದೆ ।
ವನಿತೆ ಸುತರಾಶೆಯೆನ್ನ ದೈನ್ಯಬಡಿಸುತಿದೆ ।
ಇನಿತಾಶೆಯೊಳಿದ್ದು ಬುದ್ಧಿಯು ನಿನ್ನಲಿ ।
ನಿಲುವಂತೆ ಮಾಡೊ ಶ್ರೀಪುರಂದರವಿಠಲ !

(೭)

ಹರಿ-ಗುರುಗಳಿಗೆರಗದ ಹರಿಭಕ್ತಿ ಭಕ್ತಿಯೆಂತಹದಯ್ಯ ।
ಕೆರವ ತಿಂಬ ನಾಯಿಗೆ ತುಪ್ಪ-ಓಗರ ನೊಗಸುವುದೆ ।
ಹರಿನಾಮಕ್ಕೆ ಹರಿದಾಸರು ಕರಗುವರಲ್ಲದೆ ।
ನರಕಭಾಜನ ಪಾಮರರು ಕರಗುವರೆ ।
ಚಂದ್ರಕಿರಣಕೆ ಚಂದ್ರಕಾಂತಶಿಲೆ ಒಸರುವುದಲ್ಲದೆ ।
ಗೋರ್ಕಲ್ಲು ಒಸರುವುದೆ ಪುರಂದರವಿಠಲ !

(೮)

ಹರಿ ನಿನ್ನ ಭಕ್ತನೆನಿಸಿಕೊಂಡವ ಭಂಗಬಡಲು ಬೇಕು ।
ಹರಿ ನಿನ್ನ ಭಕ್ತನೆನಿಸಿಕೊಂಡವ ದಿನ-ಪ್ರತಿದಿನದಲ್ಲಿ
ಅನ್ನಉದಕಗಳ ಕಾಣದಿರಬೇಕು ।
ಬೆನ್ನಟ್ಟಿರೋಗಗಳು ಹತ್ತಿಕೊಂಡಿರಬೇಕು ।
ತನ್ನವರ ಕೈಯಿಂದ ಛಿಛಿ ಎನಿಸಿಕೊಳಬೇಕು ।
ಎನ್ನ ಈ ಪರಿಯಲಿ ಮಾಡಿದ ಬಗೆ ಏನೊ ಪುರಂದರವಿಠಲ !

(೯)

ಮನದ ಚಂಚಲದಿ ತಪವ ಮಾಡಲು ಅಶಕ್ಯವು ।
ಘನ ಅಜ್ಞಾನದಿ ಸತ್ಕರ್ಮಗಳು ಹತ್ತವು ।
ಧನಶುದ್ಧಿ ಇಲ್ಲದೆ ದಾನವು ವ್ಯರ್ಥವು ।
ಇನಿತಾದ್ದರಿಂದ ಈ ಯುಗದಿ ಪುರಂದರ-
ವಿಠಲನ ನಾಮಸ್ಮರಣೆಯೆ ಲೇಸುಲೇಸು ಕಾಣಾ !

(೧೦)

ತಂಬೂರಿ ಮೀಟಿದವ ಭವಾಬ್ಧಿಯ ದಾಟಿದವ ।
ತಾಳವ ತಟ್ಟಿದವ ಸುರರೊಳು ಸೇರಿದವ ।
ಗೆಜ್ಜೆಯ ಕಟ್ಟಿದವ ಖಳರೆದೆಯ ಮೆಟ್ಟಿದವ ।
ಗಾಯನ ಮಾಡಿದವ ಹರಿಮೂರ್ತಿಯ ನೋಡಿದವ ।
ಪುರಂದರವಿಠಲನ ನೋಡಿದವ ವೈಕುಂಠಕೋಡಿದವ !



# ೨ ಉದ್ಧಾರಪ್ರಜ್ಞೆ

೧ ಪ್ರಾಕ್ತನಕರ್ಮವಿವೇಕ
೨ ಪತಿತಪಾವನಶ್ರೀಹರಿ
೩ ಕಾರುಣ್ಯಯಾಚನೆ
೪ ಭಕ್ತಿದರ್ಶನ

# ೧ ಪ್ರಾಕ್ತನಕರ್ಮವಿವೇಕ

## ೨೭

ರಾಗ—ನೀಲಾಂಬರಿ　　　　　　　　　　　　　ತಾಳ—ಝಂಪೆ

[೧]ಆರೇನ ಮಾಡುವರು ಭುವನದೊಳಗೆ ।
ಪೂರ್ವಜನ್ಮದ ಕರ್ಮ ಪಣೆಯಲ್ಲಿ ಬರೆದುದಕೆ　　॥ ಪ ॥

ಮಾಡಿದಡಿಗೆಯು ಕೆಡಲು ಮನೆಯು ಗಂಡನು ಬಿಡಲು ।
ಕೂಡಿ ಇದ್ದಾಸತಿಯು ಕುಣಿಸಾಡಲು ॥
ಗೋಡೆಯಲಿ ಬರೆದ ಹುಲಿ ಘುಡುಘುಡಿಸಿ ತಿನಬರಲು ।
ಆಡದಂತಹ ಮಾತ ಅಖಿಳರೂ ನಿಜವೆನಲು　　॥ ೧ ॥

ಹೆತ್ತ ತಾಯ್ ಕರೆದು ಮಕ್ಕಳಿಗೆ ವಿಷ ಹಾಕಿದರೆ ।
ಮತ್ತೆ ತಂದೆಯು ಕರೆದು ಹೊರಗೆ ಮಾರಿದರೆ ॥
ತೊತ್ತು ಅರಸಿಗೆ ಪ್ರತಿ—ಉತ್ತರವ ನಡೆಸಿದರೆ ।
ಕತ್ತಲೆ ಕರಡಿಯಾಗಿ ಬೆನ್ನಟ್ಟಿ ಕಚ್ಚಿದರೆ　　॥ ೨ ॥

ಹೊಲ ಬೇಲಿ ಮೇದರೆ—ಮೊಲ ಎದ್ದು ಇರಿದರೆ ।
ತಲೆಗೆ ತನ್ನಯ ಕೈಯ ಪೆಟ್ಟು ತಾಗಿದರೆ— ॥
ಹೆಳಲು ಹಾವಾದರೆ—ಗೆಳೆಯ ರಿಪುವಾದರೆ ।
ಕಲಸಿದ್ದ ಅವಲಕ್ಕಿ ಕಲಪರಟಿ ನುಂಗಿದರೆ　　॥ ೩ ॥

ಕಣ್ಣೊಳಗಿನಾ ಬೊಂಬೆ ಕಚ್ಚಾಡ ಬಂದರೆ ।
ಹೆಣ್ಣಿನಾ ಹೋರಾಟ ಹೆಚ್ಚಾದರೆ ॥
ಅನ್ನ ಉಣ್ಣದ ಮನುಜಗಜೀರ್ಣವಾದರೆ ।
ಪುಣ್ಯತೀರ್ಥಂಗಳಲಿ ಪಾಪ ಘಟಿಸಿದರೆ　　॥ ೪ ॥

---

೧) ಅ (೧) ಆ (I). ಪ್ರೀ. ಪ್ರತಿಗಳಿಂದ ಆರಿಸಿ ಬರೆದಿದೆ.

ಏರಿ ಕುಳಿತಾ ಕುಂಬೆ ಎರಡಾಗಿ ಬಿಚ್ಚಿದರೆ ।
ವಾರಿನಿಧಿಗಳು ಉಕ್ಕಿ ಮೇರೆ ಮೀರಿದರೆ ॥
ಆರಿದಾ ಇದ್ದಲಿಯು ಅಗ್ನಿಯಾಗುರಿದರೆ ।
ಧೀರ ಪುರಂದರವಿಠಲನ ದಯವು ತಪ್ಪಿದರೆ ॥ ೫ ॥

೨೮

ರಾಗ—ಕಾಂಬೋದಿ ತಾಳ—ಝಂಪೆ

[೧]ತಾ ಪಡೆದು ಬಂದುದಕುಪಾಯವೇನು ।
ಕೋಪದಲಿ ಶ್ರೀಪತಿಯ ಶಾಪಿಸಿದರೇನು ॥ ಪ ॥

ಅನ್ನವಸ್ತ್ರವಿಲ್ಲವೆಂದು ಅತಿ ಕ್ಲೇಶಪಟ್ಟರೇನು ।
ಧಾನ್ಯಧನಗಳ ಬೇಡಿ ಧರೆಗಿಳಿದರೇನು ॥
ಎಣ್ಣೆಯನು ಪೂಸಿ ಹುಡಿಯೊಳಗೆ ಹೊರಳಿದರೇನು ।
ತನ್ನ ತಲೆ ಅಡಿಮಾಡಿ ತಪವ ಮಾಡಿದರೇನು ॥ ೧ ॥

ಸರಿಯ ಸುಜನರ ಕಂಡು ಕರುಬಿ ಕೊರಗಿದರೇನು ।
ಬರಿಮಾತುಗಳನಾಡಿ ಭ್ರಷ್ಟನಾದರೆ ಏನು ॥
ಇರುಳು ಹಗಲೂ ಹೋಗಿ ಆರ ಮೊರೆಯಿಟ್ಟರೇನು ।
ಅರಿಯದ—ಮನುಜರಿಗೆ ಅಲ್ಪರಿದರೇನು ॥ ೨ ॥

ಹೋಗದೂರಿನ ದಾರಿ ಕೇಳಿ ಮಾಡುವುದೇನು ।
ಮೂಗನ—ಕೂಡ ಏಕಾಂತವೇನು ॥
ಯೋಗೀಶ ಪುರಂದರವಿಟ್ಠಲನ ನೆನೆಯದವ ।
ತ್ಯಾಗಿಯಾದರೆ ಏನು ಭೋಗಿಯಾದರೆ ಏನು ॥ ೩ ॥

೨೯

ರಾಗ—ಮುಖಾರಿ ತಾಳ—ಅಟ

[೨]ತಾನು ಮಾಡಿದ ಕರ್ಮ ತನಗಲ್ಲದೆ ।
ಏನ ಮಾಡಿದರು ಹಿಂದಿನ ಕರ್ಮವಲ್ಲದೆ ॥ ಪ ॥

---

೧) ಆ (೮) ಪ್ರತಿಯಿಂದ ತೆಗೆದುಕೊಂಡಿದೆ.

೨) ಟಝ (೧/೧೧) ಪ್ರತಿಯಲ್ಲಿಯೋ ಸಿಕ್ಕುತ್ತಿದೆ.

ಮರಳಿ ಮರಳಿ ನೀರ ಪೊಕ್ಕು ಹೊರಟರೆ ಇಲ್ಲ ।
ಹೊರೆ ಹೊತ್ತು ತಲೆಪರಟೆಗಟ್ಟಿದರೂ ಇಲ್ಲ ॥
ಬರಿಯೆ ಭೂಮಿಯ ಕೆದರಿ ತೋಡಿ ನೋಡಿದರಿಲ್ಲ ।
ಪರರಿಗೆ ಬಾಯ್ದೆರೆದರೇನೂ ಇಲ್ಲ ॥ ೧ ॥

ಬಲಿದ ದೇಹವನಲ್ಪ ಮಾಡಿ ಬೇಡಿದರಿಲ್ಲ ।
ನೆಲದಿ ಕೊಲೆಗಡುಕ ತಾನಾದರಿಲ್ಲ ॥
ತಲೆಯಲಿ ಜಡೆಗಟ್ಟಿ ಅಡವಿಸೇರಿದರಿಲ್ಲ- ।
ಕೊಳಲೂದಿ ತುರುಗಳನು ಕಾಯ್ದರಿಲ್ಲ. ॥ ೨ ॥

ಧೀರತನ ಬಿಟ್ಟು ದಿಗಂಬರನಾದರು ಇಲ್ಲ ।
ಮೀರಿದ್ದ ರಾಹುತ ತಾನಾದರಿಲ್ಲ ॥
ವರದ ಶ್ರೀಪುರಂದರವಿಠಲನ ಚರಣವ ।
ಸ್ಮರಿಸುತ ಅನುದಿನ ಸುಖಿಯಾಗಿರಯ್ಯ ॥ ೩ ॥

## ೩೦

ರಾಗ—ಮುಖಾರಿ ತಾಳ—ಝಂಪ

[೧]ಆರೇನ ಮಾಡುವರು ಆರಿಂದಲೇನಹುದು
ಪೂರ್ವಜನ್ಮದ ಕರ್ಮವಿಧಿ ಬೆನ್ನಬಿಡದು ॥ ಪ ॥

ಐದು ವರುಷದ ತರಳ ತಾನೆತ್ತ ತಪವೆತ್ತ ।
ಬೈದು ಮಲತಾಯಿ ಅಡವಿಗೆ ನೂಕಲು ॥
ಸುಯ್ದು ಕೋಪಾಗ್ನಿಯಲಿ ಪೊರಮಟ್ಟು ಪೋಪಾಗ ।
ಐದೆ ಬಂಧುಗಳಿದ್ದು ಏನ ಮಾಡಿದರು ॥ ೧ ॥

ನೃಪರೊಳಗೆ ಅತಿ ಶ್ರೇಷ್ಠ ಬಲವಂತ ರಘುರಾಮ ।
ಅಪರಿಮಿತ ಶೂರ ಲಕ್ಷ್ಮಣದೇವರು ॥
ಚಪಲಾಕ್ಷಿ ಸೀತೆಯನು ಖಳನು ಕದ್ದೊಯ್ಯಾಗ ।
ವಿಪರೀತ ವೀರರಿದ್ದೇನ ಮಾಡಿದರು ? ॥ ೨ ॥

೧) ಅ (೧) ರ. ವ, ಮು, ಪ್ರತಿಗಳಲ್ಲಿ ಇದೆ.

ಪಾಪಿ ದುಶ್ಶಾಸ ದ್ರೌಪದಿಯ ಸೀರೆಯ ಸುಲಿದು ।
ಕೋಪದಿಂ ಮಾನಭಂಗವ ಮಾಡಲು ॥
ಆಪತ್ತು ಬೆನ್ನಟ್ಟಿ ಹಾ ಕೃಷ್ಣ !—ಎನುವಾಗ ।
ಭೂಪತಿಗಳೈವರಿದ್ದೇನ ಮಾಡಿದರು ? ॥ ೩ ॥

ರಣದೊಳಗೆ ಅಭಿಮನ್ಯು ಚಕ್ರವ್ಯೂಹವ ಪೊಕ್ಕು ।
ಸೆಣಸಿ ಷಡುರಥದೊಡನೆ ಹೊಯ್ದಾಡಲು ॥
ಅಣಕವಿಲ್ಲದೆ ಕಾದಿ ಅಸುವಳಿದು ಪೋಪಾಗ ।
ತ್ರಿಣಯಸಖ ಪಾರ್ಥರಿದ್ದೇನ ಮಾಡಿದರು ॥ ೪ ॥

ಬ್ರಹ್ಮಶಿರ ಕರಕಚ್ಚಿ ಶಿವನ ಪೀಡಿಸುತಿರಲು ।
ಸುಮ್ಮನೇ ಜಗವನೆಲ್ಲವ ತಿರುಗಿದ ॥
ಬೊಮ್ಮಮೂರುತಿಯಾದ ಪುರಂದರವಿಠಲನೇ
ನಮ್ಮ ಅಳವಲ್ಲ ವಿಧಿಮೀರಿ ಬಾಳುವರೆ ॥ ೫ ॥

## ೩೧

ರಾಗ—ತೋಡಿ ತಾಳ—ಅಟ

[1]ನಾ ಮಾಡಿದ ಕರ್ಮ ಬಲವಂತವಾದರೆ ।
ನೀ ಮಾಡುವುದೇನೊ ದೇವಾ ॥ ಪ ॥

ಸಾಮಾನ್ಯವಲ್ಲವಿದು ಬ್ರಹ್ಮಬರೆದ ಬರೆಹ ।
[2]ನೇಮದಿಂದಲಿ ಎನ್ನ ಹಣೆಯಲ್ಲಿ ಬರೆದುದಕೆ ॥ ಅ.ಪ ॥

ಅತಿಥಿಗಳಿಗೆ ಅನ್ನ ಕೊಟ್ಟವನಲ್ಲ—ಪರ- ।
ಸತಿಯರ ಸಂಗವ ಗಳಿಗೆ ಬಿಟ್ಟವನಲ್ಲ ॥
ಮತಿಹೀನನಾಗಿ ಮರುಳಾಗಿದ್ದೆನೋ ದೇವ ।
ಗತಿ ಯಾವುದೈ ಎನಗೆ ಗರುಡವಾಹನ ಕೃಷ್ಣ ॥ ೧ ॥

---

೧) ಅ. (ಬಿಡಿ ೧). ಇ. ಖ ಪ್ರತಿಗಳಿಂದ ತೆಗೆದುಕೊಂಡಿದೆ.
೨) ಶ್ರೀ. ನೇಮವಾಗಿ;

ಅನ್ನಪಾನಂಗಳಿಗೆ ಅಗ್ರಗಣ್ಯನು ಆಗಿ ।
ಸ್ನಾನ ಸಂಧ್ಯಾದಿ ಕರ್ಮಂಗಳ ನೀಗಿ ॥
ದಾನವಾಂತಕ ನಿನ್ನ ಧ್ಯಾನವ ಮಾಡದೆ ।
ಶ್ವಾನನಂತೆ ಮನೆಮನೆ ತಿರುಗುತಲಿದ್ದೆ ॥ ೨ ॥

ಇನ್ನಾದರು ನಿನ್ನ ದಾಸಸಂಗವನಿತ್ತು ।
ಮನ್ನಿಸಿ ದಯೆಮಾಡೊ ಮನ್ಮಥಜನಕ ॥
ಅನ್ಯರೊಬ್ಬರ ಕಾಣೆ [1]ಆದರಿಸುವರಿಲ್ಲ ।
ಪನ್ನಂಗಶಯನ ಶ್ರೀಪುರಂದರವಿಠಲ ॥ ೩ ॥

### ೩೨

ರಾಗ—ಕೇದಾರಗೌಳ ತಾಳ— ಅಟ

[2]ಎಷ್ಟಾದರು ಮುನ್ನ ಕೊಟ್ಟಿಲ್ಲದಿಲ್ಲ ॥ ಪ ॥
ಅಟ್ಟಡಿಗೆಯನು ಬಿಟ್ಟು ಆಚೆಮನೆಯೊಳಗಿರ್ದ ।
ಮೃಷ್ಟಾನ್ನವನು ಬಯಸಿದರೆ ಬಾಹೊದೆ ॥ ಅ. ಪ ॥

ಊಳಿಗವನು ಮಾಡಿದರಿಲ್ಲ ದೊರೆಗಳ- ।
ವೇಳೆಯರಿತು ಕೇಳಿದರಿಲ್ಲ ॥
ಆಳಾಗಿದ್ದರು ಆ ದುಃಖಕ್ಕೆಣೆ ಇಲ್ಲ ।
ಕಾಳಗದಲಿ ಗೆದ್ದು ಬಂದವಗಿಲ್ಲ ॥ ೧ ॥

ಬೆನ್ನಲಿ ಬಂದವನ ಭಾಗ್ಯವು ತನಗಿಲ್ಲ ।
ಹೆಣ್ಣಿನ ದೆಸೆಯಿಂದ ಬದುಕಲಿಲ್ಲ ॥
ಅನ್ಯರನು ನೋಡಿ ಕರಗಿ ಕುಂದಿದರಿಲ್ಲ ।
ತನ್ನ ಮಕ್ಕಳ ಪುಣ್ಯ ತನಗಿಲ್ಲವಯ್ಯ ॥ ೨ ॥

ಬಟ್ಟಲ ಪಿಡಿದು ಬಾಯ್ಬಿಟ್ಟು ಕೇಳಿದರಿಲ್ಲ ।
ಅಟ್ಟಡವಿಗೆ ಅತ್ತರಿಲ್ಲ ॥

---

೧) ಶ್ರೀ. ಆಧಾರವೆನಗಿಲ್ಲ.

೨) ಕ. ವಿ. ವಿ. ತಾಳೆಗರಿಯಿಂದ ತೆಗೆದುಕೊಂಡಿದೆ. (೧೭೫೦ ಸಂ ೧೮೬೮).
ಓ ಪ್ರತಿಯಲ್ಲಿ ವಿಕಾರಗೊಂಡಿದೆ.

ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನೊಳ್ ।
ಕೊಟ್ಟಿದ್ದರುಂಟು ಕೊಡದಿದ್ದರಿಲ್ಲ ॥ ೩ ॥

## ೩೩

ರಾಗ—ಖರಹರಪ್ರಿಯ ತಾಳ—ಛಾಪು

[೧]ಏಕೆ ಚಿಂತಿಪೆ ಬರಿದೆ ನೀ—ವಿಧಿ ಬರೆದ- ।
ವಾಕು ತಪ್ಪದು ಪಣೆಯೊಳು ॥ ಪ ॥

ಹುಟ್ಟುವುದಕೆ ಮೊದಲೆ—ತಾಯ್ಮೊಲೆಯೊಳು ।
ಇಟ್ಟಿದ್ದೆಯೊ ಪಾಲನು ॥
ತೊಟ್ಟಿಲೊಳಿರುವಾಗಲೆ —ಗಳಿಸಿ ತಂ- ।
ದಿಟ್ಟುಕೊಂಡುಣುತಿದ್ದೀಯಾ ॥ ೧ ॥

ಉರಗ ವೃಶ್ಚಿಕ ಪಾವಕ—ಕರಿ ಸಿಂಹ ।
ಅರಸು ಹುಲಿ ಚೋರ ಭಯವು ॥
ಹರಿಯಾಜ್ಞೆಯಿಂದಲ್ಲದೆ—ಇವು ಏಳು- ।
ಶರಧಿಪೊಕ್ಕರು ಬಿಡವೊ—ಮರುಳೆ ॥ ೨ ॥

ಇಂತು ಸುಖ-ದುಃಖದೊಳ್ಸಿಲುಕಿ—ಮರುಗಿ ನೀನು- ।
ಭ್ರಾಂತನಾಗಿ ಕೆಡಬೇಡವೊ ॥
ಸಂತೋಷದಿಂದ ಅರ್ಚಿಸಿ—ಭಜಿಸೋ ನೀ- ।
ಸಂತತ ಪುರಂದರವಿಠಲನ—ಮರುಳೆ ॥ ೩ ॥

---

೧) ಅ (೮), ಆ, (II) ಈ ಪ್ರತಿಗಳಿಂದ ಆರಿಸಿದೆ,

೩೪

ರಾಗ—ಪಂತುವರಾಳಿ ತಾಳ—ಅಟ

[೧]ಕಾಳ ಬೆಳುದಿಂಗಳು—ಈ ಸಂಸಾರ—
ಕತ್ತಲೆ ಬೆಳುದಿಂಗಳು ॥ ಪ ॥

ಸತ್ಯಕೆ ಧರ್ಮಜ ಲೆತ್ತ ಪಗಡೆಯಾಡಿ ।
ವ್ಯರ್ಥ ಭಂಡಾರವೆಲ್ಲವನು ಸೋತು ॥
ಬತ್ತಲೆ ಪೋಗಿ ವಿರಾಟನ ಮನೆಯೊಳು ।
ತೊತ್ತಾದಳು ದ್ರೌಪದಿ ಒಂದು ವರುಷ ॥ ೧ ॥

ಉಂಬಾಗ ಉಡುವಾಗ ಕೊಂಬಾಗ ಕೊಡುವಾಗ ।
ಬೆಂಬತ್ತಿ ತಿರುಗುತಲಿಪ್ಪರು ॥
ಉಂಬಾತಗೆ ನೋಡಿ ಬಡತನ ಬಂದರೆ ।
ಇಂಬಿಲ್ಲ ಅತ್ತತ್ತ ಹೋಗೆಂಬರಯ್ಯ ॥ ೨ ॥

ಉಂಟಾದ ಕಾಲಕ್ಕೆ ನಂಟರಿಷ್ಟರು ಬಂದು ।
ಬಂಟರಂತೆ ಬಾಗಿಲ ಕಾಯ್ವರು ।
ಉಂಟುತನವು ಪೋಗೆ ಅಂತ್ಯಕಾಲಕೆ ಕಂಡು ।
ಹೆಂಟೆಯಾಗಿ ತಿರುಗುತಿಪ್ಪರಯ್ಯ ॥ ೩ ॥

ಪುಂಡರೀಕಾಕ್ಷ ಶ್ರೀಪುರುಷೋತ್ತಮ ರಥ- ।
ಕೊಂಡು ಸಾರಥಿಯಾದ ಫಲ್ಗುಣನ ॥
ಮಂಡಲವಾಳುವ ಹರಿಶ್ಚಂದ್ರರಾಯನು ॥
ಕೊಂಡು ಕಾಯ್ದ ಚಂಡಾಲನ ಮನೆಯ ॥ ೪ ॥

ನೊಂದಿತು ಕಾಯವು ಬೆಂದಿತು ಒಡಲು ।
ಬೆಂದ ಒಡಲಿಗಾಗಿ ಹಾಸ್ಯಮಾಡಿ ॥
ಪುಂಡರೀಕಾಕ್ಷ ಶ್ರೀಪುರಂದರ ವಿಠಲನ ।
ತೊಂಡನಾಗಿ ನೀ ಸುಖಿಯಾಗಿ ಬಾಳು ॥

---

(೧) ಕ. ವಿ, ವ ತಾಳೆಯೋಲೆಯಂತೆ ಬರೆದಿದೆ. ಬೇರೆ ಕಡೆಯಲ್ಲಿ ಸಿಕ್ಕುವುದಿಲ್ಲ. (೧೭೫೦ ಸಂ. ೧೮೫೮).

# ೨ ಪತಿತಪಾವನಶ್ರೀಹರಿ

೩೫

ರಾಗ—ಪೂರ್ವಿ ತಾಳ—ಆಟ

೧ಅನುಗಾಲವು ಚಿಂತೆ ಮನುಜಗೆ ।
೨ಮನಹೋಗಿ ಮಾಧವನ ಒಡಗೂಡುವನಕ ॥ ಪ ॥

ಹೆಂಡಿರಿದ್ದರು ಚಿಂತೆ ಹೆಂಡಿರಿಲ್ಲದ ಚಿಂತೆ ।
ಕೊಂಡುಕುರೂಪಿಯಾದರು ಚಿಂತೆಯು ॥
ತೊಂಡನಾಗಿ ತಿರುಗಿ ತುತ್ತ ತರುವ ಚಿಂತೆ ।
ಮಂಡೆ ಬೀಳುವತನಕ ಚಿಂತೆ ಕಾಣಣ್ಣಾ ॥ ೧ ॥

ಬಡವನಾದರು ಚಿಂತೆ ಬಲ್ಲಿದನಾದರು ಚಿಂತೆ ।
ಕೊಡಧನ ಕೈಯೊಳಿದ್ದರು ಚಿಂತೆಯು ॥
ಬಡವನಾಗಿ ತಿರುಗಿ ತುತ್ತ ತರುವ ಚಿಂತೆ ।
ಪೊಡವಿಯೊಳಿಲ್ಲದ ಚಿಂತೆ ಕಾಣಣ್ಣಾ ॥ ೨ ॥

ಮನೆಯಿದ್ದರೂ ಚಿಂತೆ ಮನೆಯಿಲ್ಲದ ಚಿಂತೆ ।
ಮನೆಭಾರವತಿಯಾದರೂ ಚಿಂತೆಯು ॥
ಮನಸಿಜನಯ್ಯ ಶ್ರೀಪುರಂದರವಿಠಲನ ।
ನೆನೆದರೆ ಚಿಂತೆಯೆ ಇಲ್ಲ ಕಾಣಣ್ಣಾ ॥ ೩ ॥

---

೧) ಈ ಪಾಡನ್ನು ಕ. ವಿ. ವಿ. ತಾಳೆಗರಿಯ ಪ್ರತಿಯಿಂದ ತೆಗೆದು ಬರದಿದೆ (೧೭೫೦ ನಂ. ೧೮೫೮)

೨) ಮನವು ಶ್ರೀರಂಗನೊಳಾಗುವ ತನಕ—(ಕ. ವಿ ವಿ ತಾಳೆಗರಿ ೧೮೧೮)

ವಿ. ಸೂ . ಮುದ್ರಿತ ಹಾಗು ಹಸ್ತಪ್ರತಿಗಳಲ್ಲೆಲ್ಲ ಈ ಹಾಡು ಬೇರೆ ಬೇರೆ ರೂಪದಲ್ಲಿ ಕಾಣುತ್ತಿದೆ.

**೩೬**

ರಾಗ— ಸಾವೇರಿ ತಾಳ— ಝಂಪೆ

[೧]ಏಕೆ ಕಳವಳಾತಿಪಡುವೇ—ಎಲೆ ಮನವೆ ॥ ಪ ॥

ಲೋಕವನೆ ಸಲಹುವ ಶ್ರೀನಿವಾಸನು ನಮ್ಮ ॥
ಸಾಕಲಾರದೆ ಬಿಡುವನೇ—ಮನವೆ ॥ ಅ, ಪ. ॥

ಆನೆಗಳಿಗೆಯ್ದಾರು ಮಣವಿನಾಹಾರವನು
ಅಲ್ಲಿ ತಂದಿತ್ತವರದಾರೊ ।
ಜೇನುನೊಣ ಮೊದಲಾದ ಕ್ರಿಮಿ-ಕೀಟಗಳಿಗೆಲ್ಲ
ತಾನುಣಿಸದಲೆ ಬಿಡುವನೇ—ಮರುಳೆ ॥ ೧ ॥

ಕಲ್ಲಿನೊಳಗಿರುವ ಕಪ್ಪೆಗಳಿಗಾಹಾರವನು
ಅಲ್ಲೆ ತಂದಿತ್ತವರದಾರೊ ।
ಎಲ್ಲವನು ತೊರೆದು ಆರಣ್ಯ ಸೇರಿದ್ದರ್ವವರ ।
ಅಲ್ಲಿ ನಡಸದೆ ಬಿಡುವನೇ—ಮರುಳೆ ॥ ೨ ॥

ಅಡವಿಯೊಳಗೇ ಪುಟ್ಟುವಾ ಮೃಗಕುಲಕ್ಕೆಲ್ಲ
ಒಡೆಯುನಾರುಂಟು ಪೇಳೊ ।
ಗಿಡದಿಂದ ಗಿಡಕೆ ಹಾರುವ ಪಕ್ಷಿಗಳಿಗಲ್ಲಿ ।
ಪಡಿಯು ನಡೆಸದೆ ಬಿಡುವನೇ—ಮರುಳೆ ॥ ೩ ॥

ಕಂಡಕಂಡವರ ಕಾಲಿಗೆ ಎರಗಿ ಎಲೆ ಮರುಳೆ
ಮಂಡೆ ದಡ್ಡಾಯಿತಲ್ಲ ।
ಭಂಡ ಮನವೇ ನೀನು ಕಂಡವರಿಗೆರಗದಿರು
ಕೊಂಡಾಡಿ ಹರಿಯ ಭಜಿಸೋ—ಮರುಳೆ ॥ ೪ ॥

ಎಂಬತ್ತುನಾಲ್ಕುಲಕ್ಷ ಜೀವರಾಶಿಗಳನ್ನು
ಬೆಂಬಿಡದೆ ಸಲುಹುತಿಹನು ।
ನಂಬು ಶ್ರೀಪುರಂದರವಿಟ್ಠಲನ ಪಾದವನು
ನಂಬಿದರೆ ಸಲಹದಲೆ ಬಿಡುವನೇ—ಮರುಳೆ ॥ ೫ ॥

---

೧) ಅ (ಲ) ಆ ಇ. ಖ. ಝ ಶ್ರೀ. ಸಂಗ್ರಹಗಳಿಂದ ತೆಗೆದುಕೊಂಡಿದೆ.

**೩೭**

ರಾಗ—ತೋಡಿ ತಾಳ—ಅಟ

೧ಈ ಶರೀರದ ಭ್ರಾಂತಿ ಇನ್ನೇಕೆ ಮನವೆ ।
ವಾಸುದೇವನ ನೆನೆದು ಸುಖಿಯಾಗು ಮನವೆ ॥ ಪ ॥

ಕಾಲು ಜವಗುಂದಿದುವು ದೃಷ್ಟಿಗಳು ಹಿಂಗಿದುವು ।
ಮೇಲೆ ಜವ್ವನ ಹೋಗಿ ಜರೆಯೊದಗಿತು ॥
ಕಾಲ-ಕರ್ಮಾದಿಗಳು ಕೂಡಿದಾಕ್ಷಣದಲಿ ।
ಬೀಳುವೀ ತನುವಿನೊಳ್ ಇನ್ನಾಸೆಯೆ ಮನವೆ ॥ ೧ ॥

ದಂತಗಳು ಸಡಿಲಿದುವು ಧಾತುಗಳು ಕುಂದಿದುವು ।
ಕಾಂತೆಯರು ಜರಿದು ಓಕರಿಸುವರು ॥
ಭ್ರಾಂತಿ ಇನ್ನೇಕೆ ಈ ತನುವು ಬೀಳದ ಮುನ್ನ ।
ಸಂತತ ಶ್ರೀಹರಿಯ ನೆನೆ ಕಾಣೊ ಮನವೆ ॥ ೨ ॥

ನೀರಬೊಬ್ಬುಳಿಯಂತೆ ನಿತ್ಯವಲ್ಲ ಈ ದೇಹ ।
ಸಾರುತಿದೆ ನೀ ಮೆಚ್ಚಿ ಮರುಳಾಗದೆ ॥
ಶ್ರೀರಮಣ ಪುರಂದರವಿಠಲನ ನೆನೆ–ನೆನೆದು ।
ಸೂರೆಗೊಳ್ಳಿರೊ ಸ್ವರ್ಗ ಸುಮ್ಮನಿರಬೇಡಿ ॥ ೩ ॥

**೩೮**

ರಾಗ—ಸಾರಂಗ ತಾಳ—ಅಟ

೨ಮನವೆ ಚಂಚಲಮತಿಯ ಬಿಡು—ನಮ್ಮ- ।
ವನಜನಾಭನ ಪಾದಭಜನೆಯ ಮಾಡು ॥ ಪ ॥

ಬಡಮನುಜಗೆ ಬಾಯಬಿಡುತ ದೈನ್ಯದಲವನ ।
ಅಡಿಗಳಿಗೆರಗಲು ಕೊಡುವನೇನೊ ॥

೧) ಆ (VI). ಶ್ರೀ. ಪ್ರತಿಗಳಿಂದ ತೆಗೆದುಕೊಂಡಿದೆ.
೨) ಅ (೧). ಇ (೧೦). ಪ್ರತಿಗಳಿಂದ ಆರಿಸಿಕೊಂಡಿದೆ

ಕಡಲಶಯನ ಜಗದೊಡೆಯನ ನೆನೆಯೆ ಕೈ- ।
ಪಿಡಿದು ತಾ ಸಲಹುವ ಬಿಡದಲೆ ಅನುಗಾಲ ॥ ೧ ॥

ಬಲ್ಲಿದ ಭಕುತರ ಬಲ್ಲವ ಬಹುಸಿರಿ ।
ಯುಳ್ಳ ಕರುಣಿ ಲಕ್ಷ್ಮೀನಲ್ಲನಿರೆ ॥
ಕ್ಷುಲ್ಲಕರನು ಕಾಯಸಲ್ಲದೆಂದೆಂದಿಗು
ನಿಲ್ಲು ಹರಿಯ ಪಾದದಲ್ಲಿ ತಲ್ಲಣಿಸದೆ ॥ ೨ ॥

ಮುಗಿಲು ಮೇಲಡೆಗೆಡೆ ಅಗಣಿತವಾದಾಪ- ।
ತ್ತುಗಳು ಬಂದಡರಲು ನಗುತಲಿರು ॥
ಜಗದಧೀಶನ ಮಹಿಮೆಗೆ ನಮೋನಮೋ ಎಂದು ।
ಪೊಗಳುತ ಬಾಳು ನೀ ಅಘಗಳ ಗಣಿಸದೆ ॥ ೩ ॥

ಆವಾವ ಕಾಲಕೆ ದೇವನಿಚ್ಛೆಯಿಂದ ।
ಆವಾವುದು ಬರೆ ನಿಜಸುಖವೆನ್ನು ॥
ಶ್ರೀವರ ಅನಾದಿಜೀವರ ಕ್ಲೃಪ್ತದಂತೆ ।
ಈವನು ನಿಜಸ್ವಭಾವ ಬಿಡದೆ ನಿತ್ಯ ॥ ೪ ॥

ಕೇಶವಾಚ್ಯುತ ಶ್ರೀನಿವಾಸ ಮುರಾರೇ ।
ದೋಷರಹಿತ ದೀನ ಪೋಷಕನೆನ್ನು ॥
ಮೋಸಗೊಳಿಪ ಭವಪಾಶವ ಖಂಡಿಪ ।
ಶ್ರೀಶಪುರಂದರವಿಠಲನು ಜಗಕಿರೆ ॥ ೫ ॥

## ೩೯

ರಾಗ—ನಾದನಾಮಕ್ರಿಯೆ ತಾಳ—ಅಟ

[೧]ಮನವ ಶೋಧಿಸಬೇಕು ನಿಚ್ಚ—ದಿನ- ।
ದಿನದಿ ಮಾಡುವ ಪಾಪ ಪುಣ್ಯದ ವೆಚ್ಚ ॥ ಪ ॥

೧) ಅ (೧೧) ಝ (೮) ಪ್ರತಿಗಳಿಂದ ತೆಗೆದುಕೊಂಡಿದೆ.

ಧರ್ಮ ಅಧರ್ಮ ವಿಂಗಡಿಸಿ—ದು- ।
ಷ್ಕರ್ಮಕೆ ಏರಿದ ಬೇರ ಕತ್ತರಿಸಿ ॥
ನಿರ್ಮಲಾಚಾರದಿ ಚರಿಸಿ—ಪರ- ।
ಬೊಮ್ಮಮೂರುತಿ ಪಾದಕಮಲವ ಭಜಿಸಿ ॥ ೧ ॥

ತನುವ ದಂಡಿಸಿ ಒಮ್ಮೆ ಮಾಣೊ—ನಿನ್ನ- ।
ಮನವ ಶೋಧಿಸಿ ಪರಮಾತ್ಮನ ಕಾಣೊ ॥
ನೀನು ನಿನ್ನೊಳಗೆ ಜಾಣನೊ—ಮುಕುತಿ- ।
ಯೇನೂ ದೂರಿಲ್ಲವೊ ಒಂದೇ ಗೇಣೊ ॥ ೨ ॥

ಆತನ ಭಕ್ತರಿಗೆ ಕೇಡಿಲ್ಲ—ಅವ- ।
ಪಾತಕ-ಪತಿತಸಂಗವ ಮಾಡ ಸಲ್ಲ ॥
ನೀತಿವಂತರು ಕೇಳಿರೆಲ್ಲ—ನಮ- ।
ಗೀತನೆ ಗತಿಯೀವ ಪುರಂದರವಿಠಲ ॥ ೩ ॥



# ೩ ಕಾರುಣ್ಯಯಾಚನೆ

## ೪೦

ರಾಗ—ನಾದನಾಮಕ್ರಿಯೆ　　　　　　　　　　ತಾಳ—ಅಟ

೧ಏನ ಮಾಡಲಿ ಶ್ರೀಹರಿ—ಇಂಥ ।
ಮಾನವಜನ್ಮ ನಚ್ಚಿಸಬಹುದೆ ? ॥ ಪ ॥

ಮಾತನಾಡದೆ ಮೌನದೊಳಿದ್ದರೆ—ಮೂಕ- ।
ನೀತನೆಂದು ಧಿಕ್ಕರಿಸುವರು ॥
ಚಾತುರ್ಯದಿಂದಲಿ ಮಾತುಗಳಾಡಲು ।
ಈತನು ಬಲು ಬಾಯ್ಬಡಿಕನೆಂಬುವರಯ್ಯ ॥ ೧ ॥

ಮಡಿ ನೇಮ ಜಪ-ತಪಂಗಳ ಮಾಡುತಿದ್ದರೆ ।
ಬಡಿವಾರದವನೆಂದಾಡುವರು ॥
ಮಡಿ ನೇಮ ಜಪ-ತಪಂಗಳ ಮಾಡದಿದ್ದರೆ ।
ನಡತೆಹೀನನೆಂದು ಬಲು ನಿಂದಿಸುವರಯ್ಯ ॥ ೨ ॥

ಗಟ್ಟಿಯಾಗಿ ಒಪ್ಪತ್ತಿನೂಟದೊಳಿದ್ದರೆ ।
ನಿಷ್ಠೆಯೇನು ಸುಟ್ಟಿತೆಂಬುವರು ॥
ಗಟ್ಟಿಯಾಗಿ ಎರಡು ಮೂರು ಬಾರಿಯುಂಡರೆ ।
ಹೊಟ್ಟೆಬಾಕನೆಂದು ತೆಗಳಾಡುವರಯ್ಯ ॥ ೩ ॥

ಒಲಪಿನೊಳ್ಚೆನ್ನಿಗತನವನು ಮಾಡಲು ॥
ಬಲು ಹೆಮ್ಮಗಾರನೆಂದಾಡುವರು ॥
ಸುಲಭತನದಿ ತಾ ನಿಗರ್ವಿಯಾಗಿದ್ದರೆ ।
ಕಲಿಯುಗದಲಿ ಮಂದಮತಿಯೆಂಬುವರಯ್ಯ ॥ ೪ ॥

---

೧) ಕ. ವಿ. ವಿ ತಾಳೆಗರಿ ಪ್ರತಿಯಿಂದ ತೆಗೆದುಕೊಂಡಿದೆ. (೧೭೫೦—ನಂ. ೧೮೭೮)

ನರಜನ್ಮದೊಳಗಿನ್ನು ಮುಂದೆ ಪುಟ್ಟಿಸಬೇಡ ।
ಮೊರೆಹೊಕ್ಕೆ ಮತ್ತ್ಯಾವತಾರ ನಿನ್ನ ।
ಧರೆಯೊಳಗಿಹ ಪರಿಯಂತರ ಸಲಹೆನ್ನ ।
ಕರುಣವಾರಿಧಿ ಶ್ರೀಪುರಂದರವಿಠಲ ॥ ೫ ॥

## ೪೧

ರಾಗ—ಪೂರ್ವಿ ತಾಳ—ಅಟ

(೧)ಕೊಡುವುದೆಂದು ಎನ್ನ ಕೊಂಬುದೆಂದು—ಕೈ- ।
ಪಿಡಿವುದೆಂದು ನೀ ಒಲಿವುದೆಂದು ॥ ಪ ॥

ಕೊಡುಕೊಂಬ ಮಹದನುಗ್ರಹದವನೆಂದು ನಿ- ।
ನ್ನಡಿಗೆ ಸೇರಿದೆನಯ್ಯ ಬಡತನಕೌಷಧ ॥ ಅ. ಪ ॥

ಶ್ವಾನ-ಸೂಕರ ಜನ್ಮ ನಾನುಂಬೆ ನನ್ನಲ್ಲಿ ।
ನೀನೇ ತತ್ತದ್ರೂಪನಾದೆಯಲ್ಲ ॥
ಹೀನರೊಳ್ ನಾನತಿ ಹೀನನಾಗಿ—ಅಭಿ- ।
ಮಾನಿಯಾಗಿ ಕಾಲಕಳೆದೆನಲ್ಲ ॥
ವಾನರನಂಗೈಯ ಮಾಣಿಕ್ಯದಂತೆನ್ನ ।
ಮಾನದಂತರ್ಯಾಮಿ ಸಿಕ್ಕೆಯಲ್ಲ ॥
ಏನೇ ಆದರು ನಿನ್ನೊಳೆನಗೆ ಮುಂದೆಭಕ್ತಿ- ।
ಜ್ಞಾನ-ವೈರಾಗ್ಯಭಾಗ್ಯಗಳನು ದೇವ ॥ ೧ ॥

ಕಾಡಿನ ಮೃಗವು ತಾ ಹಾಡಿದರೆ ನಂಬಿ ।
ಆಡುವುದಲ್ಲದೆ ಓಡುವುದೆ ? ॥
ಕಾಡುವ ಪಶುವಿನ ಬಾಲವ ಕಟ್ಟಿಸಿ ।
ಕೂಡೆ ಪಾಲ್ಗರೆಯಲು ಒದೆಯುವುದೆ ? ॥
ಆಡುವ ಶಿಶು ತಪ್ಪಮಾಡಲು ಜನನಿ—ಕೊಂ- ।
ಡಾಡುವಳಲ್ಲದೆ ದೂಡುವಳೆ ॥

೧) ಎ ಪ್ರತಿಯಲ್ಲಿ [illegible].

ಮೂಢಬುದ್ಧಿಯೊಳು ಕೆಟ್ಟೆನೆಂದು—ಕೋಪ ।
ಮಾಡಬೇಡ ದಯೆಮಾಡಿ ನೀಡಿಷ್ಟವ ॥ ೨ ॥

ಹಣ್ಣಾದ ಹೊತ್ತು ಬಾಯ್‌ಹುಣ್ಣಾದ ತೆರನಂತೆ ।
ನಿನ್ನ ಸೇರುವ ಯತ್ನ ಬಿಟ್ಟು ನಾನು ॥
ಹೆಣ್ಣು ಹೊನ್ನು ಮಣ್ಣಿಗಾಗಿಯೆ ಭ್ರಮೆಗೊಂಡೆ ।
ಸುಣ್ಣಕಿಕ್ಕಿದ ನೀರಿನಂತಾದೆನು ॥

ಎನ್ನಪರಾಧವನಂತ ಕ್ಷಮಿಸು ನೀನು ।
ಮನ್ನಿಸದಿರಲಾರಿಗೆ ಪೇಳ್ವೆನು ॥
ಓಂ ನಮೋ ಶ್ರೀಹರಿ ಎಂಬ ಪೂರ್ಣಜ್ಞಾನ- ।
ವನ್ನು ಪುರಂದರವಿಠಲ ಎನ್ನಪ್ಪನೆ ॥ ೩ ॥

## ೪೨

ರಾಗ—ಬಿಲಹರಿ ತಾಳ—ಅಟ

[೧]ಬರಿದೆ ಹೋಯಿತು ಹೊತ್ತು—ಹರಿಯೆ ।
ಶರೀರವೆ ಸ್ಥಿರವೆಂದು ಮರೆತು ನಾನಿದ್ದೆನೊ ॥ ಪ ॥

ಆಸೆಯೆಂಬುದು ಎನ್ನ ಕ್ಲೇಶಪಡಿಸುತಿದೆ ।
ಗಾಸಿಯಾದೆನೊ ಹರಿಯೆ ॥
ಶೇಷಶಯನನು ನೀನು ನಿನ್ನ ನಂಬಿದೆ ನಾನು ।
ನಾಶವಾಯಿತು ದಿನ ಮೋಸಹೋದೆನಯ್ಯ ॥ ೧ ॥

ಸತಿ-ಸುತರೆಂದೆಂಬ ಅತಿ ಭ್ರಾಂತಿಗೊಳಗಾದೆ ।
ಮತಿಹೀನ ನಾನಾದೆನೊ ॥
ಸತತ ನಿರಂತರ ಜಡದೇಹ ನಾನಾದೆ ।
ರತಿಗೆಳೆಯುತಿದೆ ಮನಸು ಹರಿಸರ್ವೋತ್ತಮನೆ ॥ ೨ ॥

---

೧) ಅ (ಲ) ಶ್ರೀ ಪ್ರತಿಗಳಿಂದ ಇದನ್ನು ಆರಿಸಿಕೊಂಡಿದೆ.

ಪರರ ಸೇವೆಯ ಮಾಡಿ ಪರರನೆ ಕೊಂಡಾಡಿ ।
ಮರೆತೆನೊ ನಿನ್ನ ಧ್ಯಾನ ॥
ಕರುಣದಿಂದಲಿ ಎನ್ನ ಕಾಯ್ದು ನೀ ಸಲಹಯ್ಯ ।
ಪುರಂದರವಿಠಲ ನಿನ್ನನೆ ನಂಬಿದೆ ನಾನು ॥ ೩ ॥

೪೩

ರಾಗ— ಕಾಂಬೋದಿ ತಾಳ—ಝಂಪೆ

೧ಏನ ಮಾಡಿದರೆನ್ನ ಭವಹಿಂಗದು ।
ದಾನವಾಂತಕ ನಿನ್ನ ದಯವಾಗದನಕ ॥ ಪ ॥

ಅರುಣೋದಯದಲೆದ್ದು ಅತಿಸ್ನಾನಗಳ ಮಾಡಿ ।
ಬೆರಳನೆಣಿಸುತ ಸ್ಮರಿಸಿ ನಿಜವರಿಯದೆ ॥
ಶರಣು ಸಾಷ್ಟಾಂಗವನು ಹಾಕಿದೆನು ಶತಸಹಸ್ರ ।
ಹರಿ ನಿನ್ನ ಕರುಣಾಕಟಾಕ್ಷವಿರದನಕ ॥ ೧ ॥

ಶ್ರುತಿಶಾಸ್ತ್ರ ಪೌರಾಣಗಳನೋದಿ ಬೆಂಡಾದೆ ।
ಅತಿಶೀಲಗಳನೆಲ್ಲ ಮಾಡಿ ದಣಿದೆ ॥
ಗತಿಯ ಪಡೆಯುವೆನೆಂದು ಗಯೆ ಕಾಶಿ ಮಾಡಿದೆನು ।
ರತಿಪತಿಯ ಪಿತ ನಿನ್ನ ದಯವಾಗದನಕ ॥ ೨ ॥

ದಾನವನು ಮಾಡಿದೆನು ಮೌನವನು ತಾಳಿದೆನು ।
ಜ್ಞಾನ ಪುರುಷಾರ್ಥಕ್ಕೆ ಮನವೀಯದೆ ॥
ಶ್ರೀನಾಥ ದಯಪೂರ್ಣ ಪುರಂದರವಿಠಲನ ।
ಧ್ಯಾನಿಸುವರೊಡನಾಡಿ ನೆಲೆಗೊಳ್ಳದನಕ ॥ ೩ ॥

೧) ಅ. (೧೧) ಆ. (೮) ಪ್ರತಿಗಳಿಂದ ತೆಗೆದುಕೊಳ್ಳಲಾಗಿದೆ

## ೪೪

ರಾಗ—ಆನಂದಭೈರವಿ — ತಾಳ - ತ್ರಿವಿಡಿ

೧ಗೋವಿಂದ ನಮೋ ಗೋವಿಂದ ನಮೋ ಗೋವಿಂದ—ನಾರಾಯಣ ।
ಗೋವರ್ಧನ ಗಿರಿಯನೆತ್ತಿದ ಗೋವಿಂದ—ನಮ್ಮ ರಕ್ಷಿಸೊ ॥ ಪ ॥

ಅರ್ಥವಾರಿಗೆ ಪುತ್ರರಾರಿಗೆ ಮಿತ್ರಬಾಂಧವರಾರಿಗೆ ।
ಕರ್ತು ಯಮನವರೆಳೆದು ಒಯ್ಯಲು ಅರ್ಥ-ಪುತ್ರರು ಕಾಯ್ವರೆ ॥ ೧ ॥

ಮಂಚ ಬಾರದು ಮಡದಿ ಬಾರಳು ಕಂಚುಗನ್ನಡಿ ಬಾರದು ।
ಸಂಚಿತಾರ್ಥದ ದ್ರವ್ಯಬಾರದು ಮುಂಚೆ ಮಾಡಿರಿ ಧರ್ಮವ ॥ ೨ ॥

ಒಡವೆಯಾಸೆಗೆ ಒಡಲ ಕಿಚ್ಚಿಗೆ ಮಡದಿ ಬೆನ್ನಲಿ ಬಾಹಳು ।
ಬಿಡದೆ ಯಮನವರೆಳೆದು ಒಯ್ಯಲು ಎಡವಿ ಬಿದ್ದಿತು ನಾಲಗೆ ॥ ೩ ॥

ಪ್ರಾಣಲ್ಲಭೆ ತನ್ನ ಪುರುಷನ ಕಾಣದೆಯೆ ನಿಲಲಾರಳು ।
ಪ್ರಾಣ ಹೋಗಲು ಮುಟ್ಟಲಂಜುವಳು ಜಾಣೆ ಕರೆದರೆ ಬಾರಳು ॥ ೪ ॥

ತಂದು ಬಂದರೆ ತನ್ನ ಪುರುಷಗೆ ಬನ್ನಿ ಬಳಲಿದಿರೆಂಬಳು ।
ಒಂದು ದಿನದಲಿ ತಾರದಿದ್ದರೆ ಹಂದಿ ನಾಯಂತೆ ೨ಕೆಲೆವಳು ॥ ೫ ॥

ಉಂಟುಕಾಲಕೆ ನಂಟರಿಷ್ಟರು ಬಂಟರಾಗಿಯೆ ಕಾಯ್ವರು ।
ಕಂಟಕರು ಯಮನವರು ಎಳೆವಾಗ ನಂಟರಿಷ್ಟರು ಬಾರರು ॥ ೬ ॥

ದಿಟ್ಟತನದಲಿ ಪಟ್ಟವಾಳಿದ, ಮೆಟ್ಟಿ ದಿತಿಜರಸೀಳಿದ ।
ಮುಟ್ಟಿ ಭಜಿಸಿರೊ ಶ್ರೀಪುರಂದರವಿಟ್ಠಲೇಶನ ಚರಣವ ॥ ॥ ೭ ॥

---

೧) ಇದು (೧/೧೦) ಶ್ರೀ. ಪ್ರತಿಗಳಿಂದ ಆರಿಸಿಕೊಂಡಿದೆ. ಇ. ಪ್ರತಿಯಲ್ಲಿ ೫ ನುಡಿಗಳಿವೆ.

೨) ಬೊಗಳೊಳು (ಎ)

## ೪೫

ರಾಗ—ಕಲ್ಯಾಣಿ ತಾಳ—ಝಂಪೆ

[೧]ಭಾಷೆ ಹೀನರ ಆಸೆ ಪ್ರಾಣ ಗಾಸಿ ।
ಬೇಸತ್ತು ಬೇಲಿ ಮೇಲೊರಗಿದಂತೆ ॥ ಪ ॥

ಚಳಿಗೆ ನಡುಗುತ ಹೋಗಿ ಜಲದೊಳಗೆ ಪೊಕ್ಕಂತೆ ।
ಮಳೆಯು ರಭಸಕೆ ಮರವನೇರಿ ಕುಳಿತಂತೆ ।
ಹುಳುವಿನಟ್ಟುಳಿಗಂಜಿ ಹುತ್ತಿನೊಳು ಹೊಕ್ಕಂತೆ ।
ಎಳನರಿಯು ಒಂಟೆಯಾ ತುಟಿಗೆ ಜೋತಂತೆ ॥ ೧ ॥

[೨]ಹಸಿವೆಗಾರದೆ ಬೆಕ್ಕು ಹತ್ತಿಯನು ತಿಂದಂತೆ ।
ತೃಷೆಗಾರದವ ತೆವರ ತೋಡಿದಂತೆ ॥
ಬಿಸಿಲಿಗಾರದೆ ಕೋತಿ ಬಂಡೆ ಮೇಲ್ಕುಳಿತಂತೆ ।
ಕುಸುಬಿಯ ಹೊಲದೊಳಗೆ ಕಳ್ಳ ಪೊಕ್ಕಂತೆ ॥ ೨ ॥

ಹುಸಿಯನಾಡುವರಾಸೆ ಪುರುಷ ನಾರಿಯ ವೇಷ ।
ಬಿಸಿಲುಗುದಿರೆಯ ಭಾವ ಒಂದೆ ಕಾಣೊ ॥
ಬಿಸಜಾಕ್ಷ ವರದಶ್ರೀಪುರಂದರವಿಠಲನ ।
ಎಸೆವ ಪಾದದ ಸೇವೆ ಪರಮಸುಖ ಮನುಜಾ ॥ ೩ ॥

## ೪೬

ರಾಗ—ಪಂತುವರಾಳಿ ತಾಳ—ಆದಿ

[೩]ಉದರವೈರಾಗ್ಯವಿದು—ನಮ್ಮ- ।
ಪದುಮನಾಭನಲ್ಲಿ ಲೇಶಭಕುತಿ [೪]ಇಲ್ಲ ॥ ಪ ॥

---

೧) ಅ (೧) ಆ (II) ಇ. ಈ ಪ್ರತಿಗಳಿಂದ ಆರಿಸಿಕೊಂಡಿದೆ.
(ಓ) ಭಾಷೆಹೀನರ ಸಂಗ ಅಭಿಮಾನ ಭಂಗ.
೨) (ಆ) ಹಸಿವೆಗಾರದೆ ಹೋಗಿ ಹಸಿಯನೆ ಉಂಡಂತೆ.
೩) ಅ (೧) ಇ (೧೦). ಝ. ಪ್ರತಿಗಳಿಂದ ಆರಿಸಿಕೊಂಡಿದೆ.
೪) ಕಾಣೆ (ಅ ೮).

ಉದಯಕಾಲದಲೆದ್ದು ಗದಗದ ನಡುಗುತ ।
ನದಿಯಲಿ ಮಿಂದೆನೆಂದು ಹಿಗ್ಗುತಲಿ ॥
ಮದ ಮತ್ಸರ ಕ್ರೋಧ ಒಳಗೆ ೧ತುಂಬಿಟ್ಟುಕೊಂಡು ।
ಬದಿಯಲಿದ್ದವರಿಗಾಶ್ಚರ್ಯದೋರುವುದು ॥ ೧ ॥

ಕರದಲಿ ಜಪಮಣಿ ಬಾಯಲಿ ಮಂತ್ರವು ।
ಅರಿವೆಯ ಮುಸುಕನು ಮೋರೆಗೆ ಹಾಕಿ ॥
ಪರಸತಿಯರ ರೂಪ ಮನದಲಿ ಗುಣಿಸುತ ।
ವರಮವೈರಾಗ್ಯಶಾಲಿಯೆನಿಸುವುದು ॥ ೨ ॥

ಕಂಚುಗಾರನಾ ಬಿಡಾರದಂದದಿ ।
ಕಂಚು ಹಿತ್ತಾಳೆಯ ಪ್ರತಿಮೆಯ ನೆರಹಿ ॥
ಮಿಂಚಬೇಕೆಂದು ಬಹುಜ್ಯೋತಿಗಳನೆ ಹಚ್ಚಿ ॥
ವಂಚಕತನದಲಿ ಪೂಜೆಯ ಮಾಳ್ಪುದು ॥ ೩ ॥

ಬೂಟಕತನದಲಿ ಬಹಳ ಭಕುತಿ ಮಾಡಿ ।
ಸಾಟಿಯಿಲ್ಲವು—ಎನಗೆಂದೆನಿಸಿ ॥
ನಾಟಕಸ್ತ್ರೀಯಂತೆ ಬಯಲಡಂಬವ ತೋರಿ ।
ಊಟಕೆ ಸಾಧನ ಮಾಡಿಕೊಂಬುದಿದು ॥ ೪ ॥

ನಾನು ಎಂಬುದ ಬಿಟ್ಟು ಜ್ಞಾನಿಗಳೊಡಗೂಡಿ ।
ಏನಾದುದು ಹರಿಪ್ರೇರಣೆಯೆಂದು ॥
ಶ್ರೀನಿಧಿ ಪುರಂದರವಿಠಲರಾಯನನು ।
ಕಾಣದೆ ಮಾಡಿದ ಕಾರ್ಯಗಳಿಲ್ಲ ॥ ೫ ॥

೪೭

ರಾಗ—ಕಾಂಬೋದಿ ತಾಳ—ಅಟ

೨ದೇಹವೇಕೆ ನಮಗೆ ದೇಹ_ದೇಹ ಸಂಬಂಧಗಳೇಕೆ ।
ಆಹುದೇನೊ ಹೋಹುದೆನೊ ಇದರಿಂದ ಹರಿಯೆ ॥ ಪ ॥

---

೧) ತುಂಬಿ (ಅ. ೮)
೨) ಅ (೧೧) ರಿಂದ ಇದನ್ನು ತಗೆದುಕೊಳ್ಳಲಾಗಿದೆ.

ಮೆಚ್ಚಿ ಕಟ್ಟಿದ ಚೆಲುವ ಮಾಳಿಗೆ ಮನೆ ಏಕೆ ।
ಮುಚ್ಚಿ ಹೂಳಿದ ಹೊನ್ನು ಹಣವೇತಕೆ ॥
ಪಚ್ಚೆ ಮಾಣಿಕ ವಜ್ರ ವೈಡೂರ್ಯವೇತಕೆ ।
ಅಚ್ಯುತನ ದಾಸರಲಿ ಭಕ್ತಿ ಇಲ್ಲದ ಬಳಿಕ ॥ ೧ ॥

ಹೆಂಡಿರು ಮಕ್ಕಳು ಏಕೆ—ಹಣ ಹೊನ್ನು ಎನಲೇಕೆ ।
ಕಂಡ ವೇದಶಾಸ್ತ್ರಗಳನೋದಲೇಕೆ—ಭೂ-॥
ಮಂಡಲಾಧಿಪತ್ಯವೇಕೆ—ಮೇಲೆ ಸೌಂದರ್ಯವೇಕೆ ।
ಪುಂಡರೀಕಾಕ್ಷನ ದಾಸನಲಿ ಭಕ್ತಿಯಿಲ್ಲದ ಬಳಿಕ ॥ ೨ ॥

ಮಂದಾಕಿನಿ ಮೊದಲಾದ ತೀರ್ಥ-ಯಾತ್ರೆಗಳೇಕೆ ।
ಚೆಂದುಳ್ಳ ವಿಹಿತ ಕರ್ಮಗಳೇತಕೆ ॥
ಇಂದಿರೇಶ ನಮ್ಮ ಪುರಂದರವಿಠಲನ ।
ಪೊಂದಿ ಭಜಿಸದವನ ಇಂದ್ರಿಯಂಗಳೇಕೆ ॥ ೩ ॥

## ೫೮

## ಸುಳಾದಿ

### ಧ್ರುವತಾಳ

[೧]ಹುಟ್ಟುವ ಭೀತಿ ಹೊಂದುವ ಭೀತಿ ವಿಟ್ಠಲನಂಘ್ರಿಯ ನೆನೆಯದವಗೆ ।
ಕಾಲನ ಭೀತಿ ಕರ್ಮದ ಭೀತಿ ಗೋಪಾಲನ ದಾಸನಾಗದವಗೆ ।
ಅರಿಷಡ್ವರ್ಗದ ಮಹಾಬೀತಿ ಹರಿನಾಮ ಉಚ್ಚರಿಸದವಗೆ ।
ಹಲವು ಮಾತಿನಲೇನು ಹಲವು ಭೀತಿ ನಮ್ಮ ಪುರಂದರ
ವಿಠಲನ ಪೂಜಿಸದವಗೆ ॥ ೧ ॥

### ಮಟ್ಟೆತಾಳ

ನಿನ್ನ ದಿವ್ಯನಾಮ ಸುಧಾಂಬುಧಿಯಲ್ಲಿ
ಮನ ಮುಳುಗಿಪ್ಪ ಮಹಾಮಹಂತರ ।
ನಿನ್ನ ದಿವ್ಯ ಚಿನ್ಮಾತ್ರ ಮೂರುತಿಯ
ಅನುಭವಿಸುವಾನಂದಭರಿತರ ।

---

೧) ಇ (ಮುದ್ರಿತ) ಪ್ರತಿಯಿಂದ ಆರಿಸಿಕೊಂಡಿದೆ.

ಅನುದಿನವು ಅವರೊಳಿರಿಸೆನ್ನ

ಘನಮಹಿಮ ಶ್ರೀಪುರಂದರವಿಟ್ಠಲವಿಭುವೆ ॥ ೨ ॥

ತ್ರಿಪುಟತಾಳ

ನೀಲ ಘನಶ್ಯಾಮ ಕೋಮಲಾಂಗನ ಕಂಡು

ಅವ್ವಾ ಅವ್ವಾ ಎಂತು ನಿಲ್ಲಬಹುದೆ ॥

ಇನ್ನೆಂತು ಸೈರಿಪೆನೆ ಆರಾದಡೆ ಏನಾದಡೆ

ಎನ್ನ ಚಿನ್ನನು ಪುರಂದವಿಠಲ

ಆತನನಪ್ಪಿದೆನವ್ವಾ ॥ ೩ ॥

ಅಟತಾಳ

ಮಂಗಲಮಯ ವಿಷ್ಣುವಾಮನ

ಗಂಗಾಪಿತ ಹರಿಯೆ ಎನಲೆನ್ನ

ಕಂಗಳಲ್ಲಿ ಜಲವು ಉಕ್ಕುವುದು ।

ಅಂಗ ಪುಳಕಾಂಕವೆಂದಪ್ಪುದು—ಎನ್ನ-

ಕಂಗಳಲ್ಲಿ ಜಲವೆಂದು ಉಕ್ಕುವುದು ? ।

ಪುರಂದರವಿಠಲನಂಘ್ರಿಭಜಕನೆಂದು

ಕಂಗಳಲ್ಲಿ ಜಲವೆಂದು ಉಕ್ಕುವುದು ? ॥ ೪ ॥

ಆದಿತಾಳ

ಮಂದರಧರನ ಮೊರೆಹೊಕ್ಕು ಬದುಕುವೆನು

ಇಂದು ನಾಳೆ ನಾಡಿದ್ದೆಂಬ ।

ಮಂದಮತಿಗಿನ್ನೇನೆಂಬೆ ?

ಹಿಂದೆ ಮುಂದೆ ಸುತ್ತಿ ಬಪ್ಪ ಮೃತ್ಯು ವಿಚಾರಿಸದೆ ।

ತಂದು ತಂದು ಕೆಡಹುತಲಿದೆ ಭವಾಂಬುಧಿಯಲ್ಲಿ ।

ತುದೆನಿಂದು ಪರಿಯಂತ ಈ ಬೆಂದ ಮನದೀಪ್ಸೆಯು ।

ತಂದೆ ಕರುಣಿಸೆಲೆ ಪುರಂದರವಿಠಲ ವಿಭುವೆ ॥ ೫ ॥

ಜತೆ

ಮಾರಮಣ ಭೂರಮಣ ಪುರಂದರವಿಟ್ಠಲ ।

ಸಾರ್ವಭೌಮ ರಮಾರಮಣ ॥ ೬ ॥



ಶ್ರೀ ಪುರಂದರದಾಸರ ಗುರುಗಳಾದ ಶ್ರೀ ವ್ಯಾಸರಾಯರ ವೃಂದಾವನವು.

( ನವವೃಂದಾವನದಲ್ಲಿ )

# ೩ ಸಾಧನದರ್ಶನ



೧ ದೇಹಾನಿತ್ಯವಿವೇಕ

೨ ಸತ್ಸಂಗಮಹತಿ

೩ ಮಾನವಜನ್ಮವಿವೇಕ

೪ ನಾಮಸ್ಮರಣದರ್ಶನ

# ೧ ದೇಹಾನಿತ್ಯವಿವೇಕ

೪೯

ರಾಗ — ಪುನ್ನಾಗತೋಡಿ　　　　ತಾಳ — ಆದಿ

೧ನಿತ್ಯವಲ್ಲ ನಿತ್ಯವಲ್ಲ ಅ–ನಿತ್ಯದೇಹವಿದಣ್ಣ　　॥ ಪ ॥
　ಮತ್ತೆ ಮುರಾರಿ ಶ್ರೀಕೃಷ್ಣನ ನೆನೆದರೆ ।
　ಮುಕ್ತಿಸಾಧನವಣ್ಣ ದೇಹ　　॥ ಅ. ಪ ॥

ಮಾನಿನಿಯರ ಕುಚಕೆ ಮರುಳಾಗದಿರು
　　ಮಾಂಸದ ಗಂಟುಗಳಲ್ಲಿ ।
ನಾನಾ ಪರಿಯಲಿ ಮೋಹಮಾಡದಿರು
　　ಹೀನಮೂತ್ರದ ಕುಳಿಯಲ್ಲಿ ॥
ಜಾನಕಿರಮಣನ ನಾಮವ ನೆನೆದರೆ
ಜಾಣನಾಗುವೆಯಲ್ಲೋ—ಪ್ರಾಣಿ　　॥ ೧ ॥

೨ತಂದೆತಾಯಿ–ಅಣ್ಣತಮ್ಮರು–ಮಕ್ಕಳು ಹರಿದುತಿಂಬರೆಲ್ಲ ।
ಹೊಂದಿಪೊರೆಯುವಾ ನಂಟರಿಷ್ಟರು-ನಿಂದೆ ಮಾಡುವರೆಲ್ಲ ॥
ಮುಂದೆ ಯಮನ ದೂತರು ಎಳೆದೊಯ್ಯಲು
ಹಿಂದೆ ಬರುವರಿಲ್ಲೋ—ಪ್ರಾಣಿ　　॥ ೨ ॥

ಕತ್ತಲೆ ಬೆಳುದಿಂಗಳು ಸಂಸಾರವು ಕಟ್ಟುಧರ್ಮದ ಮೊಟ್ಟೆ ।
ಹೊತ್ತನರಿತು ಹರಿದಾಸರ ಸೇರೆಲೊ ಪೇಳ್ವರು ತತ್ತ್ವವ ಗಟ್ಟಿ ।
ಚಿತ್ತಜನಯ್ಯ ಪುರಂದರವಿಠಲನ
ಹೊಂದೋ ನೀ ಸುಖಬಟ್ಟಿ—ಪ್ರಾಣಿ　　॥ ೩ ॥

---

೧) ಆ (II) ಮ. ಶ್ರೀ ಪ್ರತಿಗಳಿಂದ ಆರಿಸಿಕೊಂಡಿದೆ.
೨) ಕ್ಷ: ತಂದೆತಾಯಿ ಅಣ್ಣತಮ್ಮ ಮಕ್ಕಳು ಬಂಧುಬಳಗದವರೆಲ್ಲ ।
　　ಹೊಂದಿ ಪೊರೆಯುವ ನಂಟರಿಷ್ಟರು ತಿಂದುಕಡಿಸುವರೆಲ್ಲ ॥

## ೫೦

ರಾಗ—ಮಧ್ಯಮಾವತಿ ತಾಳ—ಝಂಪೆ

[೧]ನಂಬದಿರು ಈ ದೇಹ ನಿತ್ಯವಲ್ಲ ।
ಅಂಬುಜಾಕ್ಷನ ಭಜಿಸಿ ಸುಖಿಯಾಗು ಮನವೇ ॥ ಪ ॥

ಎಲು-ರಕ್ತ-ಮಾಂಸಗಳ ಮೇಲೆ ಚರ್ಮದ ಹೊದಿಕೆ ।
ಮಲಮೂತ್ರ ಒಳಗೆ ಕ್ರಿಮಿರಾಶಿಯಿಹವು ॥
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು ।
ಹುಲುದೇಹವನು ನೆಚ್ಚಿ ಕೇಡಬೇಡ ಮನವೆ ॥ ೧ ॥

ಸತಿಸುತರು ಹಿತರೆಂದು ಮತಿಮರೆತು ಮಮತೆಯಲಿ ।
ಅತಿಕಾಂಕ್ಷೆಯಿಂದ ದುರ್ವಿಷಯ ಬಲಿದು ॥
ಸತತ ಲಕ್ಷ್ಮೀಪತಿಯ ಶರಣೆನದೆ ಇಹಪರದ ।
ಗತಿಶೂನ್ಯನಾಗಿ ಕೆಡಬೇಡ ಮನವೆ ॥ ೨ ॥

ಪರರ ನಿಂದಿಸದೆ ಪರವಧುಗಳನು ಬಯಸದೆ ।
ಗುರು-ವಿಪ್ರಸೇವೆಯನು ಮಾಡು ಬಿಡದೆ ॥
ಹರಿಸ್ತುತಿಯ ನೀ ಕೇಳು ಹರಿಕೀರ್ತನೆಯ ಪಾಡು ।
ಪರಮ ಪುರಂದರವಿಠಲನೊಲಿದು ಪಾಲಿಸುವ ॥ ೩ ॥

## ೫೧

ರಾಗ—ಸಾರಂಗ ತಾಳ—ಅಟ

[೨]ಈಗಲೆ ಭಜಿಸೆಲೆ ಜಿಹ್ವೆ - ನೀ- ।
ಜಾಗುಮಾಡದೆ ಶ್ರೀಹರಿಪಾದಾಂಬುಜವ ॥ ಪ ॥

ದೇಹ ಗೇಹ ಸಂಬಂಧಿಗಳು—ಅವರು ।
ಮೋಹಬದ್ಧರಾಗಿ ಕುಳಿತಿಹರು ॥

---

೧) ರಘು (೧/೧೦) ಶ್ರೀ ಪ್ರತಿಗಳಿಂದ ತೆಗೆದುಕೊಂಡಿದೆ

೨) ಆ (ಬಿಡಿ ೫) ಆ (II) ಕೃ. ಶ್ರೀ. ಪ್ರತಿಗಳಲ್ಲಿ ಈ ಹಾಡು ಸಿಕ್ಕುತ್ತದೆ

ಆಹಾರ ಗುಹ್ಯೇಂದ್ರಿಯವೆಂಬ ಎರಡರ ।
ಬೇಹಾರದಲಿ ನೀನು ಮುಳುಗಿಸದಲೆ ಮನ ॥ ೧ ॥

ಮರಣ ತೊಡಗಿ ನಾಲಗೆಯುಡುಗಿ—ನಿನ್ನ- ।
ತರುಣಿ ಪುತ್ರ ಮಿತ್ರರಳುತಿರಲು ॥
ಕೊರಳೊಳು ಗುರುಗುರು ಗುರುಗುಟ್ಟುವಾಗ ನರ- ।
ಹರಿಯ ನಾಮವೆನ್ನಗೊಡದೆಲೊ ಪ್ರಾಣಿ ॥ ೨ ॥

ಅಸಿಪತ್ರವನದೊಳು ಹೊಗಿಸಿ—ನಿನ್ನ- ।
ಬಸೆವಸೆಖಂಡ ಹೊರವೊಡಿಸಿ ॥
ಬಿಸಿಬಿಸಿ ನೆತ್ತರು ಬಸಿದು ಹೋಗುವಾಗ ।
ಕುಸುಮನಾಭನ ನಾಮ ನೆನೆಯಗೊಡದು ಮನ ॥ ೩ ॥

ತಪ್ತಲೋಹದ ಮೇಲೊರಗಿಸಿ—ನಿನ್ನ- ।
ಕತ್ತರಿಸಿದ ಖಂಡ ಬೇಯಿಸುವರು ॥
ನೆತ್ತಿಯ ಕೊರೆದು ನಾಲಗೆ ಹಿರಿದೊಗೆವಾಗ ।
ಚಿತ್ತಜನಯ್ಯನ ನೆನೆಯಗೊಡದು ಮನ ॥ ೪ ॥

ಕುಂಭಿಪಾಕದೊಳಗೆ ಕುದಿಸಿ—ನಿನ್ನ ।
ಅಂಬುಮೊನೆಗಳಿಂದಿರಿಯಿಸಿ ॥
ಅಂಬರಕೊಗೆಯೆ ಕಾಗೆಯು ಕಚ್ಚಿ ಕಡಿವಾಗ ।
ಅಂಬುಜಾಕ್ಷನ ನಾಮ ನೆನೆಯಗೊಡದು ಮನ ॥ ೫ ॥

ದುರುಳ ಯಮದೂತರಾರ್ಭಟಿಸಿ— ನಿನ್ನ- ।
ಎರಕದ ಕಾಯ್ದ ಕಂಬಕೆ ತಕ್ಕೆಗೆಯ್ಸಿ ॥
ಪರಿಪರಿ ಭವದೊಳು ಬಳಲಿಸುತಿರುವಾಗ ।
ಪುರುಷೋತ್ತಮನ ನಾಮ ನೆನೆಯಗೊಡದು ಮನ ॥ ೬ ॥

ದುರಿತಕೋಟಿಗಳ ಹರಿಸುವ—ನಿನ್ನ- ।
ನರಕಬಾಧೆಗಳ ತಪ್ಪಿಸುವ ॥
ಪರಮಪುರುಷ ನಮ್ಮ ಪುರಂದರವಿಠಲನ ।
ನಿರುತದಿ ನೆನೆದು ನೀ ಸುಖಿಯಾಗೋ ಮನವೆ ॥ ೭ ॥

# ೨ ಸತ್ಸಂಗಮಹತಿ

**೫೨**

ರಾಗ—ಕಾಂಬೋದಿ | ತಾಳ—ಅಟ

[೧]ಸಜ್ಜನರ ಸಂಗ ನಮಗೆಂದಿಗಾಗುವುದೊ ।
ದುರ್ಜನರ ಸಂಗದಿಂದಲಿ ನೊಂದೆ ಹರಿಯೆ ॥ ಪ ॥

ವಾಕು-ವಾಕಿಗೆ ಡೊಂಕನೆಣಿಸುವರು—ಮತ್ತೆ ।
ಪೋಕರಾಡಿದ ಮಾತು ನಿಜವೆಂಬರು ॥
ವಾಕುಶೂಲಗಳಿಂದ ನೆಡುವರು ಪರರನೀ ।
ಪೋಕುಮಾನವರಿಂದ ನೊಂದೆ ಹರಿಯೆ ॥ ೧ ॥

ತಾವೆ ತಮ್ಮನ್ನು ಕೊಂಡಾಡಿಕೊಳ್ಳುವರು ।
ನ್ಯಾಯವಿಲ್ಲದೆ ನುಡಿವರು ಪರರ ।
ಭಾವಿಸಲರಿಯರು ಗುರುಹಿರಿಯರನಿಂಥ ।
ಹೇಯ ಮನುಜರಿಂದ ನೊಂದೆ ಹರಿಯೆ ॥ ೨ ॥

ಬಡಜನರನು ಕೊಂದು ಅಡಗಿಸಿಕೊಂಬರು !
ಬಿಡಲೊಲ್ಲರು ಹಿಡಿದನ್ಯಾಯವ ॥
ನುಡಿದು ಕೇಡನು ಒಡನೆ ತಪ್ಪಿಸಿಕೊಂಬಂಥ
ಕಡುಮುರ್ಖರಿಂದ ನಾ ನೊಂದೆನು ಹರಿಯೆ ॥ ೩ ॥

ತೊತ್ತಿನೊಡನೆ ತನ್ನ ಸ್ನೇಹಸರಸ ಮಾತು ।
ತೆತ್ತಿಗರೊಡನೆ ಪಂಥವ ನುಡಿವರು ॥
ಸತ್ತಬಳಿಕ ಸೃಷ್ಟಿ ನಟಿಯೆಂಬರು ಇಂಥ ।
ಮತ್ತಮನುಜರಿಂದ ನೊಂದೆ ಶ್ರೀಹರಿಯೆ ॥ ೪ ॥

---

೧) ಅ (೮) ಪ್ರತಿಯೊಂದರಲ್ಲಿ ಈ ಹಾಡು ಸಿಕ್ಕುತ್ತದೆ,

ಇಷ್ಟುದಿನವು ನಿನ್ನ ನೆನೆಯುದ ಕಾರಣ ।
ಕಷ್ಟಪಡುವ ಕೈಮೇಲಾಗಿ ॥
ಸೃಷ್ಟಿಗೊಡೆಯ ಶ್ರೀಪುರಂದರವಿಠಲನೆ ।
ಮುಟ್ಟಿ ಭಜಿಸಬೇಕು ಧೃಷ್ಟಮನವು ನಿನ್ನ ॥ ೫ ॥

೫೩

ರಾಗ—ನಾದನಾಮಕ್ರಿಯೆ ತಾಳ—ಆದಿ

೧ಇರಬೇಕು ೨ಇರದಿರಬೇಕು ಶ್ರೀ- ।
ಹರಿದಾಸರು ಸಂಸಾರದೊಳು ॥ ಪ ॥

ಕುಲಸತಿಯಾದರೆ ಕೂಡಿರಬೇಕು ।
ಸುಲಭದಿಂದ ಸ್ವರ್ಗ ಸೂರಾಡಬೇಕು ॥
೩ಕಲಹಗಂಟಿ ಸತಿ ಕರ್ಕಶೆಯಾದರೆ ।
ಹಲವುಪರಿಯಿಂದಲಿ ಹೊರಗಾಗಬೇಕು ॥ ೧ ॥

ಮಕ್ಕಳು ತಾವು—ಮತಿವಂತರಾದರೆ ।
ಅಕ್ಕರೆಯಿಂದಲಿ ಕೂಡಿರಬೇಕು ॥
ಚಿಕ್ಕತನದಿ ಬುದ್ಧಿ ೪ತೇರುಂಡರಾದರೆ ।
೫ಗಕ್ಕನೆ ಅಲ್ಲಿಂದ ಹೊರಗಾಗಬೇಕು ॥ ೨ ॥

೬ದುಷ್ಟರ ಕಂಡರೆ ದೂರವಿರಬೇಕು ।
ಶಿಷ್ಟರ ಕಂಡರೆ ಕೈಮುಗಿಯಬೇಕು ॥

---

೧) ಅ (೧); ಆ (II). ಇ ಪ್ರತಿಗಳಿಂದ ಆರಿಸಿಕೊಂಡಿದೆ.
೨) ಇಲ್ಲದಿರಬೇಕು (ಅ ೧). ೩) ಕಲಹತನದಿ (ಅ. ೧).
೪) ಜೇರುಂಡ (ಅ ೧ ಆ II). ೫) ಗಕ್ಕನವರ ಬಿಟ್ಟು ಬರುತಾಗಬೇಕು (ಅ ೧)
೬) ಅ ೧. ಆ II ಪ್ರತಿಗಳಲ್ಲಿ ಬೇರೊಂದು ನುಡಿ ಇದೆ:—
ಹೀನರ ಕಂಡರೆ ಹಿಮ್ಮೆಟ್ಟಬೇಕು ।
ಜ್ಞಾನಿಗಳ ಕಂಡರೆ ಕೈಮುಗಿಯಬೇಕು ॥
ಸ್ವಾಮಿ ಶ್ರೀಪುರಂದರವಿಟ್ಠಲರಾಯನ ।
ನಾನಾ ಬಗೆಯಿಂದ ಕೊಂಡಾಡಬೇಕು ॥

ದಿಟ್ಟ ಶ್ರೀಪುರಂದರವಿಟ್ಠಲರಾಯನ ।
ಗಟ್ಟಿಯಾಗಿ ಆತನ ನೆರೆನಂಬಬೇಕು ॥ ॥ ೩ ॥

## ೫೪

ರಾಗ—ಆನಂದಭೈರವಿ ತಾಳ—ಅಟ

[1]ಬಾಯ್ಬಡಿಕರಿಂದ ನಾನು ಬದುಕಿದೆನು—ಅವರು- ।
ಮಾಡಿದುಪಕಾರವ ಮರೆಯೆ ಶ್ರೀಹರಿಯೆ ॥ ಪ ॥

ಹಂಗಿಸಿ ಹಂಗಿಸಿ ಮನವ ಹರಿಯಲಿ ನಿಲಿಸಿದರು ।
ಭಂಗಿಸಿ ಭಂಗಿಸಿ [2]ಬಯಲಾಸೆ ಕೆಡಿಸಿದರು ॥
ಕಂಗೆಡಿಸಿ ಕಂಗೆಡಿಸಿ ಕಾಮ ಕ್ರೋಧ ಬಿಡಿಸಿದರು ।
ಹಂಗಿಸಿದವರೆನ್ನ ಪರಮ ಬಂಧುಗಳು ॥ ೧ ॥

ಜಾಡಿಸಿ ಜಾಡಿಸಿ ಎನ್ನ ಜನ್ಮಗಳ ಕಳೆದರು ।
ಹೂಡಿಸಿ ಹೂಡಿಸಿ ಹುಟ್ಟು ಹೊಂದುಗೊಳಿಸಿದರು ॥
ಪೀಡಿಸಿ ಪೀಡಿಸಿ ಎನ್ನ ಪ್ರಯತ್ನವ ಕಳೆದರು ।
ಕಾಡಿ ಕಾಡಿ ಕೈವಲ್ಯ ಪದವಿ ತೋರಿದರು ॥ ೨ ॥

[3]ಕಾಸು ಮುಟ್ಟಿದಾಗ ಕಾಯ ಪ್ರಾಯಶ್ಚಿತ್ತಕಿಕ್ಕಿದರು ।
ದೂಷಿಸಿ ದೂಷಿಸಿ ನಿರ್ದೋಷ ಮಾಡಿದರು ॥
ಲೇಸನು ಕೊಡು ನಮ್ಮ ಪುರಂದರವಿಠಲನೆ ।
ದಾಸನೆಂದೆನಿಸುವರನುದಿನದಲಿ ಎನ್ನ ॥ ೩ ॥

---

೧) ಆ (II) ಝ (ಲ) ಪ್ರತಿಗಳಲ್ಲಿ ಸಿಕ್ಕುತ್ತಿದೆ
೨) ಮಿಾಸಲು ಮಾಡಿದರು ಹರಿಹರಿ ಒಡವೆ ಎಂದು (ಝ ಲ)
೩) ಕಾಸು ಮುಟ್ಟದಂತೆ ಪ್ರಾಯಶ್ಚಿತ್ತವನೆ ಮಾಡಿದರು (ಝ ಲ).

**೫೫**

ರಾಗ—ಪೂರ್ವಿ ತಾಳ—ಅಟ

೧ಅಪಮಾನವಾದರೆ ಒಳಿತು ।
ಅಪರೂಪ ಹರಿನಾಮ ಜಪಿಸುವ ಮನುಜಗೆ ॥ ಪ ॥

ಮಾನದಿಂದಲಿ ಅಭಿಮಾನ ಪುಟ್ಟುವುದು ।
ಮಾನದಿಂದಲಿ ತಪ ಹಾನಿಯಾಗುವುದು ॥
ಮಾನಿ ಕೌರವನಿಗೆ ಹಾನಿಯಾಯಿತು—ಅನು- ।
ಮಾನವಿಲ್ಲವು ಮಾನ-ಅಪಮಾನ ಸಮರಿಗೆ ॥ ೧ ॥

ಅಪಮಾನದಿಂದಲಿ ತಪವೃದ್ಧಿಯಾಹುದು ।
ಅಪಮಾನದಿಂ ಪುಣ್ಯ ಸಫಲವಾಗುವುದು ॥
ಅಪಮಾನದಿಂದಲಿ ನೃಪ ಧ್ರುವರಾಯಗೆ ।
ಕಪಟನಾಟಕ ಕೃಷ್ಣ ಅಪರೋಕ್ಷನಾದನು ॥ ೨ ॥

ನಾನೇನ ಮಾಡಲಿ ಆರಲ್ಲಿ ಪೋಗಲಿ ।
ಕಾನನಚರರಾರಾಧ್ಯ ನೀನಿರಲು ॥
ದೀನರಕ್ಷಕ ನಮ್ಮ ಪುರಂದರವಿಠಲನೆ ।
ಏನು ಬೇಡೆನಗಪಮಾನವೆ ಇರಲಿ ॥ ೩ ॥



೧) ಉ. ಪ್ರತಿಯಿಂದ ಆರಿಸಿಕೊಂಡಿದೆ.

# ೩ ಮಾನವಜನ್ಮವಿವೇಕ

**೫೬**

ರಾಗ—ಪಂತುವರಾಳಿ ತಾಳ—ಅಟ

[೧]ಮಾನವಜನ್ಮ ದೊಡ್ಡದು—ಇದ ।
ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ ॥ ಪ ॥

ಕಣ್ಣು ಕೈಕಾಲ್ಕಿವಿ ನಾಲಗೆ ಇರಲಿಕ್ಕೆ ।
ಮಣ್ಣುಮುಕ್ಕಿ ಮರುಳಾಗುವರೆ ॥
ಹೊನ್ನು ಹೆಣ್ಣಿಗಾಗಿ ಹರಿನಾಮಾಮೃತವನು ।
ಉಣ್ಣದೆ ಉಪವಾಸವಿರುವರೇನೋ ॥ ೧ ॥

ಕಾಲನವರು ಬಂದು ಕರಪಿಡಿದೆಳೆವಾಗ !
ತಾಳು ತಾಳೆಂದರೆ [೨]ಕೇಳುವರೆ ? ॥
[೩]ವೇಳೆ ಹೋಗದ ಮುನ್ನ ಧರ್ಮವ ಗಳಿಸಿರೊ ।
ಸುಳ್ಳಿನ ಸಂಸಾರ ಸುಳಿಗೆ ಸಿಲುಕಬೇಡಿ ॥ ೨ ॥

ಏನು ಕಾರಣ ಯದುಪತಿಯನು ಮರೆತಿರಿ ।
ಧಾನ್ಯ-ಧನ ಸತಿ-ಸುತರಿವು ನಿತ್ಯವೆ ?॥
ಇನ್ನಾದರು ಶ್ರೀಪುರಂದರ ವಿಠಲನ ।
ಚೆನ್ನಾಗಿ ಭಜಿಸಿ ನೀವ್ ಸುಖಿಯಾಗಿರಯ್ಯ ॥ ೩ ॥

**೫೭**

ರಾಗ—ಪೂರ್ವಿ ತಾಳ—ಅಟ

[೪]ಏನಾಯಿತೀ ಜನಕೆ ಮೌನವಿದು ಕವಿದಂತೆ ।
ಮಾನುಷ್ಯರಾಗಿ ಮರೆತರು ಹರಿಯನು ॥ ಪ ॥

---

೧) ಅ (೧ ೮) ಆ (I). ಝು (೧/೧೦) ಪ್ರತಿಗಳಿಂದ ಆರಿಸಿಕೊಂಡಿದೆ.
೨) ತಾಳುವರೆ. (ಬಹುಮತ)
೩) ಗಾಳಿ ಹೋಗದ ಮುನ್ನ (ಬಹುಮತ)
೪) ಅ (೮) ಎ. ಝು (೮) ಪ್ರತಿಗಳಿಂದ ತೆಗೆದುಕೊಂಡಿದೆ.

ನಾಲಗೆಗೆ ಮುರಿಯಿತೆ ನೆಗ್ಗಿಲ ಕೊನೆಮುಳ್ಳು ।
ಬಾಲತನದಲಿ ಭೂತ ಹೊಡೆಯಿತೆ—ಕೆಳಗು- ।
ಮೇಲಿನ ತುಟಿ ಎರಡು ಒಂದಾಯಿತೇ—ಅವರ- ।
ಕಾಲಮೃತ್ಯು ಬಂದು ಕಂಗೆಡಿಸಿತೆ ? ॥ ೧ ॥

ಘಟಿಸರ್ಪ ಕಚ್ಚಿ ವಿಷ ಘನವಾಗಿ ಏರಿತೆ ।
ಕಟಗರಿಸಿ ನಾಲಗೆ ಕಡಿದುಹೋಯಿತೆ ? ॥
ಹಟ ಹಿಡಿದ ಹೊಲೆಮನನು ಹರಿ ಎನ್ನಲಾರದೆ ।
ಕುಟಿಲ ಚಂಚಲ ಬುದ್ಧಿ ಕಂಗೆಡಿಸಿತ ? ॥ ೨ ॥

ಹರಿಯೆಂದರವರ ಶಿರ ಹರಿದು ಬೀಳುವುದೆ ।
ಪರಬ್ರಹ್ಮ ಹಣೆಯಲ್ಲಿ ಬರೆದಿಲ್ಲವೆ ॥
ಸಿರಿದೇವಿಗೊಲಿದ ಶ್ರೀಪುರಂದರವಿಠಲನ ।
ಸ್ಮರಿಸಿದರೆ ಸಿಡಿಲೆರಗಿ ಸುಟ್ಟು ಕೊಲ್ಲುವುದೆ ? ॥ ೩ ॥

### ೫೮

ರಾಗ—ನಾದನಾಮಕ್ರಿಯೆ ತಾಳ—ಆದಿ

[೧]ನರಸಾದ ಮೇಲೆ ।
ಹರಿನಾಮ ಜಿಹ್ವೆಯೊಳಿರಬೇಕು ॥ ಪ ॥

ಭೂತದಯಾಪರನಾಗಿರಬೇಕು ।
ಪಾತಕವೆಲ್ಲವ ಕಳೆಯಲು ಬೇಕು ॥
ಮಾತು-ಮಾತಿಗೂ ಹರಿ ಎನಬೇಕು ! ॥ ೧ ॥

ವೇದ-ಶಾಸ್ತ್ರಗಳನೋದಲು ಬೇಕು ।
ಭೇದಾಭೇದವ ತಿಳಿಯಲು ಬೇಕು ।
ಸಾಧು-ಸಜ್ಜನರ ಸಂಗದೊಳಿರಬೇಕು ॥ ೨ ॥

---

೧) ತ. ಪಿ. ವಿ. ತಾಳೆಯೋಲೆಯಂತೆ ಪ್ರತಿಮಾಡಿದೆ (೧೭೩೦ ನಂ. ೧೮೭೮)

ತಂದೆ-ತಾಯಿಗಳ ಸೇವೆಯು ಬೇಕು ।
ಬಂದುದನುಂಡು ಸುಖಿಸಲು ಬೇಕು !
ತಂದೆ ಪುರಂದರವಿಠಲನ ದಯೆಬೇಕು ॥ ೩ ॥

೫೯

ರಾಗ—ತೋಡಿ ತಾಳ—ರೂಪಕ

೧ವ್ಯರ್ಥವಲ್ಲವೆ—ಜನುಮ ವ್ಯರ್ಥವಲ್ಲವೆ ॥ ಪ ॥
ತೀರ್ಥಪದನ ಭಜಿಸಿ ತಾ ಕೃ- ।
ತಾರ್ಥನಾಗದವನ ಜನುಮ ॥ ಅ.ಪ ॥

ಒಂದು ಶಂಖವುದಕದಿಂದ ।
ಚೆಂದದಲಭಿಷೇಕ ಮಾಡಿ ॥
ಗಂಧ-ಪುಷ್ಪ ಹರಿಗೆ ಅರ್ಪಿಸಿ ।
ವಂದನೆ ಮಾಡದವನ ಜನುಮ ॥ ೧ ॥

ಮುಗುಳುದೆನೆಯು ಎಳೆ ತುಳಸಿ ದ- ।
ಳಗಳ ತಂದು ಪ್ರೇಮದಿಂದ ॥
ಜಗನ್ಮೋಹನ ಪೂಜೆಯ ಮಾಡಿ ।
ಚರಣಕೆರಗದವನ ಜನುಮ ॥ ೨ ॥

ಕಮಲ ಮಲ್ಲಿಗೆ ಸಂಪಿಗೆ ಜಾಜಿ ।
ವಿಮಲ ಕೇದಗೆ ಪ್ರೇಮದಿಂದ ॥
ಕಮಲನಾಭನ ಅರ್ಚನೆ ಮಾಡಿ ।
ಕರವಮುಗಿಯದವನ ಜನುಮ ॥ ೩ ॥

ಪಂಚಭಕ್ಷ್ಯ ಪಾಯಸ ಘೃತ ।
ಪಂಚಾಮೃತ ಹರಿಗರ್ಪಿಸದೆ ॥
ಮುಂಚೆ ಉಂಡು ಹೊರಗೆ ತಾ ಪ್ರ- ।
ಪಂಚಮಾಡುವವನ ಜನುಮ ॥ ೪ ॥

೧' ಪಿ. ಪ್ರತಿಯಿಂದ ತೆಗೆದುಕೊಂಡಿದೆ. ಅ (E, I) ಪ್ರತಿಯಲ್ಲಿ ಬೇರೆ ನುಡಿಗಳಿವೆ.
ಪಿ. ಸೂ: ನುಡಿ ೨. ೩. ೫ ರ ಕೊನೆಯ ಚರಣಗಳ ಪ್ರಾಸ ತಪ್ಪಿದೆ.

ಸಜ್ಜನಸಂಗ ಮಾಡದವನ ।
ದುರ್ಜನ ಸಂಗವ ಬಿಡದವನ
ಅರ್ಜುನಸಖ ಪುರಂದರ ।
ವಿಠಲನನ್ನು ಭಜಿಸದವನ ॥ ೫ ॥

೬೦

## ಉಗಾಭೋಗ

(೧)

[೧]ಪುಟ್ಟುವ ಭೀತಿ ಪೊಂದುವ ಭೀತಿ ।
ವಿಟ್ಠಲನಂಘ್ರಿಯ ನೆನೆಯದವರಿಗೆ ॥
ಪಾಪದ ಭೀತಿ, ನಿರಯದ ಭೀತಿ ಶ್ರೀ
ಗೋಪಾಲನ ದಾಸನಾಗದವರಿಗೆ ॥
ಕಾಲನ ಭೀತಿ ಕರ್ಮದ ಭೀತಿ ಶ್ರೀ- ।
ಲೋಲನ ಒಮ್ಮೆ ನೆನೆಯದವಗೆ ॥
ಅತಳದಲ್ಲಿರಿಸೊ, ಸುತಳದಲ್ಲಿರಿಸೊ ।
ತಳಾತಳ ಪಾತಾಳದಲ್ಲಿರಿಸೊ ॥
ಯೋನಿಯೊಳಿರಿಸೊ ಮತ್ತಾ ಪಿಯೋನಿಯಲ್ಲಿರಿಸೊ ।
ಎಲ್ಲಿರಿಸಿದರೂ ನಾ ಹೋಹನೇನಯ್ಯ ।
ಎಂತೆಂತು ನಡೆದು ನಡಸಿಕೊಂಬುವೆ ।
ಅಂತಂತು ನಡೆಯುವೆ ಶ್ರೀಪುರಂದರವಿಠಲ

(೨)

[೨]ಹರಿ ನಿನ್ನ ಭಕ್ತನೆನಿಸಿಕೊಂಡವ ಭಂಗವ ಪಡಲು ಬೇಕೇ ।
ದಿನ-ಪ್ರತಿದಿನದಲ್ಲಿ ಅನ್ನ ವಸ್ತ್ರ ಉದಕಗಳ ಕಾಣದಿರಬೇಕೆ ? ।
ಬೆನ್ನಟ್ಟಿ ರೋಗಗಳು ಹತ್ತಿರಬೇಕೆ ?
ತನ್ನವರ ಕೈಯಿಂದ ಛಿಹಿ ಎನಿಸಿಕೊಳಬೇಕೆ ? ।
ಎನ್ನ ಈ ಪರಿಯಲಿ ಮಾಡಿದ ಬಗೆಯೇನೊ ಪುರಂದರ
ವಿಠಲ

---

೧-೨. ಝ(೮-೧೦) ರಿಂದ ತೆಗೆದುಕೊಂಡಿದೆ.

# ೪ ನಾಮಸ್ಮರಣದರ್ಶನ

## ೬೧

ರಾಗ—ಆನಂದಭೈರವಿ ತಾಳ—ತ್ರಿಪುಟ

೧ಸುಮ್ಮನೆ ದೊರಕುವುದೇ ಶ್ರೀರಾಮನ ದಿವ್ಯನಾಮವು ।
ಜನ್ಮಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ ॥ ಪ ॥

ಕಂತುಪಿತನ ಮೂರುತಿಯು ತನ್ನಂತರಂಗದೊಳಿಟ್ಟು ।
ಚಿಂತೆ ಎಲ್ಲ ಬಿಟ್ಟು ನಿಶ್ಚಿಂತನಾದವಗಲ್ಲದೆ ॥ ೧ ॥

ಭಕ್ತಿರಸದಲಿ ತನ್ನ ಚಿತ್ತಪರವಶನಾಗಿ ।
೨ಅಚ್ಯುತನ ನಾಮವನು ಬಚ್ಚಿಟ್ಟುಕೊಂಡವಗಲ್ಲದೆ ॥ ೨ ॥

ತನ್ನೊಳಗೆ ಇದ್ದ ಮೂರುತಿಯು ಕಣ್ಣೊಳಗೆ ತಂದರೆ ।
ಆನಂದ ಪೂರ್ಣ ಪುರಂದರವಿಠಲನ ನೋಡಿದಗಲ್ಲದೆ ॥ ೩ ॥

## ೬೨

ರಾಗ—ಮುಖಾರಿ ತಾಳ—ಝಂಪೆ

೩ಇನ್ನಾದರೂ ಹರಿಯ ನೆನೆಯೊ ನೀ ಮನುಜಾ ।
ಮುನ್ನಾದ ದುಃಖಗಳು ನಿಜವಾಗಿ ತೊಲಗುವುವು ॥ ಪ

ಊರೂರ ನದಿಗಳಲಿ ಬಾರಿಬಾರಿಗೆ ಮುಳುಗಿ ।
ತೀರದಲಿ ಕುಳಿತು ನೀ ಪಣೆಗೆ ನಿತ್ಯ ॥
ನೀರಿನಲಿ ಮಟ್ಟಿಯನು ಕಲಸಿ ಬರೆಯುತ ಮೂಗು- ।
ಬೇರನ್ನು ಪಿಡಿದು ಮುಸುಕಿಕ್ಕಲೇನುಂಟು ॥ ೧ ॥

---

೧) ಇ. ಝ (೧) ಶ್ರೀ. ಇವುಗಳಲ್ಲಿ ಸಿಕ್ಕುತ್ತದೆ.

೨) ಇಲ್ಲಿ ಪ್ರಾಸತಪ್ಪಿದೆ.

೩) ಝ (೨) (೧/೧೦) ರ (೨) ಪ್ರತಿಗಳಿಂದ ಆರಿಸಿದೆ.

ನೂರಾರು ಕರ್ಮಂಗಳನ್ನು ಡಂಭಕೆ ಮಾಡಿ ।
ಆರಾರಿಗೋ ಹಣದ ದಾನಕೊಟ್ಟು ॥
ದಾರಿದ್ರ್ಯವನು ಪಡೆದು ತಿರಿದುಂಬುವುದಕೀಗ ।
ದಾರಿಯಾಯಿತೆ ಹೊರತು ಬೇರೆ ಫಲವುಂಟೇ ? ॥ ೨ ॥

ಕಾಡುದೈವಗಳನ್ನು ಚಿನ್ನ-ಬೆಳ್ಳಿಗಳಿಂದೆ ।
ಮಾಡಿಕೊಂಡವರ ಪೂಜೆಯನೆ ಮಾಡಿ ॥
ಕಾಡುಕಳ್ಳರು ಬಂದು ಅವುಗಳನು ಕೊಂಡೊಯ್ಯೆ ।
ಮಾಡಿಕೊಂಡಿರ್ದುದಕೆ ಬಾಯಬಡಕೊಳ್ಳುವೆ ॥ ೩ ॥

ಮಗನ ಮದುವೆಯು ಎಂದು ಸಾಲವನು ಮಾಡಿ ನೀ ।
ನುಗುಣೆಯೆನ್ನಿಸಿಕೊಳಲು ವ್ಯಯ ಮಾಡಿದೆ ॥
ಹಗರಣವ ಮಾಡಿಸಿದರೆ ಸಾಲಗಾರರು ಬಂದು ।
ಬಗೆಬಗೆಯೊಳವರ ಕಾಲ್ಗೆರಗಿ ಬಿದ್ದಿರುವೆ ॥ ೪ ॥

ಕೆಟ್ಟುವೀ ಕೆಲಸಗಳ ಮಾಡಿದರೆ ಫಲವೇನು ? ।
ತಟ್ಟನೇ ಶ್ರೀಹರಿಯ ಪದವ ನಂಬಿ ॥
ದಿಟ್ಟ ಶ್ರೀಪುರಂದರವಿಟ್ಠಲನೆ ಎಂದರೆ ॥
ಸುಟ್ಟು ಹೋಗುವುವಯ್ಯ ನಿನ್ನ ಕಷ್ಟಗಳು ॥ ೫ ॥

**೬೩**

ರಾಗ—ಕಲ್ಯಾಣಿ ತಾಳ—ಅಟ

[೧]ಸ್ಮರಣೆಯೊಂದೆ ಸಾಲದೆ—ಗೋವಿಂದನ ।
ಸ್ಮರಣೆಯೊಂದೆ ಸಾಲದೆ ? ॥ ಪ ॥
ಪರಿಪರಿ ಸಾಧನ ಭ್ರಾಂತಿಯ ಬಿಡಿಸುವ ।
ಪರಮಾತ್ಮನ ಪಾದ ನೆರೆನಂಬಿದವರಿಗೆ ॥ ಅ.ಪ ॥

೧) ಕ. ವಿ. ವಿ. ತಾಳೆಗರಿಯಿಂದ ತೆಗೆದುಕೊಂಡಿದೆ. (೧೭೫೦-ಸಂ. ೧೮೫೮)
ಆ (೧). ಅ. (೮). ಇ (೧೦) ಝ. ಶ್ರೀ. ಈ ಪ್ರತಿಗಳಲ್ಲಿ ನುಡಿಗಳು ಬೇರೆ ಬೇರೆ ಯಾಗಿವೆ.

ಕಡುಮುರ್ಖನಾದರೇನು—ದಾನ-ಧರ್ಮ- ।
ಕೊಡದಾತನಾದರೇನು ॥
ಬಡವನಾದರೇನು ವಿಜಾತಿಯಾದರೇನು ।
ಒಡನೆ ಪ್ರಹ್ಲಾದನುದ್ಧರಿಸಿದ ಶ್ರೀಹರಿಯು ॥ ೧ ॥

ಪಾತಕಿಯಾದರೇನು—ಸರ್ವಲೋಕ- ।
ಘಾತಕಿಯಾದರೇನು ॥
ಮಾತೆಯಂದದಿ ತನ್ನ ದಾಸರ ಸಲಹುವ ।
[1]ಚೇತನಾತ್ಮಕನ ಪಾದವ ನಂಬಿದವರಿಗೆ ॥ ೨ ॥

ಪಾತಕ ವೆಗ್ಗಳವೊ—ನಾಮವು ಪ್ರಾಯ- ।
ಶ್ಚಿತ್ತಕೆ ವೆಗ್ಗಳವೊ ॥
ಪಾತಕವೆನಗಿಲ್ಲ ಪ್ರಾಯಶ್ಚಿತ್ತ ಮುನ್ನಿಲ್ಲ ।
ಏತರ ಭಯವಯ್ಯ ಪುರಂದರವಿಠಲನ ॥ ೩ ॥

## ೩೪

ರಾಗ—ಮಧ್ಯಮಾವತಿ ತಾಳ—ಆದಿ

[2]ಹೇಗೆ ಶ್ರೀಹರಿ ದಯಮಾಡುವನೋ—ನಮಗೆ- ।
ಹೇಗೆ ಶ್ರೀಹರಿ ದಯಮಾಡುವನೊ ॥ ಪ ॥

ಯೋಗಿವರೋದಿತ ಭಾಗವತಾದಿ—ಸ- ।
ದಾಗಮಗಳನನುರಾಗದಲಿ ನೆನೆಯದಗೆ ॥ ೧ ॥

ಶಕ್ತಿಮಿರಿ ಗುರುಭಕ್ತಿಪೂರ್ವಕ ಹರಿ- ।
ಭಕ್ತಿ ಇಲ್ಲದ ಕುಯುಕ್ತಿವಂತರಿಗೆ ॥ ೨ ॥

ದಾಸದಾಸ ಎನ್ನೀಶಗೆ ಮೊರೆಯಿಡೆ ।
ಲೇಸು ಕೊಡುವ ನಮ್ಮ ಪುರಂದರವಿಠಲ ॥ ೩ ॥

---

೧) ಪಾ ತತ್ತ್ವಮಾನ ಹೃದಯನಾದ ಮನುಜಗೆ (ಆ-೧)
೨) ಏ ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

## ೬೫

ರಾಗ—ಕಲ್ಯಾಣಿ ತಾಳ—ರೂಪಕ

[೧]ಮೋಸ ಹೋದೆನಲ್ಲ–ವಿಠಲ–ಮೋಸ ಹೋದೆನಲ್ಲಾ ॥ ಪ ॥

ಆಸೆಬಿಟ್ಟು ಹಂಬಲಿಸಿ ।
ಹೇಸಿನರಕದೊಳಗೆ ಸಿಲುಕಿ ॥ ಅ. ಪ ॥

ಪುಷ್ಪ ಶ್ರೀತುಳಸಿಯನ್ನು ।
ಒಪ್ಪದಿಂದ ಮನೆಗೆ ತಂದು ॥
ಅಪ್ಪ ಕೃಷ್ಣನ ಪೂಜೆಯ ಮಾಡಿ–ಮೋ- ।
ಲಿಪ್ಪ ಲೋಕವ ಸೂರೆಗೊಳದೆ ॥ ೧ ॥

ಕಾಯದಾಸೆಗೆ ಕಂಡುದ ಬಯಸಿ ।
ನಾಯಿಯಂತೆ ಮನೆಮನೆ ತಿರುಗಿ ॥
ಮಾಯಾಪಾಶದೊಳಗೆ ಸಿಲುಕಿ ।
ಜೀಯ ನಿನ್ನನು ಧ್ಯಾನಿಸಲರಿಯದೆ ॥ ೨ ॥

ಸತಿಸುತರು—ಪಿತೃ-ಬಾಂಧವರು ।
ಪಥವ ತೋರಿಸಬಲ್ಲರೆ ಇವರು ॥
ಗತಿ ನೀನೇ ಪುರಂದರವಿಠಲ ।
ಹಿತವ ತಾಯಿ ತಂದೆ ನೀನು ॥ ೩ ॥

## ೬೬

ರಾಗ—ಮಧ್ಯಮಾವತಿ ತಾಳ—ಏಕ

[೨]ಬಡವಾ ನಿನಗೊಬ್ಬರ ಗೊಡವೆ ಏತಕೊ ।
ಒಡವೆ ವಸ್ತು ತಾಯಿತಂದೆ ಒಡೆಯ ಕೃಷ್ಣನೆಂದು
ನಂಬೋ ॥ ಪ ॥

---

೧) ಚ. ಪ್ರತಿಯಲ್ಲಿ ಮಾತ್ರ ಈ ಹಾಡು ಸಿಕ್ಕುತ್ತಿದೆ.

೨) ಆ (II), ಖ ೧. ಛ. ಝ (೫/೧೦). ಂ (೨೧), ಈ ಪ್ರತಿಗಳಲ್ಲಿ ದೊರಕುತ್ತದೆ.

ಒಪ್ಪತ್ತು ಭಿಕ್ಷವ ಬೇಡು, ಒಬ್ಬರಿಗೆ ಒಂದಿಷ್ಟು ನೀಡು ।
ಅಪ್ಪನಾದಚ್ಯುತನ ನೋಡು, ಆನಂದದಲಿ ಪೂಜೆಮಾಡು ॥ ೧ ॥

ಮಡದಿ-ಮಕ್ಕಳು ಹೆದರಿಸಿದರೆ ಮುಂಕೊಂಡು ನೀ ಹೋದಿಯೆ
ಕಾಣೋ ।
ಅಡಕೆಯ ಹೋಳಿಗೆ ಹೋದ ನಾಚಿಕೆ ಆನೆಯ ಕೊಟ್ಟರೆ
ಬಾರದೊ ॥ ೨ ॥

ಬಲ್ಲೆ ನಿನ್ನ ಎಲ್ಲ ಮಾತು ಕ್ಷುಲ್ಲಕತನದ ಭ್ರಾಂತು ।
ಎಲ್ಲರ ಮನೆಯ ದೋಸೆ ತೂತು ಅಲ್ಲಪ್ಪೇನು ನೋಡಿಕೊ
ಈ ಮಾತು ॥ ೩ ॥

ವೇದ-ತರ್ಕವೆಲ್ಲವು ಭ್ರಾಂತಿ—ಆದಿದೇವನ ಕಾಣದನಕ ।
ಬೂದಿಮುಚ್ಚಿದ ಕೆಂಡದಂತೆ ಬುದ್ಧಿಯುಳ್ಳಿರು ನಾ ಹೇಳೇನಂತೆ ॥ ೪ ॥

ದೊರೆತನವು ಏನು ಹೆಚ್ಚು—ಸಿರಿಯು ಏನು ಪಾಪನ ಮೆಚ್ಚು ।
ವರದ ಪುರಂದರವಿಟ್ಠಲರಾಯನು ಪರಿಪಾಲಿಪನೆಂದು ನಚ್ಚು ॥ ೫ ॥

## ೬೭

ರಾಗ—ಕಾಂಬೋದಿ ತಾಳ—ಛಾಪುತಾಳ

[೧]ಏನೆಂದರೇನು ನೀನೆನ್ನ ಕಾಯೊ ।
ನೀನೆ ನನಗೆಂದೆಂದು ತಂದೆ-ತಾಯೊ ॥ ಪ ॥

ಆಪತ್ತುಕಾಲಕ್ಕೆ ಅನಂತ ನೀ ಕಾಯೋ ।
ತಾಪಜ್ವರಕೆ ತ್ರಿವಿಕ್ರಮನೆ ಕಾಯೊ ॥
ಭೂಪತಿಯು ಮುನಿದರೆ ಶ್ರೀಪತಿಯು ನೀ ಕಾಯೊ ।
ವ್ಯಾಪಾರಧರ್ಮವನು ಯದುಪತಿಯೆ ನೀ ಕಾಯೊ ॥ ೧ ॥

---

೧) ೩ (೧೦) ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

ಸರುಪ ಸುತ್ತಿದರೆ ಸರ್ವೋತ್ತಮನೆ ನೀ ಕಾಯೊ ।
ಪರಿಪರಿಯ ದೋಷಗಳ ಪದ್ಮನಾಭ ಕಾಯೊ ॥
ಹರಕು ಸಂಸಾರವನು ಹರಿ ಬಂದು ನೀ ಕಾಯೊ ।
ದೊರಕದೀ ವೇಳೆಯಲಿ ದೊರೆ ನೀನೆ ಕಾಯೊ... ॥ ೨ ॥

ನರರು ಮುನಿದಿರಲು ನಾರಾಯಣನೆ ನೀ ಕಾಯೊ ।
ಪುರ ಬೆನ್ನುಗೊಳಲು ಪುರುಷೋತ್ತಮನೆ ಕಾಯೊ ॥
ಅರಿಯು ಅಡ್ಡಾದರೆ ಅಚ್ಯುತನೆ ನೀ ಕಾಯೊ ।
ಕರಕರೆಯ ಸಂಸಾರ ಕೃಷ್ಣ ನೀ ಕಾಯೊ.... ॥ ೩ ॥

ಮದಮತ್ಸರವನು ಮಧುಸೂದನನೆ ನೀ ಕಾಯೊ ।
ಮದಬಂದ ವೇಳೆಯಲಿ ಮಾಧವನೆ ಕಾಯೊ ॥
ಹೃದಯದಾ ಕಪಟವ ಹೃಷೀಕೇಶ ನೀ ಕಾಯೊ ॥
ಒದಗಿದ ಕಲ್ಮಷವ ವಾಸುದೇವ ಕಾಯೊ.... ॥ ೪ ॥

ಕಾರ್ಪಣ್ಯ ದೋಷಗಳ ಸರ್ವಶಯನನೆ ಕಾಯೊ ।
ಒಪ್ಪುವ ಪ್ರಕಾಶವ ಕೇಶವನೆ ಕಾಯೊ ॥
ಅಪ್ಪ ತಿರುಮಲರಾಯ ಪುರಂದರವಿಠಲನೆ ।
ಒಪ್ಪಿ ಅನವರತ ನಿಶ್ಚಿಂತೆಯನು ಕಾಯೊ .. ॥ ೫ ॥

## ೬೮

ರಾಗ—ರೇಗುಪ್ತಿ ತಾಳ—ಅಟ

[೧]ಏಕೆ ಮೈಮರೆದೆ ನೀನು—ಜೀವನವೇ- ।
ಏಕೆ ಮೈಮರೆದೆ ನೀನು ॥ ಪ ॥
ಏಕೆ ಮೈಮರೆದೆ ನೀ—ಲೋಕಾರಾಧ್ಯನ ಪಾದ ।
ಬೇಕೆಂದು ಭಜಿಸು ಕಾಣೋ—ಜೀವನವೇ ॥ ಅ.ಪ. ॥

---

೧) ಇ (೧೦) ಛ ಪ್ರತಿಗಳಲ್ಲಿಯಷ್ಟೇ ಸಿಕ್ಕುತ್ತಿದೆ,

ಮದ್ದಾನೆಗಳೆಂಟು ಸೊಕ್ಕಿನಿಂ ಬರುವಾಗ ।
ಎದ್ದು ಕುಳ್ಳಿರಬಾರದೆ—ಜೀವನವೇ ॥
ಅಧ್ಯಾತ್ಮಕಾ ಹರಿನಾಮವ ಶ್ರುತಿಮಾಡಿ ।
ಒದ್ದು ಬೀಸಾಡು ಕಾಣೊ—ಜೀವನವೇ ॥ ೧ ॥

ಕಂದರ್ಪನೆಂಬವ ಕಾದುತ ಬರುವಾಗ ।
ನಿಂದಿಸುತಿರಬಾರದೆ—ಜೀವನವೇ ॥
ಒಂದೇ ಮನಸು ಎಂಬ ವಜ್ರಾಯುಧವ ಪಿಡಿದು ।
ಕೊಂದು ಬೀಸಾಡು ಕಾಣೋ—ಜೀವನವೇ ॥ ೨ ॥

ವಿಷಯದಿ ಸುಖಕಾಣೆ ಪಶುಜನರೊಳು ದೇಹ ।
ಹಸನುಗಳೆಯಲು ಬೇಡವೊ—ಜೀವನವೇ ॥
ಬಿಸಜಾಕ್ಷ ಪುರಂದರವಿಠಲನೊಲಿಯೆ ಸುಖ- ।
ರಸದಿ ಲೋಲಾಡು ಕಾಣೋ—ಜೀವನವೇ ॥ ೩ ॥

## ೩೯

ರಾಗ—ಮಧ್ಯಮಾವತಿ ತಾಳ—ಆದಿ

[೧]ಕರ್ಮಬಂಧನ ಛೇದನ—ಶ್ರೀ- ।
ರಾಮನ ನಾಮವ ನೆನೆ ಮನವೆ ॥ ಪ ॥

ಅರ್ಚಿಸಲರಿಯೆನು ಪೂಜಿಸಲರಿಯೆನು ।
ಮೆಚ್ಚಿಸಲರಿಯೆನೆಂದೆನಬೇಡ ॥
ಅಚ್ಯುತಾನಂತ ಗೋವಿಂದನ ನಾಮವ ।
ಇಚ್ಛೆ ಬಂದಾಗಲೆ ನೆನೆ ಮನವೆ ॥ ೧ ॥

ಸ್ನಾನಸವನರಿಯೆನು ಧ್ಯಾನಸವನರಿಯೆನು ।
ಮನಸು ಅರಿಯೆನೆಂದೆನಬೇಡ ॥

೧) ಅ (೧) ಪ್ರತಿಯಲ್ಲಿ ಮಾತ್ರ ಈ ಹಾಡು ಇದೆ.

ಜಾನಕಿರಮಣನ ದಶರಥನಂದನ ।
೧ದಾನವನಾಶನ ನೆನೆ ಮನವೆ ॥ ೨ ॥

ಮಂತ್ರವನರಿಯೆನು ತಂತ್ರವನರಿಯೆನು ।
೨ಎಂತು ಅರಿಯೆನೆಂದೆನಬೇಡ ॥
ಸಂತತಾನಂತ ಗೋವಿಂದನ ನಾಮವ ।
ಅಂತರಂಗದೊಳು ನೆನೆ ಮನವೆ ॥ ೩ ॥

ಜಪವ ನಾನರಿಯೆನು ತಪವ ನಾನರಿಯೆನು ।
ಉಪವಾಸವರಿಯೆನೆಂದೆನಬೇಡ ॥
ಅಪರಿಮಿತ ಗುಣಗಳ ಅನಂತಮಹಿಮನ ।
ಕೃಪೆಯ ಸಮುದ್ರನ ನೆನೆ ಮನವೆ ॥ ೪ ॥

ಕಲಿಯುಗದೊಳು ಹರಿನಾಮವ ನೆನೆದರೆ ।
ಕುಲಕೋಟಿಗಳುದ್ಧರಿಸುವವು ॥
ಸುಲಲಿತ ಭಕ್ತಿಗೆ ಸುಲಭನೆಂದೆನಿಸುವ ।
ಜಲರುಹನಾಭನ ನೆನೆ ಮನವೆ ॥ ೫ ॥

ತಾಪತ್ರಯಗಳ ತಪ್ಪಿಸಿ ಸುಜನರ ।
ಪಾಪಗಳೆಲ್ಲವ ಪರಿಹರಿಸುವುದು ॥
ಶ್ರೀಪತಿ ಸದಮಲಧ್ಯಾನಗೋಚರನ ।
ಗೋಪೀನಾಥನ ನೆನೆ ಮನವೆ ॥ ೬ ॥

ವರದ ವೀರನಾರಾಯಣ ಸ್ವಾಮಿಯು ।
ಪರಮಪಾವನನು ಹಿತನಾಗಿ ॥
ಹರಿಯುದ ಇಹಪರ ಕೊಡುವ ಸುಖಂಗಳ ।
ಪುರಂದರವಿಠಲನ ನೆನೆ ಮನವೆ ॥ ೭ ॥

---

೧) ಗಾನವಿಲೋಲನ ನೆನೆ ಮನವೆ ॥ (ಅ ೮)
೨) ಎಂತು ಭಜಿಪೆನೆಂದೆನಬೇಡ (ಅ. ೮, ಇ ೧೦)
ಇ (೧೦) ಪ್ರತಿಯಲ್ಲಿ ೫ ನುಡಿಗಳಿವೆ.

## ೭೦

ರಾಗ—ಪೂರ್ವಕಲ್ಯಾಣಿ ತಾಳ—ಅಟ

[೧]ತೇಲಿಸೊ ಇಲ್ಲ ಮುಳುಗಿಸೊ—ನಿನ್ನ- ।
ಪಾಲಿಗೆ ಬಿದ್ದೆನೊ ಪರಮ ದಯಾಳೊ ॥ ಪ ॥
ಸತಿ-ಸುತ-ಧನದಾಶೆ ಎಂತೆಂಬ ಮೋಹದಿ ।
ಹಿತದಿಂದ ಅತಿನೊಂದು ಬಳಲಿದೆನೊ ॥
ಗತಿಯನೀಪರ ಕಾಣೆ ಮೊರೆಯ ಲಾಲಿಸೊ ಲಕ್ಷ್ಮೀ- ।
ಪತಿ ನಿನ್ನ ಚರಣದ ಸ್ಮರಣೆಯಿತ್ತೆನ್ನ ॥ ೧ ॥
ಜರೆ ರೋಗ ದಾರಿದ್ರ್ಯ ಕಶ್ಮಲವೆಂತೆಂಬ ।
ಶರಧಿಯೊಳಗೆ ಬಿದ್ದು ಮುಳುಗಿದೆನೊ ॥
ಸ್ಥಿರವಲ್ಲ ಈ ದೇಹ ನೆರೆನಂಬಿದೆನು ನಿನ್ನ ।
ಕರುಣಾಭಯವನಿತ್ತು ಪಾಲಿಸೊ ಹರಿಯೆ ॥ ೨ ॥
ದೋಷವುಳ್ಳವ ನಾನು ಭಾಷೆಯುಳ್ಳವ ನೀನು ।
ಮೋಸಹೋದೆನೊ ಭಕ್ತಿರಸವ ಬಿಟ್ಟು ॥
ಶೇಷಶಯನ ಶ್ರೀಪುರಂದರವಿಠಲನೆ ।
ದಾಸರ ಸಂಗವಿತ್ತು ಪಾಲಿಸೊ ಹರಿಯೆ ॥ ೩ ॥

## ೭೧

## ಸುಳಾದಿ

ಧ್ರುವತಾಳ

[೨]ನರಲೋಕದ ಸುಖ ಹೇಯುವೆಂಬರು ಗಡ ।
ಸುರಲೋಕದ ಸುಖ ಹೇಯುವೆಂಬರು ಗಡ ।
ಅತಲಲೋಕದ ಸಿರಿ ಹೇಯುವೆಂಬರು ಗಡ ।
ಸತ್ಯಲೋಕದ ಪದವಿ ಹೇಯುವಂಬರು ಗಡ ।
ಮುಕುತಿ-ಪಥವನದು ಹೇಯುವೆಂಬರು ಗಡ ।

---

೧) ಆ (ಬಿಡಿ ೫) ಇ. ಎ. ಮತ್ತು ಓ. ಪ್ರತಿಗಳನ್ನು ಹೊಂದಿಸಿ ಬರೆದಿದೆ
೨) ಆ (II) ಇ (ಪುರಂದರದಾಸರ ಮುದ್ರಿತ ಸುಳಾದಿ) ಪ್ರತಿಗಳಿಂದ [illegible] ಕೊಂಡಿದೆ.

ಪುರಂದರವಿಠಲನ ಸಿರಿಪಾದಪದುಮದಲುಂಡುಂಡು ।
ಬದುಕುವ ಮಧುಕರರು ಆವಾಗಲು

ಮಟ್ಟೈತಾಳ

ಆಶಾಪಾಶಗಳುಳ್ಳ ಆರೋಹಣ ಭಕುತರು— ।
ಕಾಸುವೀಸಕ್ಕಾಗಿ ಕಳ್ಳಭಕುತರಾವು !
ದೇಶವ ತಿರುಗುವ ಕೀಳು ಭಕುತರಾವು ।
ಶ್ರೀಶ ಮುಕುಂದನಲಿ ಭಕುತಿರಹಿತರಾವು ।
ಪುರಂದರವಿಠಲನ ಭಕುತರೆತ್ತ ನಾವೆತ್ತ ಬಣಗುಗಳು !

ತ್ರಿವಿಡಿತಾಳ

ಭಾಗವತನೆಂದು ಕರಸಿಕೊಂಬುದೇ ।
ಯೋಗಯೋಗ್ಯವೆ ಜಗದೊಳಗೆಲ್ಲ ।
ಇದು ನಗೆಗೇಡಲ್ಲದೆ ಯೋಗಯೋಗ್ಯವೆ ನಮ್ಮ- ।
ಪುರಂದರವಿಠಲನ ದಾಸಾನುದಾಸರ ದಾಸನೆನಿಸದಲೆ ।
ಭಾಗವತನೆಂದು ಕರಸಿಕೊಂಬುದು ?

ಅಟತಾಳ

ಎನಗೆ ಶ್ರೀಹರಿಯಲ್ಲಿ ಭಕುತಿ ಇಲ್ಲವು
ಎಂಬುದಕೆ ಇದೆ ಕುರುಹು ।
ವನಿತೆ ಸುತರ ಭ್ರಾಂತಿ ಇದೆ ಕುರುಹು ।
ಪುರಂದರವಿಠಲನ ದಾಸನೆನಿಸಿಕೊಂಡು
ನರರಿಗಾಳ್ಪರಿವುದೆ ಜಗದೊಳು ಇದೆ ಕುರುಹು

ಆದಿತಾಳ

ಬಾ ಎಂದೆನೆ ಹೋ ಎಂದೆನೆ ಅಯ್ಯಾ ಸಹಾಯಾ
ಜೀಯಾ ಅವಧಾರು ಎಂದೆನೆ ।
ರಾಯ ರಾಯ ರಾಯ ಪುರಂದರವಿಠಲನೆ
ಬಾ ಎಂದೆನೆ ಹೋ ಎಂದೆನೆ ?

ಜತೆ

ಕೊಂಚೆಯೂರ ಚೆನ್ನ ಕೈಯಲ್ಲಿ ಕಾಳಂಜಿ ।
ಪಂಚಬಾಣನ ಪಿತ ಪುರಂದರವಿಠಲ

## ೪ ಭಕ್ತಿಭಾವ ವಿಕಾಸ



೧ ನಾಮಸ್ಮರಣ ನಿಷ್ಠೆ

೨ ಪತಿತಪಾವನ ದೇವ

೩ ಭಕ್ತಿವಿಚಾರ ವಿವೇಕ

# ೧ ನಾಮಸ್ಮರಣನಿಷ್ಠೆ

**೭೨**

## ಸುಳಾದಿ

ಧ್ರುವತಾಳ

[೧]ಮನವೆ ಆಲಿಸಿಕೇಳೊ, ಬಿನ್ನಯಿಸುವೆನು ನಿನಗೆ ।
ಚಿನುಮಯಮೂರುತಿಯ ಗುಣ ರೂಪ ನಾಮ ಕೀ- ।
ರ್ತನೆ ಮಾಳ್ಪ ಬಗೆಯ ನಿನಗೆ ತಿಳಿಸುವೆನು ।
ಘನವಾದ ಸುಸಾಧನವೆಂದು ತ್ರಿಕರಣಪೂರ್ವಕವಾಗಿ ।
ಘನಮಹಿಮ ನಾರಾಯಣನ ಅಚಿಂತ್ಯಾದ್ಭುತ ಶಕ್ತಿ
ಅನುಭವಕೆ ತಂದುಕೊಂಡು ಸುಖಿಸುವುದು ॥
ಮನವೊದಲಾದ ಸರ್ವ ಇಂದ್ರಿಯಂಗಳ ಅ- ।
ವನ ಪಾದದಲ್ಲಿ ಇಟ್ಟು ಕೀರ್ತನೆ ಗೈಯೊ ।
ನಿನಗಿದೆ ಮುಖ್ಯ ಗತಿಸಾಧನವೆಂದು ಸಾರಿದೆ ।
ಅನುಮಾನ ಮಾಡಸಲ್ಲ ಎಂದೆಂದಿಗೂ ॥
ಬಿನುಗುದೈವಂಗಳ ಕಾಲಿಲೊದೆದು ಮಧ್ವ- ।
ಮುನಿಮತದಲಿ ದೀಕ್ಷಾಬದ್ಧನಾಗೊ ।
ಕುನರರ ನೆರಹಿಕೊಂಡು ಕುಚೇಷ್ಟೆ ಕಥೆಯ ಪೇಳಿ ।
ಘನ ಅಂಧಂತಮಸಿನೊಳು ಬೀಳದಿರು ॥
ವನಜಭವಾಂಡದೊಳು ಹರಿದಾಸರ ದೀಕ್ಷೆ
ಬಲು ಕಷ್ಟಕಾಣೊ ।
ಮನುಜಾಧಮರಿಗೆ ಅದು ಸುಲಭವಲ್ಲವು ಕೇಳು ।
ಇನಿತು ಇದರೊಳು ತ್ರಿವಿಧ ಬಗೆಯುಂಟು ।

---

೧) ತ (೭) ಪ್ರತಿಯಲ್ಲಿ ಮಾತ್ರ ಸಿಕ್ಕುತ್ತಿದೆ.

ಗುಣವಂತನಾಗಿ ನೀನು ಕಾಲಕ್ರಮಣ ಮಾಡೋ ।
ಅನುದಿನದಲಿ ಹರಿಸೇವೆಗೆ ವಿಮುಖನಾಗದೆ ।
ಮನಮುಟ್ಟಿ ಒಬ್ಬನೆ ಏಕಾಂತದಲಿ ಕುಳಿತು ।
ತನುರೋಮಗಳು ಉಬ್ಬಿ ಆನಂದಾಶ್ರುಗಳಿಂದ
ಗಾನವ ಮಾಡೊ ॥
ಘನಜ್ಞಾನ ಪುಟ್ಟುವುದು ಅನಿಮಿಷರೀಶನ
ದಯಕೆ ಪಾತ್ರನಪ್ಪೆ ॥
ದಿನದಿನಕೆ ಜ್ಞಾನವೆಗ್ಗಳವಹುದು ।
ನಿನಗೊಂದೆ ಪೇಳಿದೆ ಶುದ್ಧಸತ್ತ್ವದಾಶೆ- ।
ಗುಣವನು ಮನಸಿಗೆ ತಂದುಕೊಂಡು ನೀ ।
ಅನುಮಾನಬಿಟ್ಟು ನಿಶ್ಚಯವಾಗಿ ನಂಬೊ ಹರಿಯ ।
ಗುಣಗಣಾಂಬುಧಿ ನಮ್ಮ ಪುರಂದರವಿಠಲನು
ಅನುಸಾರಿಯಾಗಿ ನಿನ್ನ ಹಿಂದೆ ಮುಂದಿಹ ಕಾಣೊ ॥ ೧ ॥

ಮಟ್ಟೆತಾಳ

ಉದಯಕಾಲದಲೆದ್ದು ಮುದದಿಂದ ಹರಿನಾಮ ।
ಒದಗಿ ಆರತನಾಗಿ ವದನದಿ ಕೊಂಡಾಡಿ ।
ವಿಧಿಪೂರ್ವಕ ಸ್ನಾನವ ಮಾಡಿ ಕರ್ಮವ ಮುಗಿಸಿ ನಿತ್ಯ ।
ಬುಧರಲ್ಲಿಗೆ ಪೋಗಿ ಸತ್ಕಥಾಶ್ರವಣವನು ।
ಹೃದಯದೊಳಗೆ ನಿಲಿಸಿ ಉದರಕೋಸುಗವಾಗಿ ।
ಸಾಧುಗಳ ಮನೆಯಲಿ ಶುದ್ಧವೃತ್ತಿಯ ಮಾಡಿ ।
ಇದ್ದನಿತರೊಳು ಸಾಕ್ಷೀಭೂತದಿಂದ ಎದ್ದು ।
ಸತಿಸುತರೊಡನೆ ಮಮತಾರಹಿತನಾಗಿ ಇದ್ದು ।
ಸತುಕಾಲವನು ಕಳೆಯಬೇಕು ಹೀಗೆ ಪ- ।
ದ್ಧತಿ ತಪ್ಪದಂತೆ ಧರೆಯೊಳು ಸತತ ಚರಿಸಲು ।
ಮುದ್ದು-ಮೋಹನ ರಂಗ ಪುರಂದರವಿಠ್ಠಲನ ।
ಗದ್ದುಗೆ ಬಳಿಯಲಿರುವ ಮುದ್ದುದಾಸನು ಒಪ್ಪುವನು ॥ ೨ ॥

ತ್ರಿವಿಡಿತಾಳ

ಯಾಮ ರಾತ್ರಿಯೊಳಗೆ ನೀ ಸತ್ಕರ್ಮದ ।
ನೇಮವ ಮುಗಿಸಿ ಬಲು ಭಕುತಿಯಿಂದ ।
ಶ್ರೀಮುಕುಂದನಿಗೆ ಅರ್ಪಣವನು ಮಾಡಿ ।
ವಾಮಭಾಗದಿ ತನ್ನ ಸತಿಯಿಂದ ಒಡಗೂಡಿ ।
ಶ್ರೀಮನೋಹರನ ಸ್ತುತಿಸಿಕೊಳುತಲಿ ।
ಪ್ರೇಮದಿಂದಲಿ ಕಳೆದು ನಿತ್ಯದಲಿ ।
ಕಾಮಿನಿಯಳ ಬಿಟ್ಟು ಪೃಥಕುಶಯನನಾಗೆ ।
ಭೂಮಿಯೊಳಗೆ ಅವನೇ ಪಾವನನು ॥
ಯಾಮವು ಮೀರಿದ ಮೇಲೆ ಮಾಡಿದ ಪುಣ್ಯ ।
ಆ ಮಹಾದೈತ್ಯರು ನೆಳೆದುಕೊಂಬರು ಕಾಣೊ- ।
ಮಾಮನೋಹರನ ದಿನದಲ್ಲಿ ಮಾತ್ರ ಅವರ ।
ಸ್ವಾಮಿತ್ವ ನಡೆಪ್ಪದಿಲ್ಲ ಹರಿ ಆಜ್ಞೆಯಲಿ ।
ಭೂಮಿಜಾಪತಿ ತನ್ನ ಚಕ್ರವ ತಿರುಗಿಸುವ ।
ಕಾಮುಕ ದೈತ್ಯರ ಅಳಿವುದಕೆ ।
ಪಾಮರ ಮನುಜನು ದಾನವೇಷವ ಧರಿಸಿ ।
ನೇಮನಿತ್ಯಗಳೆಲ್ಲ ಲೋಪವಿಡಿಸಿ ।
ಕಾಮಾಚಾರಿಗಳಾಗಿ ಕಂಡಲ್ಲಿ ಸಂಚರಿಸಿ ।
ಮಾಮನೋಹರನ [ಸ್ತುತಿ] ಪೇಳಿದರೇನು ।
ತಾಮಸ ದಾಸನೆಂದು ತಿಳಿಯೊ ಈಗ ಘೋರ- !
ತಾಮಸ ಅಹೋರಾತ್ರು ಅವರಿಗೆ ಸಂದೇಹವಿಲ್ಲ ।
ಈ ಮಹಿಯೊಳು ಮೃಷ್ಟಾನ್ನ ಭೋಜನ ವಸನ ದಿಂ ।
ದೇ ಮಹಾ ಫಲ ಬಂದು ಹಿಗ್ಗಿಕೊಳ್ಳುವನೈಯ ।
ಕಾಮಿತಫಲ ದೇವ ಅಂಥಾದ್ದೆ ಆವನಿಗೆ ।
ನೇಮಿಸಿ ಇಪ್ಪನು ಜೀವನ ಯೋಗ್ಯತೆಯಂತೆ ।
ಸ್ವಾಮಿ ತನ್ನ ನಿಜದಾಸರೆಂಬವರಿಗೆ ।
ನಾಮಸುಧೆಯ ಉಣಿಸಿ ಸಲುಹುತಿಪ್ಪ ।

ಈ ಮಹಾಭಾಗ್ಯಕೆ ಎಣೆಗಾಣೆ ಎಣೆಗಾಣೆ ।
ಭ್ರಾಮಕನಾಗಿ ನೀನು ಕೆಡಬೇಡವೊ ।
ಕಾಮಜನಕ ನಮ್ಮ ಪುರಂದರವಿಠಲನ ।
ಸುಷುಮ್ನವೆಂತೆಂಬ ಧಾಮದೊಳಗೆ ನಿತ್ಯ ।
ಪೂಜೆ ಮಾಡಿ ನಲಿದಾಡೊ ॥ ೩ ॥

ಅಟತಾಳ

ನಿರುಪಾಧಿಕವಾಗಿ ಹರಿಸೇವೆ ಮಾಳ್ಪುದಕೆ ।
ನರರ ನಿರೀಕ್ಷಿಸಿಕೊಂಡು ಕುಳ್ಳಿರುವ—ಪಾ- ।
ಮರ ಹರಿದಾಸನು ಅವನಲ್ಲ ।
ನರವಾನರ ಕಾಣೊ ಪರಮ ಭಕುತಿಯಿಂದ ।
ನರಹರಿ ಚರಿತೆಯ ವರಸುಧಾರಸ ಸುಖ ।
ಸುರಿಯಬೇಕೊ ತನ್ನೊಳು ತಾನೆ ಗುಪ್ತದಿ ।
ಇರಬೇಕು ತನ್ನ ಸ್ವರೂಪ ತೋರಗೊಡದೆ ।
ದುರುಳಜನಕೆ ದುರಾಚಾರಿಯೆಂಬ ಹಾಗಾ- ।
ಚರಿಸಬೇಕು ಅವರ ಪೋಗಾಡುವಂದದಲಿ ।
ಅರಜಾಣನಾದವ ಹಗಲು ಇರುಳು ತಾನು ।
ಹರಿದಾಸರ ಚರಣರಜವನು ಧರಿಸುವ ।
ಶಿರಬಾಗಿ ಪರಮಯೋಗ್ಯನಾಗಿ ಭಕುತಿ ಕೈಕೊಂಬನು ।
ವರ ಕಲಿಯುಗದಲ್ಲೀ ಥವರೇ ದುರ್ಲಭರು ।
ಕರುಣಾಕರ ಸಿರಿಪುರಂದರವಿಠಲಗೆ
ಪರಮಪ್ರಿಯರಿವರೆ ಹರಿದಾಸರು ಕಾಣೊ ॥ ೪ ॥

ಆದಿತಾಳ

ಒಂದು ಪಾಡುತ ಅದನು ಹಿಂದುಗಳೆದು ಮ- ।
ತ್ತೊಂದು ಪಾಡಲು ನೊಂದುಕೊಂಬರು ವರ್ಣಾಭಿಮಾನಿಗಳು ।
ಸಂದೇಹಬಡಲ್ಯಾಕೆ ಹರಿದಾಸನಿವ ಕಾಣೊ ।
ಒಂದು ಎರಡು ಸ್ಥಳದಿಂದ ತಿರುಗಿ ತಿರುಗಿ ।

ಬಂದು ಪುಟ್ಟುವನೊ ನಾನಾ ಬಗೆಯ ಸುಖ ।
ಇಂದಿರೇಶ ಇವಗೆ ಇದೆ ಕ್ಲಪ್ತ ಮಾಡಿಪ್ಪ ।
ಮಂದಮಾನವ ಕೇಳೊ ಮರುಳನಾಗಿ ನೀನು ನಾ- ।
ನೆಂದ ವಚನಗಳ ಮನಕೆ ತಾರದೆ ನಮ್ಮ ।
ಕಂದರ್ಪಜನಕಗೆ ದೂರನಾದೆ ಕಾಣೊ ।
ವಂದಿಸಿ ನಾ ನಿನಗೆ ಬೇಡಿಕೊಂಬೆನು ಹೀಗೆ ।
ಮಂದರಧರ ಸಿರಿ ಪುರಂದರವಿಠಲನ ।
ಪೊಂದಿ ಸಂಸಾರದಿಂದ ಮುಕುತನಾಗೊ ॥ ೫ ॥

ಜತೆ

ಜ್ಞಾನ-ಭಕುತಿ-ವೈರಾಗ್ಯ ಭಾಗ್ಯವನ್ನು
ನೀನೆ ಪಡೆಯೊ ನಮ್ಮ ಪುರಂದರವಿಠಲನಿಂದ ॥ ೬ ॥

## ೭೩

ರಾಗ—ಕೇದಾರಗೌಳ ತಾಳ—ರೂಪಕ

[1]ಕೊಡು ಕಂಡೆಯಾ ಹರಿಯೆ—ನಿನ್ನ ನಾಮ- ।
ಕೊಡು ಕಂಡೆಯಾ ಹರಿಯೆ ॥ ಪ ॥

ಬಡವ ನಾನೆಂದು ಕಾಡಲಿಲ್ಲ ಹರಿಯೆ ॥ ಅ ಪ ॥

ಒಡಲು ತುಂಬದು ಎಂದು ಬಳಲಿನೆ ಬರಲಿಲ್ಲ ।
ಸಡಗರದಿಂದಾ ಭಾಗ್ಯ ಬೇಡಲಿಲ್ಲ ॥
ಮಡದಿ-ಮಕ್ಕಳಿಗಾಗಿ ಕಡು ಮೋಹವೆನಗಿಲ್ಲ ।
ಬಿಡದೆ ನಾಮಸ್ಮರಣೆ ಕೊಡು ಒಂದೇ ಸಾಕೊ ॥ ೧ ॥

ಸ್ನಾನ-ಮೌನ ಜಪ-ತಪಗಳು ಎನಗಿಲ್ಲ ।
ನಾನಾಯೋನಿಗಳಲ್ಲಿ ಬಳಲಿ ಬಂದೆ ॥
ದೀನರಕ್ಷಕ ನೀನೆ ದಯದಿಂದಲೆನಗಿನ್ನು ।
ಧ್ಯಾನಸುಧೆಯನಿತ್ತು ಸಲಹಯ್ಯ ಹರಿಯೆ ॥ ೨ ॥

---

೧) ಆ (I) ಪ್ರತಿಯಿಂದ ತೆಗೆದುಕೊಂಡಿದೆ.

ಬಲೆಗೆ ಸಿಲುಕಿದ ಮೃಗದಂತೆ ಬಾಯ್ಬಿಡುತಲಿ ।
ಅಲಸಿ ಕೋಟಲೆಯು ಸಂಸಾರದಿಂದ ।
ತಲೆಹುಳಿತ ನಾಯಂತೆ ಬಯಲಾಸೆಗೆ ಸಿಲುಕಿದೆ ।
ಸಲಹೊ ದೇವರ ದೇವ ಪುರಂದರವಿಠಲ ॥ ೩ ॥

೭೪

ರಾಗ—ಕೇದಾರಗೌಳ ತಾಳ—ಅಟ

[೧]ಅಂತಕನ ದೂತರಿಗೆ ಕೃಪೆಯಿಲ್ಲವದರಿಂದ ।
ಚಿಂತೆಯನು ಬಿಟ್ಟು ಶ್ರೀಹರಿಯ ನೆನೆ ಮನವೆ ॥ ಪ ॥

ದಿವರಾತ್ರಿಯೆನ್ನದೇ ತಿರುಗಿ ಲಂಪಟನಾಗಿ ।
ನವಿಗಂಡ ಊಟಗಳ ಉಣಲರಿಯದೆ ॥
ಅವನ ಕೊಂದು ಇವನ ಕೊಂದು ಅರ್ಥವನು ಗಳಿಸಿಕೊಂಡು ।
ಜವನ ದೂತರು ಬಂದು ಎಳೆವ ಹೊತ್ತರಿಯೆ ॥ ೧ ॥

ಮೊನ್ನೆ ಮದುವೆಯಾದೆ ಕರೆವುವು ಒಂದೆರಡಮ್ಮೆ ।
ನಿನ್ನೆ ಕೊಂಡೆನು ಕ್ಷೇತ್ರ ಫಲಬಾಹೊದು ॥
ಹೊನ್ನು ಹಣವುಂಟೆನಗೆ ಸಾಯಲಾರೆನು ಎನಲಾ- ।
ತನ್ನ ದೂತರು ಬಂದು ಎಳೆವ ಹೊತ್ತರಿಯೆ ॥ ೨ ॥

ಹೊಸಮನೆಯು ಕಟ್ಟಿದೆನು ಗೃಹಶಾಂತಿಮನೆಯೊಳಗೆ ।
ಬಸಿರೆ ಹೆಂಡತಿ ಮಗನ ಮದುವೆಯು ನಾಳೆ ॥
ಹಸನವಾಗಿದೆ ಬದುಕು ಸಾಯಲಾರೆನು ಎನಲು ।
ವಿಷಮದೂತರು ಬಂದು ಎಳೆವ ಹೊತ್ತರಿಯೆ ॥ ೩ ॥

ಪುತ್ರ ಹುಟ್ಟಿದ ದಿವಸ ಹಾಲು ಊಟದ ಹಬ್ಬ ।
ಮತ್ತೊಬ್ಬ ಮಗನ ಉಪನಯನ ನಾಳೆ ॥
ಅರ್ಥಿಯಾಗಿದೆ ಬದುಕು ಸಾಯಲಾರೆನು ಎನಲು ।
ಮೃತ್ಯು ಹೆಡತಲೆಯಲಿ ನಗುತಿಹುದರಿಯೆ ॥ ೪ ॥

೧) ಕ. ವಿ. ವಿ. ತಾಳೆಗರಿಯ ಪ್ರತಿ (೧೭೫೦. ನಂ. ೧೮೫೮) ಹಾಗು ಅ (೮) ೬ I) ಪ್ರತಿಗಳಿಂದ ಆರಿಸಿಕೊಂಡಿದೆ. ಮುದ್ರಿತಪ್ರತಿಗಳಲ್ಲಿ ವಿಕಾರಗಳು ಹೆಚ್ಚಿವೆ.

ಅಟ್ಟಡಿಗೆ ಉಣಲಿಲ್ಲ ಇಟ್ಟ ನೀವಿರ್ಸಾಯಲಿಲ್ಲ ।
ಕೊಟ್ಟ ಸಾಲವ ಕೇಳ್ವ ಹೊತ್ತ ಕಾಣೆ ॥
ಕಟ್ಟಕಡೆಯ ದಿವಸ ತುಂಬಿದ ಬಳಿಕಿರಲಿಲ್ಲ ।
ಇಷ್ಟರೊಳು ಪುರಂದರವಿಟ್ಠಲನ ನೆನೆಮನವೆ ॥ ೫ ॥

೭೫

ರಾಗ—ನಾದನಾಮಕ್ರಿಯೆ ತಾಳ -ಆದಿ

[೧]ಹರಿಹರಿಯೆನಲಿಕ್ಕೆ ಹೊತ್ತಿಲ್ಲ–ರಂಗಯ್ಯ ।
ಹರಿಹರಿಯೆನಲಿಕ್ಕೆ ಹೊತ್ತಿಲ್ಲ ॥ ಪ ॥

ಧಾರಣೆಯ ಮಾಡುವಾಗ ಪಾರಣೆಯ ಚಿಂತೆ ।
ದೂರಯಾತ್ರೆ ಮಾಡುವಾಗ ಧಾರಣೆಯ ಚಿಂತೆ ॥ ೧ ॥

ನಿತ್ಯಯಾತ್ರೆ ಮಾಡುವಾಗ ಪುತ್ರರ ಮೇಲಿನ ಚಿಂತೆ ।
ಎತ್ತ ನೋಡಿದರತ್ತ ಉದರದ ಚಿಂತೆ ॥ ೨ ॥

ಸ್ನಾನವನ್ನು ಮಾಡುವಾಗ ಮಾನಿನಿ ಮೇಲಿನ ಚಿಂತೆ ।
ದಾನವನ್ನು ಕೊಡುವಾಗ ಧನದ ಮೇಲಿನ ಚಿಂತೆ ॥ ೩ ॥

ದೇವತಾರ್ಚನೆ ಮಾಡುವಾಗ ಸಂಸಾರದ ಚಿಂತೆ—ಆ- ।
ದಾವಾಗ ನೋಡಿದರು ಪರರ ಕೇಡಿನ ಚಿಂತೆ ॥ ೪ ॥

ಗಂಗೆಯ ಮಿಾಯುವಾಗ ತಂಬಿಗೆ ಮೇಲಿನ ಚಿಂತೆ ।
ಸಂಗಡ ಬಂದವರೆಲ್ಲ ಹೋಗುವರೆಂಬ ಚಿಂತೆ ॥ ೫ ॥

ಡಂಭಕತನಕೆ ಸಿಕ್ಕಿ ಭಂಗವ ಪಡುವೆ ತಂದೆ ।
ಇಂಬನಿತ್ತು ರಕ್ಷಿಸೈ ಪುರಂದರವಿಠಲನೆ ॥ ೬ ॥

---

೧) ಏ. ಪ್ರತಿಯಿಂದ ಇದನ್ನು ತೆಗೆದುಕೊಳ್ಳಲಾಗಿದೆ.

## ೭೬

ರಾಗ—ಸಾವೇರಿ ತಾಳ—ಛಾಪು

೧ಆಗಲೆ ಕಾಯಬೇಕು ಅಂಬುಜಾಕ್ಷನೆ ಎನ್ನ ।
ಈಗ ನೀ ಕಾಯ್ದರೇನು ಕಾಯದಿದ್ದರೇನು ॥ ಪ ॥

ಹೊನ್ನು ಹಣ ಎನಗುಂಟು ಹೆಸರಾದ ಮನೆಯುಂಟು ।
ಚಿನ್ನ-ಚೀನಾಂಬರವುಂಟು ಚೆಲುವುಪ್ಪರಿಗೆಯುಂಟು ॥
ಮೊನ್ನೆ ಹುಟ್ಟಿದ ಗಂಡುಮಗು ಒಂದು ಎನಗುಂಟು ।
ಸನ್ನೆ ಶಕ್ತಿಗುಂದಿದಾಗ ಸಂಗಡಲೊಬ್ಬರ ಕಾಣೆ ॥ ೧ ॥

ನಂಟರಿಷ್ಟರು ಉಂಟು ನೆರೆ-ಹೊರೆ ಎನಗುಂಟು ।
ಎಂಟು ಭಾಗ್ಯಗಳುಂಟು ಬಂದು ಹೋಗುವರುಂಟು ॥
ಕಂಠಕೆ ಹೊದ್ದಿದ ಕಾಂತೆಯರೆನಗುಂಟು ।
ಒಂಟಿಯಾಗಿ ಹೋಗುವಾಗ ಸಂಗಡೊಬ್ಬರನು ಕಾಣೆ ॥೨॥

ಒಂದು ಕ್ಷಣ ಮೊದಲಾದ ವಾತಘಾತಗಳಿಂದ ।
ಅಂದಿನ ವ್ಯಾಧಿಗಳು ಬಾಧಿಸುತಿರಲು ॥
ಇಂದಿರೇಶನೆ ನಿನ್ನ ಸಂಗವೆಲ್ಲವ ಬಿಟ್ಟೆ ।
ಬಂದಿನ್ನು ಕಾಯಬೇಕೊ ಪುರಂದರವಿಠಲ ॥ ೩ ॥

## ೭೭

ರಾಗ—ಮಧ್ಯಮಾವತಿ ತಾಳ—ಅಟ

೨ಆರು ಬಾರರು ಸಂಗಡಲೊಬ್ಬರು ।
ನಾರಾಯಣನ ದಿವ್ಯನಾಮ ಒಂದಲ್ಲದೆ* ॥ ಪ ॥

ಹೊತ್ತು ನವಮಾಸ ಪರಿಯಂತ ಗರ್ಭದಲಿ ।
ಅತ್ಯಂತ ನೋವು ಬೇನೆಗಳ ತಿಂದು ॥
ತುತ್ತು ಬುತ್ತಿಯ ಕೊಟ್ಟು ಸಲಹಿದ ತಾಯಿಯು ।
ಅತ್ತು ಕಳುಹುವಳಲ್ಲದೆ ಸಂಗಡ ಬಾಹಳೆ ॥ ೧ ॥

---

೧) ಅ. (೧) ಝ (೮) ಪ್ರತಿಗಳಲ್ಲಿ ಸಿಕ್ಕುತ್ತಿದೆ.
೨) ಆ (II). ಝ (೧/೧೦) ಈ ಪ್ರತಿಗಳಿಂದ ಆರಿಸಿಕೊಂಡಿದೆ.
ಆರು ಸಂಗಡ ಬಾಹೊರಿಲ್ಲ । ಇದು ರೂಢಿಯಲ್ಲಿದ್ದ ಪಲ್ಲವಿ
*ನಾರಾಯಣನ ನಾಮ ನೆರೆ ಬಾಹೋದಲ್ಲದೆ ॥ ಪ ॥

ನೆರೆದಿದ್ದ ಪುರಜನ ವಿಪ್ರರಗ್ನಿಯ ಸಾಕ್ಷಿ
ಕರವಿಡಿದು ಕೈಧಾರೆ ಎರಸಿಕೊಂಡ ॥
ತರುಣಿ ತನ್ನಯ ಗಂಡನನು ಮುಟ್ಟಲಮ್ಮದೆ ।
ನೆರೆ ಏನುಗತಿ ಗತಿ ತನಗೆ ಹೇಳಲಮ್ಮಳಲ್ಲದೆ ॥ ೨ ॥

ಮನೆ-ಮಕ್ಕಳಿವರೆನ್ನ ತನುವು ಒಡವೆ ಎರಡು ।
ಘನವಾಗಿ ನಂಬಿರೆ ನನ್ನವೆಂದು ।
ಅನುಮಾನವೇತಕೆ ಜೀವ ಹೋದಬಳಿಕ ।
ಘನಹೊತ್ತು ಮನೆಯಲಿ ಇರಿಸಿಕೊಳ್ಳರೊ ದೇವ ॥ ೩ ॥

ಆತ್ಮ ಬಳಲಿದಾಗ ಬಂಧುಗಳು ಬಂದು ।
ಹೊತ್ತು ಹೊರಗೆ ಹಾಕು ಎಂತೆಂಬರು ॥
ಹೊತ್ತುಕೊಂಡು ಹೋಗಿ ಅಗ್ನಿಯಲ್ಲಿ ಬಿಸುಟು ।
ಮತ್ತೆ ಬೆನ್ನನು ತಿರುಗದಲೆ ಬಾಹೋರಲ್ಲದೆ ॥ ೪ ॥

ಹರಣ ಹೋಗದ ಮುನ್ನ ಹರಿಯ ಸೇವೆಯ ಮಾಡಿ ।
ಪರಲೋಕ ಸಾಯುಜ್ಯ ಪಡೆದುಕೊಂಡು ।
ಕರುಣಿ ಕೃಪಾಳು ಶ್ರೀಪುರಂದರವಿಠಲನ ।
ನೆರೆನಂಬಿ ಭಜಿಸಿ ನೀ ಸುಖಿಯಾಗೊ ಮನುಜಾ ॥ ೫ ॥

**೭೮**

ರಾಗ- ಪೂರ್ವಿ ತಾಳ—ರೂಪಕ

[೧]ಚಿಂತೆ ಏತಕೊ—ಬಯಲ ಭ್ರಾಂತಿ ಏತಕೊ ।
ಕಂತುಪಿತನ ದಿವ್ಯನಾಮ [೨]ಮಂತ್ರವಿಗಲು ಜಪಿಸದೆ ॥ ಪ ॥

[೩]ಬೆಳುತುದಯ ಕಾಲದಲ್ಲಿ ।
ವೇಳೆಯರಿತು ಕೂಗುವಂಥ ॥
ಕೋಳಿ ತನ್ನ ಮರಿಗೆ ಮೊಲೆಯ ।
ಹಾಲಕೊಟ್ಟು ಸಲಹಿತೆ ? ॥ ೧ ॥

---

೧) ಆ (೫) : ೩ (೧೦). ಶ್ರೀ, ಪ್ರತಿಗಳಿಂದ ಮತ್ತು ಕ ಪ ವಿ. ತಾಳೆಗರಿಯಿಂದ ಈ ಹಾಡು ತೆಗೆದಿದೆ (೧೭೫೦. ಸಂ ೨೫೬೩). ೨) ಮಂತ್ರವನ್ನು ಜಪಿಸುವರಿಗೆ ೩) ಬೆಳ್ಳ.

ಸಡಗರದಲಿ ನಾರಿಜನರು ।
ಹಡೆಯುವಾಗ ಸೂಲಗಿತ್ತಿ ॥
ಅಡವಿಯೊಳಗೆ ಹೆರುವ ಮೃಗವ ।
ಪಿಡಿದು ರಕ್ಷಣೆ ಮಾಳ್ಪರಾರು ॥ ೨ ॥

ಹೆತ್ತ ತಾಯಿ ಸತ್ತ ಶಿಶುವು ।
ಮತ್ತೆ ಕೆಟ್ಟಿತೆಂಬರು ಜನರು ॥
ಹುತ್ತಿನ ಹಾವಿಗೆ ಗುಬ್ಬಿಗೆ ಮೊಲೆಯು- ।
ನಿತ್ತು ರಕ್ಷಣ ಮಾಡುವರಾರು ॥ ೩ ॥

ಗಟ್ಟಿಮಣ್ಣಿನ ಶಿಶುವ ಮಾಡಿ ।
ಹೊಟ್ಟೆಯೊಳಗೆ ಇರಿಸುವಂಥ ॥
ಕೊಟ್ಟ ದೈವ ಕೊಂಡೊಯ್ದರೆ ।
ಕುಟ್ಟಿಕೊಂಡು ಅಳುವುದೇಕೆ ॥ ೪ ॥

ನಂಬಿಗೆಗಿವು ಸಾಲವೆಂದು ।
ಹಂಬಲಿಪುದು ಲೋಕವೆಲ್ಲ ॥
ನಂಬಿ ಪುರಂದರವಿಠಲ- ।
ನೆಂಬ ನಾಮ ನುಡಿದ ಮೇಲೆ ॥ ೫ ॥

## ೭೯

ರಾಗ ಕೇದಾರಗೌಳ ತಾಳ — ಝಂಪೆ

[1]ಏಕೆ ಚಿಂತಿಸುತಿರುವೆ ಕೋತಿಮನವೆ ।
ಶ್ರೀಕೃಷ್ಣರಾಯನನು ಸ್ತುತಿಸಲೊಲ್ಲದಲೆ ॥ ಪ ॥

ಹುಟ್ಟಿದಾಗುತ್ಪತ್ತಿಗಾರುಚಿಂತಿಸಿದವರು ।
ಕಟ್ಟಕಡೆಯಲಿ ಲಯಕೆ ಏನು ಚಿಂತೆ ? ॥
ನಟ್ಟನಡುವಿನ ಬದುಕಿಗೇಕೆ ಚಿಂತಿಸುತಿರುವೆ ? ।
ಕಟ್ಟಕಡೆಯಲಿ ಮೂರುಬಟ್ಟೆ ತಾನಲ್ಲವೆ ? ॥ ೧ ॥

೧) ಝು (೧/೧೦) ಶ್ರೀ ಕ. ವಿ, ವಿ. ತಾಳೆಗರಿ (೨೫೬೩-೧೫೦೦) ಇವುಗಳ ನೆರವಿನಿಂದ ಬರೆದಿದೆ.

ನವಿಲಿಂಗೆ ಚಿತ್ರಪತ್ರವನಾರು ಬರೆದವರು ? ।
ಪವಳಜಾತಿಗೆ ಕೆಂಪನಾರಿತ್ತರು ? ॥
ಸವಿಮಾತಿನರಗಿಳಿಗೆ ಹಸಿರಾರು ಬರೆದವರು ? ।
ಇವ ಮಾಡಿದವ ಕೃಷ್ಣ ನಮ್ಮ ಮರೆದಿಹನೆ ? ॥ ೨ ॥

ಬಸಿರೊಳಗೆ ಇದ್ದಾಗ ೧ಶಿಶುವ ಹೊರೆದವರಾರು ।
ವಸುಧೆಯನು ಬಸಿರೊಳಗೆ ಹೆತ್ತರಾರು ?
ವಸುದೇವಸುತ ನಮ್ಮ ಪುರಂದರವಿಟ್ಠಲನ ।
ಪೆಸರ ಬಸಿರೊಳಗಿಟ್ಟು ಸ್ತುತಿಸುತಿರು ಮನವೆ ॥ ೩ ॥

## ೮೦

ರಾಗ—ಕೇದಾರಗೌಳ ತಾಳ—ಆದಿ

(ಸುರಟಿ)

೨ನಾಚಿಕೆಪಡಬೇಡ—ಮನದೊಳು-
ಯೋಚಿಸಿ ಕೇಡಬೇಡ ॥ ಪ ॥

ನಿಚ್ಚ ನೆನೆಯೊ ನಮ್ಮಚ್ಯುತನಾಮವ ।
ಮೆಚ್ಚಿ ಕೊಟ್ಟರೆ—ಅಚ್ಯುತ ಪದವೀವ ॥ ಅ.ಪ ॥

ಹರಿಹರಿಯೆಂದೊದರೋ—ಹತ್ತಿದ- ।
ದುರಿತಗಳಿಗೆ ಬೆದರೋ ॥
ವಾರಿಜಾಕ್ಷನ—ವೈಕುಂಠಪುರವ ।
ಸೇರಿಸೇರಿ ನೀ ಕುಣಿಕುಣಿದಾಡೊ ॥ ೧ ॥

ಆರಗೊಡವೆ ಏನೋ—ನರಕದ- ।
ದಾರಿ ತಪ್ಪಿಸುವರೆ— ॥

---

೧) ಅಸುವ (ತಾಳೆಗರಿ ೨೫೬೩–೧೮೦೦).
೨) ಅ. (೧) ಎ. ಒ. ಗ. ಪ್ರತಿಗಳಲ್ಲಿ ಸಿಕ್ಕುತ್ತಿದೆ.

ನೀರಜಾಕ್ಷ ನಮ್ಮ ನಿರ್ಜರಪತಿಯಲಿ ।
ನೇರಿ-ಸೇರಿಸಿ ಮನ ನಲಿನಲಿದಾಡೊ ॥ ೨ ॥

ಭಕ್ತಜನರ ಕೂಡೊ—ಭವಭಯ- ।
ಬತ್ತಿಪೋಪುದು ನೋಡೊ ॥
ಮುಕ್ತಿದಾಯಕ ಶ್ರೀಪುರಂದರವಿಠಲನ ।
ಭಕ್ತಿಯಿಂದ ನೀ ಹಾಡಿ ಕೊಂಡಾಡೊ ॥ ೩ ॥

## ೮೧

ರಾಗ—ರೇಗುಪ್ತಿ ತಾಳ—ಅಟ

[೧]ನಾಲಗೆ ನಾಲಗೆ ನಾಲಗೆ—ಸಿರಿ- ।
ಲೋಲನ ನೆನೆ ಕಾಣೊ ನಾಲಗೆ ॥ ಪ ॥

ವಾಸುದೇವನ ನಾಮ ನಾಲಗೆ—ನೀ ಅ-।
ಲೇಸಾಗಿ ನೆನೆ ಕಾಣೊ ನಾಲಗೆ ॥
ಆಸೆಯೊಳಗೆ ಬಿದ್ದು ಮೋಸ ಹೋಗಲು ಬೇಡ ।
ಕೇಶವನ ನಾಮವ ನೆನೆ ಕಾಣೊ ಮರುಳೆ ॥ ೧ ॥

ಮಾತನಾಡುವಲ್ಲಿ ನಾಲಗೆ—ನೀ ಅ- ।
ನೀತಿ ನುಡಿಯದಿರು ನಾಲಗೆ ॥
ಆತನ ನಾಮವ ಗೀತದಿ ಪಾಡುತ ।
ಸೀತಾಪತಿ ರಘುನಾಥನ ನೆನೆ ಕಾಣೊ ॥ ೨ ॥

ಅಚ್ಯುತನಾಮವ ನಾಲಗೆ ನೀ- ।
ಬಿಚ್ಚಿಟ್ಟು ನೆನೆ ಕಾಣೊ ನಾಲಗೆ ॥
ನೆಚ್ಚಿ ಕೆಡಲಿ ಬೇಡನಿಚ್ಚ ಶರೀರವ ।
ಅಚ್ಯುತನಾಮವ ನೆನೆ ಕಾಣೊ ಮರುಳೆ ॥ ೩ ॥

೧) ಝು (೧/೧೧) ಶ್ರೀ. ಪ್ರತಿಗಳಿಂದ ತೆಗೆದುಕೊಂಡಿದೆ.

ನನ್ನದು ತನ್ನದು ನಾಲಗೆ—ನೀ- ।
ನೆನ್ನದಲಿರು ಕಾಣೊ ನಾಲಗೆ ।
ಇನ್ನು ಮೂರುದಿನದೀ ಸಂಸಾರದಿ ।
ಪನ್ನಗಶಯನನ ನೆನೆ ಕಾಣೊ ಮರುಳೆ ॥ ೪ ॥

ಅನುದಿನ ಹರಿನಾಮ ನಾಲಗೆ—ನೀ- ।
ನೆನೆಯುತಲಿರು ಕಾಣೊ ನಾಲಗೆ ॥
ಘನಮಹಿಮ ನಮ್ಮ ಪುರಂದರವಿಠಲನ ।
ಕ್ಷಣಕ್ಷಣಕೊಮ್ಮೆ ನೆನೆ ಕಾಣೊ ಮರುಳೆ ॥ ೫ ॥

## ೮೨

ರಾಗ—ಪಂತುವರಾಳಿ ತಾಳ—ಅಟ

[೧]ಗೋವಿಂದ ಎನ್ನಿರೊ—ಹರಿ—ಗೋವಿಂದ ಎನ್ನಿರೊ ।
ಗೋವಿಂದನ ನಾಮವ ಮರೆಯದಿರಿರೊ ॥ ಪ ॥

ತುಂಬಿರುವ ಪಟ್ಟಣಕೆ ಒಂಬತ್ತು ಬಾಗಿಲು ।
ಸಂಭ್ರಮದರಸುಗಳೈದುಮಂದಿ ॥
ಡಂಭಕತನದಿಂದ ಕಾಯುವ ಜೀವವ ।
ನಂಬಿ ನಚ್ಚಿ ಕೆಡಬೇಡಿ ಕಾಣಿರೊ ॥ ೧ ॥

ನೆಲೆಯು ಇಲ್ಲದ ಕಾಯ ಎಲುವಿನ ಹಂದರವು ।
ಬಲಿದು ಸುತ್ತಿದ ಚರ್ಮದ ಹೊದಿಕೆ ॥
ಮಲಮೂತ್ರಂಗಳು ಕೀವುಗಳು ಕ್ರಿಮಿಗಳು ।
ಚೆಲುವ ತೊಗಲನು ಮೆಚ್ಚಿ ಕೆಡಬೇಡಿರಯ್ಯ ॥ ೨ ॥

ಹರ ಬ್ರಹ್ಮ ಸುರರಿಂದೆ ವಂದಿತನಾಗಿಪ್ಪ ।
ಹರಿಯೇ ಸರ್ವೋತ್ತಮನೆಂದೆನ್ನಿರೊ ॥

೧) ಆ (I). ಝ (೧/೧೦). ಶ. ಇವುಗಳಿಂದ ತೆಗೆದುಕೊಂಡಿದೆ.

ಪುರಂದರವಿಠಲನ ಸ್ಮರಣೆಯು ಮಾಡಲು ।
ದುರಿತಭಯಂಗಳ ಪರಿಹರಿಸುವುದು ॥ ೩ ॥

## ೮೩

ರಾಗ—ಕಲ್ಯಾಣಿ ತಾಳ—ಅಟ

[೧]ನಾರಾಯಣ ಎನ್ನಿರೊ—ಶ್ರೀ ನರಹರಿ-।
ನಾರಾಯಣ ಎನ್ನಿರೊ ॥ ಪ ॥

ನಾರಾಯಣನೆಂದು ಅಜಮಿಳ ಕೈವಲ್ಯ ।
ಸೂರೆಗೊಂಡನೆಂಬ ಸುದ್ದಿಯನರಿಯಿರಾ ? ॥ ಅ.ಪ ॥

ಚೋರರ ಭಯವಿಲ್ಲವೊ—ಇದಕೆ ನೋಡ್ಯೆ- ।
ದಾರರಂಜಿಕೆ ಇಲ್ಲವೊ ॥
ಊರನಾಳುವ ದೊರೆಯ ಭೀತಿ ಇನಿತಿಲ್ಲವೊ ।
ಘೋರ ಪಾತಕವೆಲ್ಲ ಹಾರಬಿಡುವುದಿದು ॥ ೧ ॥

ಕಾಶಿಗೆ ಹೋಗಲೇಕೆ—ಕಾವಡಿ ಹೊತ್ತು- ।
ಬೇಸತ್ತು ತಿರುಗಲೇಕೆ ॥
ವಾಸುದೇವನ ನಾಮ ವರ್ಣಿಸಿದವರಿಗೆ ।
ಕ್ಲೇಶವೆಂಬುವುದಿದು ಲೇಶಮಾತ್ರವು ಇಲ್ಲ ॥ ೨ ॥

ಸ್ನಾನವ ಮಾಡಲೇಕೆ—ಸಂಧ್ಯಾವಂದನೆ- ।
ಮೌನಮಂತ್ರಗಳೇತಕೆ ॥
ದೀನರಕ್ಷಕ ಬೆಟ್ಟದೊಡೆಯನಾದವನ ।
ಧ್ಯಾನಕೆ ಸಮವುಂಟೆ ಪುರಂದರವಿಠಲನ ॥ ೩ ॥

---

೧) ಅ (೧) ಆ (VI) ಇ. ಏ (೨), ಗ. ಶ್ರೀ ಪ್ರತಿಗಳಿಂದ ತೆಗೆದುಕೊಂಡಿದೆ.

## ೮೪

ರಾಗ—ಸೌರಾಷ್ಟ್ರ ತಾಳ—ರೂಪಕ

[೧]ಗಾಳಿ ಬಂದ ಕೈಯಲಿ ತೂರಿಕೊಳ್ಳಿರೊ ।
ನಾಲಗೆಯಿದ್ದ ಕೈಯಲಿ ನಾರಾಯಣನೆನ್ನಿರೊ ॥ ಪ ॥

ಕದ್ದು ಹುಸಿಯನಾಡಿ ಅಪರ ।
ಬುದ್ಧಿಯಿಂದ ಕೆಡಲು ಬೇಡಿ ॥
ಬುದ್ಧಿವಂತರಾಗಿ—ಅನಿ- ।
ರುದ್ಧನ ನೆನೆಯಿರೊ ॥ ೧ ॥

ನಿತ್ಯವಿಲ್ಲ ನೇಮವಿಲ್ಲ ।
ಮತ್ತೆ ದಾನಧರ್ಮವಿಲ್ಲ ॥
ವ್ಯರ್ಥವಾಗಿ ಕೆಡದೆ—ಪುರು- ।
ಷೋತ್ತಮನೆನ್ನಿರೊ ॥ ೨ ॥

ಭಕ್ತಿಕೊಡುವ ಮುಕ್ತಿಕೊಡುವ ।
ಮತ್ತೆ ಸಾಯುಜ್ಯ ಕೊಡುವ ॥
ಕರ್ತೃ ಪುರಂದರವಿಠಲನ ।
ನಿತ್ಯ ನೆನೆಯಿರೊ ॥ ೩ ॥

---

೧) ಅ (೧). ಆ (VI) ಇ. ಐ. ಪ್ರತಿಗಳಿಂದ ಆರಿಸಿಕೊಂಡಿದೆ.



# ೨ ಪತಿತಪಾವನ ದೇವ

**೮೫**

ರಾಗ—ತೋಡಿ | ತಾಳ—ಅಟ

[೧]ಏಕೆ ದೇಹವನು ದಂಡಿಸುವೆ [೨]ವ್ಯಥಾ–ಬಿಡ- ।
ದೇಕಚಿತ್ತದಿ ಲಕ್ಷ್ಮೀಕಾಂತ ಹರಿ ಎನ್ನದೆ ॥ ಪ ॥

ಸ್ನಾನವನು ಮಾಡಿ ಧ್ಯಾನಿಸುವೆನೆನುತಲತಿ- ।
ಮೌನವನು ಪಿಡಿದು ಬಕಪಕ್ಷಿಯಂತೆ ।
ಹೀನಬುದ್ಧಿಗಳ ಯೋಚಿಸಿ ಕುಳಿತು ಫಲವೇನು ।
ದಾನವಾಂತಕನ ನಾಮಕೆ ಮೌನವುಂಟೆ ? ॥ ೧ ॥

ಜಪವ ಮಾಡುವೆನೆನುತ ಕಪಟಬುದ್ಧಿಯ ಬಿಡದೆ ।
ಗುಪಿತದಿಂದಲಿ ನೀನು ಕುಳಿತುಫಲವೇನು ॥
ಅಪರಿಮಿತಮಹಿಮ ಶ್ರೀನಾರಾಯಣೆಂದರೆ ।
ಸಫಲವಲ್ಲದೆ ಬೇರೆ ಗತಿಯುಂಟೆ ಮರುಳೆ ॥ ೨ ॥

ಅಂದಜಾಮಿಳಗೆ ಸ್ಮರಣೆಯ ಮಾತ್ರದಲಿ ಮುಕುತಿ ।
ಹಿಂದೆ ಶ್ರೀಹರಿಯು ತಾ ಕೊಡಲಿಲ್ಲವೇ ? ।
ಸಂದೇಹವೇಕೆ ನೀನೊಂದು ಕ್ಷಣವಗಲದೆ ।
ತಂದೆ ಶ್ರೀಪುರಂದರವಿಠಲನ ನೆನೆಮನವೆ ॥ ೩ ॥

**೮೬**

ರಾಗ—ನಾಂಟಿ | ತಾಳ—ಅಟ

[೨]ಎಲೆ ಮನವೆ ನೀ ತಿಳಿ ಹರಿ ಸರ್ವೋತ್ತಮನೆಂದು ।
ಸುಲಲಿತಾತ್ಮನ ಭಜಿಸಿ ಸುಖಿಯಾಗೊ ಮನವೆ ॥ ಪ ॥

---

೧) ಆ (೨) (ಶI). ಇ. ಜ್ಞಾ ಶ್ರೀ ಪ್ರತಿಗಳಿಂದ ಆಯ್ದುಕೊಳ್ಳಲಾಗಿದೆ ೨ ವ್ಯರ್ಥ.
೨) ಅ (೧), ಆ(VI). ಇ. ರಘು (೧/೧೦) ಈ ಪ್ರತಿಗಳಿಂದ ಆರಿಸಿಕೊಂಡಿದೆ.

ಇಕ್ಷುದಂಡಗಳಿರಲು ಇಂಧನವ ಮೆಲಲೇಕೆ ।
ಅಕ್ಷಯಪಾತ್ರೆಯಿರಲು ಹಸಿವೆಯೆನಲೇಕೆ ॥
ನಿಕ್ಷೇಪನಿಧಿಯಿರಲು ನಿರುತದಾರಿದ್ರ್ಯವೇಕೇ ।
ಪಕ್ಷಿವಾಹನನಿರಲು ಪರದೈವವೇಕೆ ॥ ೧ ॥

ಸುರಧೇನು ಕೈಸೇರಿ ಸುಖವಿಲ್ಲವೆನಲೇಕೆ ।
ಗರುಡಮಂತ್ರವ ಜಪಿಸಿ ಗರಳಭಯವೇಕೆ ॥
ತರಣಿಕಿರಣಗಳಿರಲು ಹಲವುಜ್ಯೋತಿಗಳೇಕೆ ।
ಮುರಹರನ ಪೂಜಿಸದೆ ಮುಂದುಗೆಡಲೇಕೇ ॥ ೨ ॥

ಭಾವಶುದ್ಧಿಗಳಿರಲು ಬಯಲಡಂಬರವೇಕೆ ।
ದೇವತಾಸ್ತುತಿಯಿರದ ದೇಹವೇಕೆ ॥
ಆವಗಂ ಹರಿಯೆನದೆ ಅನ್ಯಚಿಂತೆಗಳೇಕೆ ।
ದೇವಪುರಂದರವಿಠಲನಿರಲು ಭಯವೇಕೆ ॥ ೩ ॥

## ೮೭

ರಾಗ—ಶಂಕರಾಭರಣ | ತಾಳ—ಅಟ

[೧]ಬರಬೇಕೋ ರಂಗಯ್ಯ ನೀ—ಬರಬೇಕೊ ॥ ಪ ॥

ಬರಬೇಕೋ ಬಂದು ಒದಗಬೇಕೊ ಮಮಗುರು ।
ನರಹರಿ ನಾರಾಯಣ ನೀನಾ ಸಮಯಕೆ ॥ ಪ ॥

ಕಂಠಕೆ ಪ್ರಾಣಬಂದಾಗ—ಎನ್ನ ।
ನಂಟರಿಷ್ಟರು ಬಂದಳುವಾಗ ॥
ಗಂಟುಹುಬ್ಬಿನ ಕಾಲಬಂಟರು ಕವಿದೆನ್ನ ।
ಗಂಟಲೌಕುವಾಗ ವೈಕುಂಠನಾರಾಯಣ ॥ ೧ ॥

---

೧ ಮು (೧೧) ಪ್ರತಿಯಿಂದ ಆರಿಸಿಕೊಂಡಿದೆ.

ನಾರಿಯು ಪುತ್ರಮಿತ್ರರು—ಬಂಧುಗಳು ।
ಆರೆನ್ನ ಸಂಗಡ ಬಾರರು ॥
ಆರಿಗಾರಿಲ್ಲ ಯಮನಾರುಭಟಕೆ ಅಸು-।
ರಾರಿ ಮೈಮರೆದಾಗ ನೀರೇರುಹನಾಭ ॥ ೨ ॥

ಕರಿ ಪ್ರಹಲ್ಲಾದಾದಿ ಭಕ್ತರ—ಪತಿ ।
ಕರಿಸಲು ಒದಗಿದೆ ಶ್ರೀಧರ ॥
ನೆರೆ ಹೀನನೆನ್ನ ಉದ್ಧರಿಸಿ ಅಚ್ಯುತ ನಿನ್ನ ।
ಚರಣದೊಳಿಂಬಿಡೊ ಪುರಂದರವಿಠಲ ॥ ೩ ॥

## ೮೮

ರಾಗ—ಮಧ್ಯಮಾವತಿ ತಾಳ ಏಕ

[೧]ನಾರಾಯಣ ತೇ ನಮೋ ನಮೋ ।
ನಾರದಸನ್ನುತ ನಮೋ ನಮೋ ॥ ಪ ॥

ಮುರಹರ ನಗಧರ ಮುಕುಂದ ಮಾಧವ ।
ಗರುಡಗಮನ ಪಂಕಜನಾಭ ॥
ಪರಮಪುರುಷ ಭವಭಂಜನ ಕೇಶವ ।
ನರಮೃಗಶರೀರ ನಮೋ ನಮೋ ॥ ೧ ॥

ಜಲಧಿಶಯನ ರವಿಚಂದ್ರವಿಲೋಚನ ।
ಜಲರುಹಭವನುತ ಚರಣಯುಗ ॥
ಬಲಿಬಂಧನ ಗೋವರ್ಧನಧಾರಿ ।
ನಳಿನೋದರ ತೇ ನಮೋ ನಮೋ ॥ ೨ ॥

ಆದಿದೇವ ಸಕಲಾಗಮಪೂಜಿತ ।
ಯಾದವಕುಲ ಮೋಹನರೂಪ ॥

[೧]—ರಘು (೧/೧೦) ಪ್ರತಿಯಿಂದ ತೆಗೆದುಕೊಂಡಿದೆ.

ವೇದೋದ್ಧರ ಶ್ರೀವೆಂಕಟನಾಯಕ ।
ಮೋದದ ಪುರಂದರವಿಠಲ ನಮೋ ನಮೋ ॥ ೩ ॥

## ೮೯

ರಾಗ—ರೇಗುಪ್ತಿ ತಾಳ – ಕುರುರ್ಝಂಪೆ

[೧]ದಯೆಮಾಡಿ ಸಲಹಯ್ಯ ಭಯನಿವಾರಣನೆ ।
ಹಯವದನ ನಾ ನಿನ್ನ ಚರಣ ನಂಬಿದೆ ಕೃಷ್ಣ ॥ ಪ ॥

ಕ್ಷಣಕ್ಷಣಕೆ ನಾ ಮಾಡಿದಂಥ ಪಾಪಗಳೆಲ್ಲ ।
ಎಣಿಸಲಳವಲ್ಲಷ್ಟು ಇಷ್ಟು ಎಂದು ॥
ಫಣಿಶಾಯಿ ಅವಗುಣವ ನೋಡದೇ ಚರಣ ಸ್ಮ-
ರಣೆಯ ಮಾಡುವಂಥ ಭಕುತಿಯನಿತ್ತು ॥ ೧ ॥

ಕಂಡಕಂಡ ಕಡೆಗೆ ಪೋಪ ಚಂಚಲಮನಸು ।
ಲಂಡತನದಲಿ ಬಹಳ ಭ್ರಷ್ಟ ನಾನು ॥
ಭಂಡಾಟದವನೆಂದು ಬಹಿರಂಗಕೆಳೆಯದೆ ।
ಕೊಂಡಾಡುವಂಥ ಭಕುತಿಯನಿತ್ತು ಸಲಹಯ್ಯ ॥ ೨ ॥

ಜಾತಿಧರ್ಮವ ಬಿಟ್ಟು ಅಜಮಿಳನು ಇರತಿರಲು ।
ಪ್ರೀತಿಯಿಂದಲಿ ಮುಕುತಿಕೊಡಲಿಲ್ಲವೆ ॥
ಖ್ಯಾತಿಯನು ಕೇಳಿ ಮೊರೆಹೊಕ್ಕೆ ದಯಾನಿಧಿಯೆ—ಬೆ- ।
ನ್ನಾತು ಕಾಯಯ್ಯ ಶ್ರೀಪುರಂದರವಿಠಲ ॥ ೪ ॥

## ೯೦

ರಾಗ—ಕಲ್ಯಾಣಿ ತಾ – ಅಟ

[೨]ಏಕೆ ದಯಮಾಡಲೊಲ್ಲೆ—ಎಲೊ ಹರಿಯೆ- ।
ಮೂಕನಾಗುವರೆ ಹೀಗೆ ॥ ಪ ॥

---

೧ ಅ (೧) ಪ್ರತಿಯಲ್ಲಷ್ಟೇ ಈ ಹಾಡು ಸಿಕ್ಕುತ್ತಿದೆ. ಮುದ್ರಿತ ಪ್ರತಿಗಳಲ್ಲಿ ರಂಗ ವಿಠಲ ಮುದ್ರಿಕೆಯಿದೆ.

೨ ಅ (II). ಝ ಪ್ರತಿಗಳಿಂದ ತೆಗೆದು ಬರೆದಿದೆ.

ಲೋಕವನು ರಕ್ಷಿಪ ಲಕ್ಷ್ಮೀಕಾಂತನು ನೀನೇ ।
ವಾಕುವೊರೆಗಳ ಕೇಳಿ ಒಲಿದು ದಯಮಾಡಯ್ಯ ॥ ಅ-ಪ ॥

ಅರ್ಥವಿಲ್ಲದ ಬಾಳ್ವೆಯು—ಇರುವುದಿದು-।
ವ್ಯರ್ಥವಾಗಿದೆ ಶ್ರೀಪತಿ ॥
ಕರ್ತ ನಿನ್ನೊಳು ನಾನು ಕಾಡಿ ಬೇಡುವನಲ್ಲ ।
ಸತ್ವರದಿ ದಯಮಾಡೊ ತುಳಸೀದಳಪ್ರಿಯ ॥ ೧ ॥

ಮನದೊಳಗಿನ ಬಯಕೆ—ಎಲ್ಲೈ ಸ್ವಾಮಿ ।
ನಿನಗೆ ಪೇಳುವೆನು ನಾನು ॥
ಬಿನುಗು ದೇವತೆಗಳಿಗೆ ಪೇಳಲಾರೆನೊ ಹರಿಯೆ ।
ತನುಮನ ನಿನ್ನ ಕೂಡ ಇಹವು ದಯಮಾಡೊ ॥ ೨ ॥

ಮೂರು ಲೋಕವ ಪಾಲಿಪ—ಎನ್ನಯ ಸ್ವಾಮಿ ।
ಭಾರವೆ ನಿನಗೆ ನಾನು ॥
ಕಾರುಣ್ಯನಿಧಿ ನಮ್ಮ ಪುರಂದರವಿಠಲ ಶ್ರೀ- ।
ದಾರಾಮನೋಹರ ಸಾಕಾರ ದಯವಾಗೊ ॥ ೩ ॥

## ೯೧

ರಾಗ—ಧನ್ಯಾಸಿ ತಾಳ—ಆದಿ

[1]ಕರುಣಾಕರ ನೀನೆಂಬುವುದೇಕೊ ।
ಭರವಸೆ ಇಲ್ಲನಗೆ ॥ ಪ ॥

ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯ ।
ಪೊರೆದವ ಭವದಲಿ ನೀನಂತೆ ॥
ಅರಿತು ವಿಚಾರಿಸಿ ನೋಡಲಿದೆಲ್ಲವು ।
ವರಿಪರಿ ಕಂತೆಗಳಂತಿದೆ ಕೃಷ್ಣ ॥ ೧ ॥

[1] ರಘು (ಶಿ) ಪ್ರತಿಯಿಂದ ಆರಿಸಿದೆ.

ಕರುಣಾಕರ ನೀನಾದರೆ ಈಗಲೆ ।
ಕರಪಿಡಿವೆನ್ನನು ನೀ ಕಾಯೊ ।।
೧ಸರಸಿಜಾಕ್ಷನೇ ಅರಸು ನೀನಾದರೆ ।
ದುರಿತಗಳೆನ್ನನು ಪೀಡಿಪುದುಂಟೆ ॥ ೨ ॥

ಮರಣಕಾಲದಲಿ ಅಜಮಿಳಗೊಲಿದೆಯೊ ।
ಗರುಡಧ್ವಜನೆಂಬ ಬಿರುದಿನಿಂದ ।।
ವರಬಿರುದುಗಳ್ನಿನಗುಳಿಯಬೇಕಾದರೆ ।
ತ್ವರಿತದಿ ಕಾಯೋ ಪುರಂದರವಿಠಲ ॥ ೩ ॥

## ೯೨

ರಾಗ—ಆರಭಿ ತಾಳ—ಆದಿ

೨ವೈದ್ಯವ ನಾನರಿಯೆ—ಭವರೋಗದ— ।
ವೈದ್ಯ ನೀನೆ ಹರಿಯೆ ॥ ಪ ॥

ನೀ ದಯದಿಂದೆನ್ನ ರಕ್ಷಿಸು—
ಆದಿವೈದ್ಯ ಮುನ್ನ ।
ಪಾದೋದಕವನು ಎನಗೆ ಕೊಡಿಸು ಸರ್ವ- ।।
ವ್ಯಾಧಿನಿವಾರಣ ಕಷಾಯ ನೀ ಕೊಡು ॥ ೧ ॥

ಹರಿ ನಿನ್ನ ಕರುಣವೆಂಬ—ಸ್ಮರಣೆಯ ।
ತ್ವರಿತ ಜ್ಞಾನದಿಂದ ।।
ಉರುತರ ಮಹಾತ್ಮ್ಯೆಯ ಎನಗೆ ಕೊಡಿಸು ಸರ್ವ ।।
ದುರಿತನಿವಾರಣ ಕಷಾಯ ನೀ ಕೊಡು ॥ ೨ ॥

---

೧) ಸರಸಿಜಾಕ್ಷಿಗೆ ಅರಸ ನೀನಾದರೆ. (ಗ)

೨) ಈ ಹಾಡನ್ನು ಕ. ವಿ. ವಿ ತಾಳೆಗರಿಯ ಪ್ರತಿಯಿಂದ ಬರೆದುಕೊಂಡಿದೆ—(೧೭೫೦-ಸಂ-೧೮೫೮). ಉಳಿದುವು ವಿಕಾರಗೊಂಡಿವೆ.

ಕೃಷ್ಣ ನೀ ಕೃಪೆವಿಡಿದು—ಕಪಟದ- ।
ಉಷ್ಣವಾಯುವಳಿದು ।।
ವಿಷ್ಣುಶಕ್ತಿಯೆಂಬ ಅಭಯವ ಎನಗಿತ್ತು ।
ಇಷ್ಟವ ಸಲಿಸುವ ತೃಪ್ತಿಪಡಿಸುವಂಥ ॥ ૩ ॥

ನಿನ್ನ ದಾಸ ನಾನು—ದುರಿತಗ- ।
ಳೆನ್ನ ಕಾಡುವುವೇನು ।।
ಚೆನ್ನಾಗಿ ಕಾಯಕೆ ಶಕ್ತಿಯನಿತ್ತು ದೃಢ- ।
ವನ್ನುಮಾಡಿ ಶ್ರೀಹರಿ ಸಲಹೆನ್ನನು ॥ ೪ ॥

ಪಂಡಿತ ದಯಾಸಿಂಧು—ಕಾಡುವ- ।
ಪಾಂಡುರೋಗ ಕೊಂದು ।।
ಪುಂಡರೀಕಾಕ್ಷ ಶ್ರೀಪುರಂದರವಿಠಲ ಅ- ।
ಖಂಡಮೂರುತಿ ಶ್ರೀಹರಿ ಸಲಹೆನ್ನನು ॥ ೫ ॥



# ೩ ಭಕ್ತಿವಿಚಾರವಿವೇಕ

೯೩

ರಾಗ—ಶಂಕರಾಭರಣ ತಾಳ - ಅಟ

[1]ಎಲ್ಲಿರುವನೋ ರಂಗನೆಂಬ ಸಂಶಯು ಬೇಡ ।
ಎಲ್ಲಿ ಭಕುತರು ಕರೆದರಲ್ಲಿ ಬಂದೊದಗುವನು ॥ ಪ ॥

ತರಳ ಪ್ರಹ್ಲಾದ ಶ್ರೀಹರಿ ವಿಶ್ವಮಯನೆಂದು ।
ಬರೆದೋದಲವನ ಪಿತ ಕೋಪದಿಂದ ॥
ಸ್ಥಿರವಾದೊಡೀ ಕಂಬದಲಿ ತೋರು-ತೋರೆನಲು ।
ಭರದಿ ಬರಲಾಗ ವೈಕುಂಠವಲ್ಲಿಹುದೊ ? ॥ ೧ ॥

ಕುರುಪತಿಯು ದ್ರೌಪದಿಯ ಸೀರೆ ಸೆಳೆಯುತಿರೆ ।
ತರುಣಿ ಹಾ ಕೃಷ್ಣ ಎಂದೊದರೆ ಕೇಳಿ ॥
ಭರದಿಂದಲಕ್ಷಯಾಂಬರವೀಯೆ ಹಸ್ತಿನಾ ।
ಪುರವು ದ್ವಾರಾವತಿಗೆ ಕೂಗಳತೆಯೆ ॥ ೨ ॥

ಕರಿರಾಜನನು ನೆಗಳು ನುಂಗುತಿರೆ ಭಯದಿಂದ।
ಹರಿಯೆ ಕಾಯೆಂದು ಮೊರೆಯಿಡಲು ಕೇಳಿ ॥
ಕರುಣದಿಂ ಬಂಧನವ ಬಿಡಿಸಲಾ ಗಜರಾಜ- ।
ನಿರುವ ನರಸಿಗೆ ಅನಂತಾಸನ ಮುಮ್ಮನೆಯೆ ॥ ೩ ॥

ಪಾಪಕರ್ಮವ ಮಾಡಿದಜಮಿಳನ ಯಮಭಟರು ।
ಕೋಪದಿಂದಲಿ ಸೆಳೆಯೆ ಭೀತಿಯಿಂದ ॥
ತಾ ಪುತ್ರನನು ಕರೆಯೆ ಕೇಳಿ ರಕ್ಷಿಸೆ ಶ್ವೇತ-
ದ್ವೀಪವೀ ಧರೆಗೆ ಸಮೀಪವಾಗಿಹುದೆ ? ॥ ೪ ॥

---

೧) ಆ (I) ಇ. ರಘು (೫/೧೦). ಈ ಪ್ರತಿಗಳಿಂದ ತೆಗೆದುಕೊಂಡಿದೆ.

ಅಣು-ಮಹತ್ತುಗಳಲ್ಲಿ ಪರಿಪೂರ್ಣನೆಂದೆನಿಸಿ ।
ಎಣೆಯಿಲ್ಲದ ಮಹಾಗುಣಪೂರ್ಣನು ।।
ಘನಮಹಿಮನಾದ ಶ್ರೀಪುರಂದರವಿಠಲನು ।
ನೆನೆದವರ ಮನದೊಳಗೆ ಇಹನೆಂಬ ಬಿರುದುಂಟು ।। ೫ ।।

೯೪

ರಾಗ—ರೇಗುಪ್ತಿ ತಾಳ—ಅಟ

[೧]ರಂಗ ರಂಗ ಎಂಬ ನಾಮವ ನೆನೆವರ ।
ಸಂಗದೊಳಿರಿಸು ಎನ್ನ ॥ ಪ ॥

ಅಂಗದೊಳ್ಳೈವರು ದೆಸೆದೆಸೆಗೆಳೆಯುವ ।
ಭಂಗವ ಬಿಡಿಸೊ ಹರಿಯೆ—ಸ್ವಾಮಿ ॥ ಅ.ಪ ॥

ಹರೆ ಕೃಷ್ಣ ಎಂದೆಂಬ ಜಿಹ್ವೆ ತಾನಿರುತಿರೆ !
ಬರಿಯೆ ಮಾತಾಡುವೆ ನಾ ॥
ಗುರು-ಹಿರಿಯರ ವಂದನೆಗೆ ಕರ-ಶಿರವಿರೆ !
ಗರುವಹಂಕಾರತನ ॥
ಪರಿಪರಿ ಪುಷ್ಪದಲಿ ಪೂಜಿಸದೆ ಅಚ್ಯುತನ ।
ಮರೆತಿಹೆ ನಾನನುದಿನ ।
ಅರಿವ ನೋಡಿದರೆ ಎನ್ನಲಿ ಕಾಣೆನ್ಯೆ ದೇವ ।
ಮೊರೆಹೊಕ್ಕೆ ಸಲಹೊ ಎನ್ನ—ಸ್ವಾಮಿ ॥ ೧ ॥

ವೇದ ಶಾಸ್ತ್ರ ಪುರಾಣ ನಾಮವ ನೆನೆವರ ।
ಚೋದ್ಯವ ನಾನರಿಯೆನು ॥
ಹಾದಿಬೀದಿ ತಿರುಗುವ ಜಾರಸ್ತ್ರೀಯುಳ್ಳ ಕಂಡು—ವಿ- ।
ನೋದಗಳ ಮಾಡುತಿಹೆನು ।

೧) ಆ (II) ಝ (೩/೧೧) ಪ್ರತಿಗಳಿಂದ ಆರಿಸಿಕೊಂಡಿದೆ.

ಮಾಧವ ಗೋವಿಂದ ಎನ್ನದೆ ಕಾಲನ ।
ಬಾಧೆಗಳಿಗೊಳಗಾದೆನೊ ॥
ಈ ಧರೆಯೊಳಗೆನ್ನ ರಕ್ಷಿಸುವರ ಕಾಣೆ ।
ಶ್ರೀಧರ ನೀನೇ ಸಲಹೊ—ಸ್ವಾಮಿ ॥ ೨ ॥

ಮಡದಿ-ಮಕ್ಕಳಿಗೆಲ್ಲ ಒಡವೆ ಬೇಕೆಂಬುವ ।
ಕಡುಲೋಭತನವ ಬಿಡಿಸೊ ॥
ಅಡಿಗೆ ಅಡಿಗೆ ನಾರಾಯಣನೆಂಬ ನಾಮವನು ।
ನುಡಿವ ನಾಲಗೆಗಿರಿಸೊ ॥
ಪೊಡವಿಯೊಳು ಪುರಂದರ ವಿಠಲರಾಯನೆ ನಿನ್ನ ।
ಅಡಿಯದಾಸನೆನಿಸೊ—ಸ್ವಾಮಿ ॥ ೩ ॥

೯೫

ರಾಗ—ಭೈರವಿ ತಾಳ—ಅಟ

[1]ಈ ಜೀವ ನಿಂದು ಫಲವೇನು ।
ರಾಜೀವಲೋಚನನ ಮರೆದಿಹ ತನುವಿನಲಿ ॥ ಪ ॥

ಅರುಣನುದಯದಲೆದ್ದು ಹರಿಸ್ಮರಣೆಯ ಮಾಡಿ ।
ಗುರು-ಹಿರಿಯರ ಚರಣಕಮಲಕೆರಗಿ ॥
ಪರಮಶುಚಿಯಾಗಿ ನದಿಯಲಿ ಮಿಂದು ರವಿಗರ್ಘ್ಯ ।
ವೆರೆಯದೆ ಮರೆದಿಹ ಈ ಪಾಪಿತನುವಿನಲಿ ॥ ೧ ॥

ಹೊನ್ನ ಗಿಂಡಿಯಲಿ ಅಗ್ರೋದಕವನೆ ತಂದು ।
ಚೆನ್ನಾಗಿ ಹರಿಗೆ ಅಭಿಷೇಕ ಮಾಡಿ ॥
ರನ್ನದುಡಿಗೆಯುಡಿಸಿ ರತುನಗಳಳವಡಿಸಿ ।
ಕಣ್ಣಿರಲು ನೋಡಲರಿಯದ ಪಾಪಿತನುವಿನಲಿ ॥ ೨ ॥

---

೧) ಆ (II) ಪ್ರತಿಯಿಂದಲೆ ತೆಗೆದುಕೊಂಡಿದೆ. ಎ. ಓ ಪ್ರತಿಗಳಲ್ಲಿ ತುಂಬಾ ವಿಕಾರಗೊಂಡಿದೆ.

ನಳನಳಿಸುವ ನಾನಾ ಪುಷ್ಪಗಳು ಶ್ರೀತುಳಸಿ ।
ಹೊಳೆವ ಕಿರೀಟ ಕೊರಳಲಿ ಪದಕ ॥
ನಳಿನಾಕ್ಷನಿಗೆ ಕರ್ಪುರದಾರತಿಯನೆತ್ತಿ ।
ಕಳೆಯ ನೋಡಲರಿಯದ ಪಾಪಿತನುವಿನಲಿ ॥ ೩ ॥

ವರಭಕ್ಷ್ಯಗಳು ಪರಮಾನ್ನ ಶಾಲ್ಯನ್ನವು ।
ವರವಾದ ಮಧು ಘೃತ ಕ್ಷೀರವನ್ನು ॥
ಸಿರಿನಾರಾಯಣಗೆ ಸಮರ್ಪಣೆ ಮಾಡಿ ತಾ- ।
ಎರಡು ಕೈಮುಗಿಯದ ಪಾಪಿತನುವಿನಲಿ ॥ ೪ ॥

ಉರಗಾದ್ರಿ-ಸ್ವಾಮಿಪುಷ್ಕರಣಿಗಳು ಮೊದಲಾದ ।
ಪರಿಪರಿ ತೀರ್ಥಗಳನೆಲ್ಲ ಮಿಂದು ॥
ತಿರುವೆಂಗಳಪ್ಪ ಶ್ರೀಪುರಂದರ ವಿಠಲನ ।
ಚರಣವನು ಭಜಿಸಲರಿಯದ ಪಾಪಿತನುವಿನಲಿ ॥ ೫ ॥

೯೩

ರಾಗ—ಪಂತುವರಾಳಿ ತಾಳ—ಅಟ

[1]ಬರಿದೆ ಬಯಸದಿರಿಹಲೋಕಸುಖವೆಂಬ ಬರಗಿನ ಪಾಯಸವ ।
ಶರಧಿಶಯನನ ಬೇಡೊ ಪರಲೋಕಸುಖವೆಂಬ ಸೇವಗೆ-
ಪಾಯಸವ ॥ ಪ ॥

ಮುಂದರಿಯದೆ ಪಾಳ್ಪ ಮೂಢನೃಪನ ಸೇವೆ ಮುಗ್ಗುರಾಗಿಯ ಹಿಟ್ಟು ।
ಮಂದಮತಿಯೆ ನೀನನ್ಯರಲಿ ಬಯಸುವ ನೀಚಮಾರ್ಗವ ಬಿಟ್ಟು ॥
ಕಂದರ್ಪಜನಕನ ಕಿಂಕರನೆಂಬುವ ಕಲನೋಗರ ಕಟ್ಟು ।
ಸಂದೇಹಿಸದೆ ಪರಾತ್ಪರ ವಸ್ತು ಮುಕುಂದನಂಘ್ರಿಯ ತಟ್ಟು ॥ ೧ ॥

ಅಗ್ಗದಾಸೆಗೆ ಸಂಗ್ರಹಿಸದಿರಘವೆಂಬ ಅಡಿಗಂಟು ದವಸವನು ।
ಬಗ್ಗನುಳಿದು ಸಂಪಾದಿಸು ಪರವೆಂಬ ಪುಣ್ಯದ ದವಸವನು ॥

---

೧) ಆ (೨) (೮). ಪ್ರತಿಗಳಿಂದ ತೆಗೆದುಕೊಳ್ಳಲಾಗಿದೆ ಓ ಪ್ರತಿಯಲ್ಲಿ ಇದ್ದರೂ ಹೇಳಲಾರದಷ್ಟು ವಿಕಾರಗೊಂಡಿದೆ.

ಯೋಗ್ಯರನರಿಯದೆ ಏತಕೆ ಬೇಡುವೆ ಸಾಕಾರ ಕೇಶವನು ।
ಕುಗ್ಗಗೊಡದೆ ಸಂಸಾರವೆಂತೆಂಬುವ ಕೋಟಲೆ ತಪ್ಪಿಸುವನು ॥ ೨ ॥

ಸಕ್ಕರಿ ಚಿಲಿಪಾಲು ಘೃತ ರಾಜಾನ್ನಕೆ ಸವಿಯೀವ ಹರಿಕಥೆಯ - ಬಿಟ್ಟು ।
ಅಕ್ಕರೆಯಿಂದಪೇಕ್ಷಿಸುವರೆ ನೀ ಅಲ್ಪರ ಸಂಗತಿಯ ॥
ಸೊಕ್ಕೊಳಿತಲ್ಲೆಲೊ ಮದಡು ಜೀವಾತ್ಮನೆ ಸ್ವಾಮಿಃಕಾರ್ಯಸ್ಥಿತಿಯ ।
ಗಕ್ಕನರಿತು ಸೇರು ಪುರಂದರವಿಠಲನ ಚರಣಕಮಲದ್ವಿತಯಂ ॥ ೩ ॥

೯೬

ರಾಗ—ಮುಖಾರಿ ತಾಳ—ಅಟ

[1]ಈ ಪರಿಯ ಅಧಿಕಾರ ಒಲ್ಲೆ ನಾನು ।
ಶ್ರೀಪತಿಯೆ ನೀನೊಲಿದು ಏನ ಕೊಟ್ಟುದೆ ಸಾಕು ॥ ಪ ॥

ಚಿರಕಾಲ ನಿನ್ನ ಕಾಯ್ದು ತಿರುಗಿದುದಕೆ ನಾನು ।
ಕರುಣದಲಿ ರಚಿಸಿ ನೀ ಈ ದುರ್ಗದಿ ॥
ಇರಹೇಳಿದುದಕೆ ನಾ ಹೊಕ್ಕು ನೋಡಿದೆ ಒಳಗೆ ।
ಹುರುಳೆ ಲೇಶವು ಕಾಣೆ ಕರಕರೆಯು ಬಲುನೋಡು ॥ ೧ ॥

ದಾರಿಯಲಿ ಹೋಗಿ ಬರುವವರ ಉಪಟಳ ಘನ ।
ಚೋರರಟ್ಟುಳಿಗಂತೂ ನೆಲೆಯೆ ಇಲ್ಲ ॥
ವೈರಿವರ್ಗದ ಜನರು ಒಳಗೆ ಬಲು ತುಂಬಿಹರು ।
ಮೀರಿ ನಿನ್ನಲಿ ಮನವನೂರಿ ನಿಲಗೊಡರು ॥ ೨ ॥

ಸರಿಬಂದ ವ್ಯಾಪಾರ ಮಾಡಿ ತಾವೆನ್ನನು ।
ಬರಿಯ ಲೆಕ್ಕಕೆ ಮಾತ್ರ ಗುರಿಯ ಮಾಡಿ ॥
ಕರಕರೆಯ ಬಡಿಸಬೇಕೆಂದು ಯೋಚಿಸುತಿಹರು ।
ಕರೆದು ವಿಚಾರಿಸಿ ನ್ಯಾಯಮಾಡಿಸು ದೊರೆಯೇ ॥ ೩ ॥

---

೧) ಇ (೧೦) ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ. 'ಎ' ಪ್ರತಿಯ ಮುದ್ರಿತವಾದ ಹಾಡಿನಲ್ಲಿ ಗೋಪಾಲವಿಠಲನೆಂಬ ಮುದ್ರಿಕೆ ಇದೆ.

ನಾಮಾಂಕಿತಕೆ ಮಾತ್ರ ಅಧಿಕಾರವೆನಗಿತ್ತೆ ।
ಸ್ವಾಮಿತ್ವವೋ ನೋಡು ಮನೆಮನೆಯಲಿ ॥
ಭೀಮ ವಿಕ್ರಮರವರು ದುರ್ಬಲಾಗ್ರಣಿ ನಾನು ।
ಗ್ರಾಮ ಒಪ್ಪಿಸಿ ನಮಿಪೆ ಸರಿಬಂದ ತೆರಮಾಡು ॥ ೪ ॥

ಕಾಲಕ್ಕೆ ಕರೆಯ ಬಂದವರಿಗೆ ಒಳಗಾಗಿ ।
ಪಾಳೆಯವನೊಪ್ಪಿಸಿ ಕೊಡುವೆವೆಂದು ॥
ಆಲೋಚಿಸಿಹರಯ್ಯ ಈಗಲೆನಗೆ ನಿನ್ನ ।
ಆಳುಗಳ ಬಲಮಾಡಿ ಎನ್ನ ರಕ್ಷಿಸು ದೊರೆಯೆ ॥ ೫ ॥

ಕ್ಷಣಕೆ ನೂರುಪಟಳ ಈ ಕೋಟೆಗೆಲೊ ರಾಯ ।
ಅನುವಾದ ದಿವಸವೊಂದಾದರಿಲ್ಲ ॥
ಮೊನೆಗಾರ ಜನವಿಲ್ಲ ಇದ್ದವರು ವಶವಿಲ್ಲ ।
ಕೊನೆಗೊಂಡು ಗ್ರಾಮ ಕಾಪಾಡುವ ತೆರನೆಂತೊ ॥ ೬ ॥

ಎನಗೆ ಈ ಬಹುನಾಯಕರ ಕೊಂಪೆಯೊಳು ವಾಸ- ।
ವನು ಬಿಡಿಸಿ ನಿನ್ನ ನಿಜ ಪಟ್ಟಣದೊಳು ॥
ಮನೆ ಮಾಡಿಕೊಡಲು ನಾನಿನ್ನ ನೋಡಿಕೊಳುತ ।
ಅನುಗಾಲ ಬದುಕುವೆನೊ ಪುರಂದರವಿಠಲ ॥ ೭ ॥

## ೯೮

ರಾಗ—ಸುರಟಿ ತಾಳ—ಅಟತಾಳ

೧ಕೊಡುವ ಕರ್ತ ಬೇರೆ ಇರುತಿರೆ-
ಬಿಡುಬಿಡು ಚಿಂತೆಯನು ॥ ಪಲ್ಲ ॥

ಒಡೆಯನಾಗಿ ಮೂಜಗವನು ಪಾಲಿಪ ।
ಬಡವರಾಧಾರಿಯು ಭಕ್ತರ ಪ್ರಿಯನು ॥ ಅ.ಪ ॥

೧) ಇ. ಎ. ಟ ಪ್ರತಿಗಳಿಂದ ಆರಿಸಿಕೊಂಡಿದೆ

ಕಲ್ಲಿನೊಳಗೆ ಇರುವ—ಕಪ್ಪೆಗೆ- ।
ಅಲ್ಲೆ ಉದಕಕೊಡುವ ।
ಎಲ್ಲ ಕೋಟಿ ಜೀವರಾಶಿಗಳನೆ ಕಾಯ್ವ ।
ವಲ್ಲಭ ಶ್ರೀಹರಿ ಎಲ್ಲಿಯು ಇರುತಿರೆ ॥ ೨ ॥

ಆನೆಗೈದುಮಣದಾ—ಆಹಾರವ ।
ತಾನೆ ತಂದು ಕೊಡುವ ।
ದೀನರೊಡೆಯ ಶ್ರೀನಿವಾಸದಯಾನಿಧಿ ।
ಮಾನದಿಂದಲಿ ಕಾಯ್ವ ಭಾನುಕೋಟಿ ತೇಜ ॥ ೨ ॥

ಸರಸಿಜಾಕ್ಷ ತನ್ನ—ಸೇರಿದ ।
ನರರನು ಬಿಡನಣ್ಣ !
ಪರಮದಯಾನಿಧಿ ಭಕುತರ ಸಲಹುವ ।
ಪುರಂದರವಿಠಲನು ಪುಷ್ಪಶರನ ಪಿತ ॥ ೩ ॥



# ೫. ಭಕ್ತಿಭಾವ ಮೀಮಾಂಸೆ

೧ ನಿಶ್ಚಲಪ್ರೇಮ

೨ ಭಕ್ತಸಾಹಚರ್ಯ

೩ ಭಕ್ತಿವಿನೋದ

# ೧ ನಿಶ್ಚಲಪ್ರೇಮ

೯೯

ರಾಗ—ಕಾಪಿ ತಾಳ—ಅಟ

೧ಡಂಬಕ ಭಕುತಿಗೆ ಮೆಚ್ಚಿಕೊಳ್ಳನೊ ಕೃಷ್ಣ—ಹಾರಿ ।
ಡೊಂಬಲಾಗ ಹಾಕಿ ಹೊರಳಿದರಿಲ್ಲ ॥ ಪ ॥

ವಟವಟನೆ ಕಪಿಯಂತೆ ಒದರಿಕೊಂಡರೆ ಇಲ್ಲ ।
ಬೆಟ್ಟದಿಂದಲಿ ಕೆಳಗೆ ಬಿದ್ದರಿಲ್ಲ ॥
ಬಚ್ಚಿಟ್ಟರೆ ಇಲ್ಲ ನಿರ್ಭಾಗ್ಯರ್ಗೆಂದೆಂದು ।
ಅಚ್ಯುತಾನಂತನ ದಯವಿಲ್ಲದೆ ॥ ೧ ॥

ಕೆಟ್ಟೆನೆಂದರು ಇಲ್ಲ ಕ್ಲೇಶಬಟ್ಟರು ಇಲ್ಲ ।
ಸುಟ್ಟ ಸಂಸಾರದೊಳು ಸುಖವು ಇಲ್ಲ ॥
ಕೋಟಲೆಗಂಜಿದರಿಲ್ಲ ಕೊಸರಿಕೊಂಡರು ಇಲ್ಲ ।
ವಿಠಲನ ದೂರಿದರಿಲ್ಲ ವಿಧಿಯ ಬೈದರಿಲ್ಲ ॥ ೨ ॥

ಕನ್ನಹೊಕ್ಕರು ಇಲ್ಲ ಕಡಿದಾಡಿದರು ಇಲ್ಲ ।
ಕುನ್ನಿಯಂತೆ ಮನೆಮನೆಯ ಕೂಗಿದರಿಲ್ಲ ॥
ಹೊನ್ನಿನಾಸೆಗೆ ಹೋಗಿ ಹೊಡೆದುಕೊಂಡರು ಇಲ್ಲ ।
ಪನ್ನಗಾದ್ರಿ ಪುರಂದರವಿಠಲನ ದಯವಿರದೆ ॥ ೩ ॥

೧೦೦

ರಾಗ—ಯದುಕುಲ ಕಾಂಬೋದಿ ತಾಳ—ಆದಿ

೨ಮರುಳಾಟವೇಕೊ—ಮನುಜಾ ।
ಮರುಳಾಟವೇಕೊ ? ॥ ಪ ॥

---

೧) ಆ(VI) ಪ್ರತಿಯೊಂದರಲ್ಲಿಯೆ ಇದೆ.
೨) ಅ (೧), ಇ. ಪ್ರತಿಗಳಿಂದ ಆರಿಸಿದೆ.

ಊರ್ಧ್ವ ಪುಂಡ್ರವಿಲ್ಲದ ಮುಖವ ತಿದ್ದಿ ನೋಡಲೇಕೊ ।
ಶುದ್ಧ ಸಾತ್ತ್ವಿಕವಿಲ್ಲದವನ ಬುದ್ಧಿ ಏತಕೊ ॥
ಕದ್ದು ಹೊಟ್ಟೆಹೊರಕೊಂಬುವಗೆ ಶುದ್ಧ ಶೀಲವೇಕೊ ।
ಮಧ್ವಶಾಸ್ತ್ರ ಓದದವನ ವಿದ್ಯೆ ಏತಕೊ—ಮನುಜಾ ॥ ೧ ॥

ಮೃತ್ತಿಕೆ ಶೌಚವಿಲ್ಲದವಗೆ ಮತ್ತೆ ಸ್ನಾನ-ಜಪವೇಕೊ ।
ಹಸ್ತಕಟ್ಟಲರಿಯದವಗೆ ಅಗ್ನಿಹೋತ್ರವೇತಕೊ ॥
ತೊತ್ತು ಹೋಗುವವಗೆ ಪರತತ್ತ್ವವಿಚಾರವೇಕೊ ।
ಕರ್ತೃ ಕೃಷ್ಣನ ನೆನೆಯದವನ ಉತ್ತಮತನವೇಕೊ ॥ ೨ ॥

ಹಸಿವೆ ತೃಷೆಯು ತಾಳದವನ ಹುಸಿಯು ವೈರಾಗ್ಯವೇಕೊ ।
ವಿಷಯ ಮೆಚ್ಚಿದವಗೆ ಪರದ ಕುಶಲವೇತಕೊ ॥
ಹುಸಿಜಪಗಳ ಮಾಡುವವಗೆ ಮುಸುಕಿನ ಡಂಬಕವೇಕೊ ।
ಕುಸುಮನಾಭಗರ್ಪಿಸದ ಅಶನವೇತಕೊ—ಮನುಜಾ ॥ ೩ ॥

ಸೂಳೆಗಾರನಿಗೆ ತುಳಸಿಮಾಲೆಯು ಶೃಂಗಾರವೇಕೊ ॥
ಶ್ರೀಲೋಲನ ನೆನೆಯದವನ ಬಾಳುವೆಯೇತಕೊ ।
ಮೂಲಮಂತ್ರವರಿಯದವಗೆ ಮೇಲೆ ದೇವತಾರ್ಚನೆ ಏಕೊ ।
ಸಾಲಗ್ರಾಮದಭಿಷೇಕವಿಲ್ಲದ ತೀರ್ಥವೇತಕೊ ಮನುಜಾ ॥ ೪ ॥

ಕಂಡ ನಾರಿಯೀಕ್ಷಿಸುವ ಲಂಡಗೆ ಪುರಾಣವೇತಕೊ ।
ಭಂಡ ಮಾತನಾಡುವನ ಪಾಂಡಿತ್ಯವೇತಕೊ ॥
ಪುಂಡರೀಕವರದ ಶ್ರೀಪುರಂದರವಿಟ್ಠಲನ ।
ಕಂಡು ಭಜಿಸಲರಿಯದವನ ತಂಡ ಬುದ್ಧಿಯೇತಕೋ ॥ ೫ ॥

## ೧೦೧

ರಾಗ—ಧನ್ಯಾಸಿ ತಾಳ—ಆದಿ

[೧]ಒಪ್ಪನಯ್ಯಾ—ಹರಿ—ಮೆಚ್ಚನಯ್ಯಾ ॥ ಪ ॥

ಉತ್ತಮ ತಾನೆಂದುಕೊಂಡು ಉದಯಕಾಲದಲ್ಲಿ ಎದ್ದು ।
ನಿತ್ಯನಿತ್ಯ ನೀರಿನೊಳಗೆ ಕಾಗೆ ಹಾಗೆ ಮುಳುಗುವವಗೆ ॥ ೧ ॥

೧) ಇ (೧೦) ರಘು. (೧/೧೦) ಈ ಪ್ರತಿಗಳಿಂದ ಆಯ್ದುಕೊಂಡಿದೆ.

ಚರ್ಮದ ದೇಹಕ್ಕೆ ಗೋಪಿಚಂದನವ ತೊಡೆದುಕೊಂಡು ।
ಎಮ್ಮೆಯ ರೋಗದ ಬರೆಯು ಹಾಗೆ ಅಡ್ಡತಿಡ್ಡ ಬರೆದ
ಮನುಜಗೆ ॥ ೨ ॥

ಮಾತಿನಲ್ಲಿ ಮತ್ಸರವು ಮನಸಿನೊಳಗೆ ವಿಷದ ಗುಳಿಗೆ ।
ಓತಿಯಂತೆ ಮರದ ಮೇಲೆ ನಮಸ್ಕಾರ ಮಾಡುವವಗೆ ॥ ೩ ॥

ನಿಷ್ಠೆಯುಳ್ಳವ ತಾನೆಂದು ಪೆಟ್ಟಿಗೆ ಮುಂದಿಟ್ಟುಕೊಂಡು ।
ಕೊಟ್ಟಿಗೆಯೊಳಗಿನ ಎತ್ತಿನಂತೆ ನುಡಿಸುವ ಗಂಟೆಯ
ಶಬ್ದಕೆ ಆತ ॥ ೪ ॥

ಏಕೋಭಾವ ಏಕೋಭಕ್ತಿ ಏಕನಿಷ್ಠೆಯಿಂದಲಿ ।
ಬೇಕಾದಂಥ ಮುಕುತಿಯ ನೀಡುವ ಪುರಂದರವಿಠಲನ
ಸ್ಮರಿಸದ ಮನುಜ ॥ ೫ ॥

## ೧೦೨

ರಾಗ—ರೇಗುಪ್ತಿ ತಾಳ—ಆದಿ

[೧]ಹರಿ ನಿನ್ನೊಲುಮೆಯು ಆಗುವತನಕ ।
ಅರಿತು ಸುಮ್ಮಗಿರುವುದೆ ಲೇಸು ॥ ಪ ॥

ಮರಳಿಮರಳಿ ತಾ ಪಡೆಯದ ಭಾಗ್ಯವು ।
ಮರುಗಿದರೆ—ತನಗಾದೀತೆ ? ॥ ಅ.ಪ ॥

ಮೂರು ಬರುವ ನಂಬಿಗೆಯನು ಕೊಟ್ಟರೆ ।
ಮರ್ಜನ ಬರುವುದು ತಪ್ಪೀತೆ ॥
ದೂರ ನಿಂತು ಮೊರೆಯಿಟ್ಟು ಕೂಗಿದರೆ ।
ಚೋರರಿಗೆ ದಯ ಪುಟ್ಟೀತೆ ।

೧) ಅ (೧) ಆ (I). ರ. ೨ ಶ್ರೀ. ಪ್ರತಿಗಳಿಂದ ಆರಿಸಿಕೊಂಡಿದೆ.

ಜಾರನಾರಿ ತಾ ಪತಿವ್ರತೆ ಎನ್ನಲು ।
ಜಾಣರಿಗೆ—ನಿಜ ತೋರೀತೆ ॥
ಊರ ಬಿಟ್ಟು ಬೇರೂರಿಗೆ ಹೋದರೆ ।
ಪ್ರಾರಬ್ಧವು ಬೇರಾದೀತೆ ॥ ೧ ॥

ಪಾಟಪಡುವುದು ಪಣೆಯಲ್ಲಿರಲು ।
ಪಟ್ಟೆಮಂಚ ತನಗಾದೀತೆ ॥
ಹೊಟ್ಟೆಯಲ್ಲಿ ಸುತರಿಲ್ಲೆಂದು ಹೊರಳಲು ।
ಹುಟ್ಟು ಬಂಜೆಗೆ [1]ಮಕ್ಕಳಾದೀತೆ ? ॥
ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ।
ಬೇಟೆಗಾರಗೆ ದಯ ಪುಟ್ಟೀತೆ ॥
ಕೆಟ್ಟ ಹಾವು ತಾ ಕಚ್ಚಿದ ವಿಷವದು ।
ಬಟ್ಟೆಯಲೊರಸಲು ಹೋದೀತೆ ॥ ೨ ॥

ಧನಿಕನ ಕಂಡು ಪಾಡಿ ಪೊಗಳಿದರೆ ।
ದಾರಿದ್ರ್ಯವು ತಾ ಹಿಂಗೀತೆ ॥
ದಿನದಿನ ನೊಸಲೊಳು ನಾಮವನಿಟ್ಟರೆ ।
ದೇವರಿಗೆ ತೃಪ್ತಿಯಾದೀತೆ ॥
ಎಣಿಸಿಕೊಂಡು ಎಳ್ ಹಂಜಿಯ ನೂತರೆ ।
ಅಣೆಯದ ಸಾಲವು ತೀರೀತೆ ॥
ಅನುದಿನದಲಿ ಶ್ರೀಪುರಂದರವಿಠಲನ ।
ನೆನೆಯದಿದ್ದರೆ ಭವ ಹಿಂಗೀತೆ ॥ ೩ ॥

## ೧೧೪

ರಾಗ—ಯಮುನಾಕಲ್ಯಾಣಿ ತಾಳ—ಅಟ

[2]ನಂಬಿ ಕೆಟ್ಟವರುಂಟೆ—ಕೃಷ್ಣಯ್ಯನ ।
ನಂಬಲಾರದೆ ಕೆಟ್ಟದು ॥ ಪ ॥

೧) ಫಲ.

೨) ಕ ವಿ. ವಿ. ತಾಳೆಗರಿಯ ಪುಸ್ತಕದಿಂದ ಪ್ರತಿ ಮಾಡಿದೆ (೦೭೫೦– ನಂ ೧೮೫೮)

ಅಂಬುಜನಾಭನ ಪಾದವ ನೆನೆದರೆ ।
ಇಂಬುಗೊಡದ ದುಃಖ ಹರಿಸುವ ಶ್ರೀಕೃಷ್ಣ ॥ ಅ.ಪ ॥

ಬಲಿಯ ಪಾತಾಳಕಿಳುಹಿ—ಭಕ್ತನ ಬಾ- ।
ಗಿಲವ ಕಾಯುವೆ ನಾನೆಂದ ॥
ಛಲದೊಳು ಅಸುರರ ಶಿರಗಳ ತರಿದು ತಾ ।
ನೊಲಿದು ವಿಭೀಷಣಗೆ ಪಟ್ಟಗಟ್ಟಿದ ಈ ಕೃಷ್ಣ ॥ ೧ ॥

ತರಳ ಪ್ರಹ್ಲಾದಗೊಲಿದು—ಹಿರಣ್ಯಕನ ಉ- ।
ಗುರಿನಿಂದಲೆ ಸೀಳಿದ ॥
ಕರಿರಾಜಗೊಲಿದು ನೆಗಳು ನುಂಗುತಿರಲಾಗ ।
ಪರಿಹರಿಸಿದ ಜಲದೊಳು ಪೊಕ್ಕು ಶ್ರೀಕೃಷ್ಣ ॥ ೨ ॥

ಪಾಂಡವರಿಗೆ ಒಲಿದು—ಕೌರವರನು ।
ತುಂಡು ಛಿದ್ರಮಾಡಿದೆ ॥
ಗಂಡರೈವರ ಮುಂದೆ ದ್ರೌಪದಿ ಕೂಗಲು ।
ಕಂಡು ಕರುಣದಿ ಕಾಯ್ದ ಪುರಂದರವಿಠಲನ ॥ ೩ ॥

## ೧೦೪

ರಾಗ—ಪೂರ್ವಿ ತಾಳ—ಏಕ

[೧]ದಾರಿಯ ತೋರೊ ಮುಕುಂದ—ಹರಿ- ।
ನಾರಾಯಣ ಗೋವಿಂದ ॥ ಪ ॥

ಬಂದೆನು ಬಹುಜನ್ಮದಲಿ—ನಾ- ।
ಬಂಧನದೊಳು ಸಿಲುಕುತಲಿ ॥
ಮುಂದಿನದಾವುದು ಪಯಣ—ತೋರೊ- ।
ಇಂದು ನೀ ಇಂದಿರೆರಮಣ ॥ ೧ ॥

---

೧) 'ಏ' ಪ್ರತಿಯಲ್ಲಿ ಮಾತ್ರವಿದೆ.

ಗತಿಯಿಲ್ಲದವರಿಗೆ ನೀನೆ—ಸದ್- ।
ಗತಿಯೆಂದು ಸ್ತುತಿಮಾಡಿದೆನೊ ॥
ಗತಿಯೆಂದು ನಂಬಿದೆ ನಿನ್ನ ।
ಸತುವ ತೋರು ನರಹರಿಯೆ ಗೋವಿಂದ ॥ ೨ ॥

ಮಡುವಿನೊಳಗೆ ಧುಮುಕಿದೆನೆ—ಇನ್ನು-
ಕಡಹಾಯಿಸುವರ ನಾ ಕಾಣೆ ॥
ಹಡೆದ ತಾಯಿ-ತಂದೆ ನೀನೆ—ಕೈ- ।
ಹಿಡಿದು ಸಲಹೊ ಎನ್ನೊಡೆಯ ಮುರಾರಿ ॥ ೩ ॥

ಮಿಕ್ಕಿ ಬರುವ ಹೊಳೆಯೊಳಗೆ—ನಾನು- ।
ಸಿಕ್ಕಿದೆ ನಡುನೀರೊಳಗೆ ॥
ಕಕ್ಕುಲಾತಿ ನಿನಗಿರದೆ ।
ಭಕ್ತವತ್ಸಲ ನೀ ದಯಮಾಡೋ ॥ ೪ ॥

ಕುಕ್ಷಿಯೊಳಗೆ ಇಂಬಿಟ್ಟು—ಎನ್ನ- ।
ರಕ್ಷಿಸಿ ಸಲಹಬೇಕು ॥
ಅಕ್ಷಯ ಅನಂತ ಮಹಿಮನೆ—ನೀನು ।
ಪಕ್ಷಿವಾಹನನೆ ಪುರಂದರವಿಠಲ ॥ ೫ ॥



## ೨ ಭಕ್ತಸಾಹಚರ್ಯ

### ೧೦೫

ರಾಗ—ಭೈರವಿ ತಾಳ—ಏಕ

೧ನೀನೆ ಬಲ್ಲಿದನೊ—ಹರಿ ನಿನ್ನ- ।
ದಾಸರೆ ಬಲ್ಲಿದರೊ ॥ ಪ ॥

ನಾನಾ ತೆರದಿ ೨ನಿಧಾನಿಸಿ ನೋಡಲು
ನೀನೆ ಭಕ್ತಾಧೀನನಾದ ಮೇಲೆ ॥ ಅ.ಪ ॥

ಜಲಜಭವಾಂಡದ ಒಡೆಯನೆಂದೆನಿಸಲು ।
ಬಲುಬಲು ದೊಡ್ಡವನಹುದಹುದಾದಡೆ ॥
ಅಲಸದೆ ಹಗಲಿರುಳೆನ್ನದೆ ಅನುದಿನ ।
ಬಲಿಯ ಮನೆಯ ಬಾಗಿಲ ಕಾಯ್ದ ಮೇಲೆ ॥ ೧ ॥

ಖ್ಯಾತಿಯಿಂದ ಪುರುಹೂತಸಹಿತ ಸುರ ।
ವ್ರಾತವು ನಿನ್ನನು ಒತ್ತಿ ಓಲೈಸಲು ॥
ಭೂತಳದೊಳು ಸಂಪ್ರೀತಿಗೆ ಸಿಲುಕಿ ನೀ ।
ಪಾರ್ಥನ ರಥಕೆ ಸೂತನಾದ ಮೇಲೆ ॥ ೨ ॥

ಪರಮಪುರುಷಪರಬೊಮ್ಮ ನೀನೆನುತಲಿ ।
ನಿರುತದಿ ಶ್ರುತಿಯು ಕೊಂಡಾಡುತಿರೆ ॥
ವರಪಾಂಡವರರಮನೆಯೊಳು ಊಳಿಗ ।
ಕರೆಕರೆದಲ್ಲಿಗೆ ಪೋದಪೋದ ಮೇಲೆ ॥ ೩ ॥

---

೧) ಆ (VI) (೨) ಝು. ಪ್ರತಿಯಿಂದ ಆರಿಸಿಕೊಂಡಿದೆ.
೨) ವಿಚಾರಿಸಿ.

ಧುರದಲಿ ಪಣೆಯನೊಡೆದ ಭೀಷ್ಮನ ಸಂ- ।
ಹರಿಪೆನೆನುತ ಚಕ್ರವ ಪಿಡಿಯೆ ।
ಹರಿ ನಿನ್ನ ಕರುಣದ ಜೋಡು ತೊಟ್ಟಿರಲವ- ।
ನಿರವ ಕಾಣುತ ಸುಮ್ಮನೆ ತಿರುಗಿದ ಮೇಲೆ ॥ ೪ ॥

ತರಳನು ಕರೆಯಲು ಭರದಿ ಕಂಬದಿ ಬಂದು ।
ನರಮೃಗರೂಪ ಭಕ್ತರ ತೆತ್ತಿಗನೆ ॥
ವರದ ಪುರಂದರವಿಠಲರಾಯ ನಿನ ।
ಸ್ಮರಿಪರ ಮನದಲಿ ಸೆರೆಯು ಸಿಕ್ಕಿದ ಮೇಲೆ ॥ ೫ ॥

## ೧೦೬

ರಾಗ—ಮೋಹನ ತಾಳ—ಝಂಪೆ

[1]ಭಕುತಜನ ಮುಂದೆ ನೀನವರ ಹಿಂದೆ—ಇದಕೆ- ।
ಯುಕುತಿ ಕೈಕೊಳದಯ್ಯ ಗಯಾಗದಾಧರನೆ ॥ ಪ ॥

ಕಟ್ಟೆರಡು ಕೂಡಿ ತಾ ನದಿಸೂಸಿ ಹರಿವಾಗ ।
ಕಟ್ಟುಕ್ಕಿದಾಗ ಹರಿಗೋಲ ಹಾಕೆ ॥
ನೆಟ್ಟನೆ ಜಿಗಿಜಿಗಿದು ದಾಟಿ ತಾ ಪೋಪಾಗ ।
ಹುಟ್ಟು ಮುಂದಲ್ಲದಲೆ ಹರಿಗೋಲು ಮುಂದೆ ? ॥ ೧ ॥

ಕಾಳೆ ಹೆಗ್ಗಾಳೆ ದುಂದುಭಿ ನಾನಾವಾದ್ಯದಿಂ ।
ಓಲಗದಿಂದೈದೆ ಅರಸು ತಾ ಬರುವಾಗ ॥
ಸಾಲಾಗಿ ಬಳಿವಿಡಿದು ಸಂಭ್ರಮದಿ ಇರುವಾಗ ।
ಆಳು ಮುಂದಲ್ಲದೆ ಅರಸು ತಾ ಮುಂದೆ ॥ ೨ ॥

ಉತ್ಸವಮೂರುತಿಯು ಬೀದಿಮೆರೆಯುತ ಬರಲು ।
ಸತ್ಸಂಗತಿಗೆ ಹರಿದಾಸರೆಲ್ಲ ॥

೧) ಆ (VI) ಪ್ರತಿಯಲ್ಲಿ ಪುರಂದರದಾಸರ ಮುದ್ರಿಕೆಯಿಂದ ಇದ್ದು ಎ ಪ್ರತಿಯಲ್ಲಿ ಮಾತ್ರ ವಿಜಯದಾಸರ ಮುದ್ರಿಕೆ ಇದೆ,

ಅಚ್ಚ ಸಿರಿಯರಸು ಸಿರಿಪುರಂದರವಿಠಲನೆ ।
ವತ್ಸ ಮುಂದಲ್ಲದೆ ಧೇನು ತಾ ಮುಂದೆ ? ॥ ೩ ॥

## ೧೦೭

ರಾಗ—ಕಾನಡಾ ತಾಳ—ಅಟ

೧ನಾ ಮುಂದೆ ಕೃಷ್ಣ ನೀ ಎನ್ನ ಹಿಂದೆ—ನಿನ್ನ- ।
ನಾಮವೆ ಕಾಯಿತು ನಾನೇನೆಂದೆ ॥ ಪ ॥

ಸುರತರು ನೀನು ಫಲ ಬಯಸುವೆ ನಾನು ।
ಸುರಧೇನು ನೀನು ಕರೆದುಂಬೆ ನಾನು ॥
ವರಚಿಂತಾಮಣಿ ನೀನು ಪರಿಚಿಂತಿಸುವೆ ನಾನು ।
ಶರಧಿಕ್ಷೀರನು ನೀನು ತರಳನ್ಯೆ ನಾನು ॥ ೧ ॥

ಅನಾಥನ್ಯೆ ನಾನು ಎನಗೆ ಬಂಧುವು ನೀನು ।
ದೀನ ಮಾನವ ನಾನು ದಯವಂತ ನೀನು ॥
ದಾನವಾಂತಕ ನೀನು ಧೇನಿಸುವೆನು ನಾನು ।
ಜ್ಞಾನಗಭೀರ ನೀನು ಅಜ್ಞಾನಿ ನಾನು ॥ ೨ ॥

ಒಂದರೊಳೊಂದೊಂದು ನಿನಗೆ ನಾ ಸಲಿಸುವೆ ।
ಚೆಂದವಾಯಿತು ನಿನ್ನ ಸ್ತುತಿಯಿಂದಲಿ ॥
ತಂದೆ ಪುರಂದರವಿಟ್ಠಲರಾಯ ನೀ ।
ಬಂದೆನ್ನ ಮನದಲ್ಲಿ ನಲಿನಲಿದಾಡೊ ॥ ೩ ॥

## ೧೦೮

ರಾಗ—ಶಂಕರಾಭರಣ ತಾಳ—ತ್ರಿಪುಟ

೨ಎನಗೂ ಆಣೆ—ನಿನಗೂ ಆಣೆ ।
ಎನಗೂ ನಿನಗೂ ಇಬ್ಬರಿಗೂ ಭಕ್ತರಾಣೆ ॥ ಪ ॥

---

೧) ಆ (VI) ಪ್ರತಿಯೊಂದರಲ್ಲಿಯೆ ಇದೆ.

೨) ಅ (ಬಿಡಿ ೪) ಝು (೩/೪). ಶ್ರೀ, ಪ್ರತಿಗಳಿಂದ ಆರಿಸಿಕೊಂಡಿದೆ.

ನಿನ್ನನು ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ—ರಂಗ- ।
ಎನ್ನನು ನೀ ಕೈಬಿಟ್ಟು ಪೋದರೆ ನಿನಗೇ ಆಣೆ ॥ ೧ ॥

ತನು-ಮನ-ಧನದಲಿ ವಂಚಕನಾದರೆ ಎನಗೆ ಆಣೆ—ರಂಗ- ।
ಮನಸು ನಿನ್ನೊಳು ನಿಲಿಸದಿದ್ದರೆ ನಿನಗೆ ಆಣೆ ॥ ೨ ॥

ಕಾಕುಮನುಜರ ಸಂಗವ ಮಾಡಿದರೆನಗೆ ಆಣೆ—ರಂಗ- ।
ಲೌಕಿಕವನ್ನು ಬಿಡಿಸದಿದ್ದರೆ ನಿನಗೆ ಆಣೆ ॥ ೩ ॥

ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ—ರಂಗ- ।
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ॥ ೪ ॥

ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ—ರಂಗ- ।
ಪುರಂದರವಿಠಲ ನೀನೊಲಿಯದಿದ್ದರೆ ನಿನಗೆ ಆಣೆ ॥ ೫ ॥



# ೩ ಭಕ್ತಿವಿನೋದ

## ೧೦೯

ರಾಗ—ಪಂತುವರಾಳಿ  ತಾಳ—ಅಟ

[1]ಕೊಟ್ಟು ಹೋಗೊ ಎನ್ನ ಸಾಲವ—ಕಣ್ಣ- ।
ಬಿಟ್ಟರಂಜುವನಲ್ಲ ಹೊರು ಕಲ್ಲ ಕೃಷ್ಣ ॥ ಪ ॥

ಕಾಲನೂರಿ ಅಡಿಯಿಟ್ಟರೆ—ಭೂ- ।
ಪಾಲನಾಣೆ ನರಸಿಂಗನೆ ॥
ಏಳು ವರ್ಷ ಬಡ್ಡಿ ಮೂಲಸಹಿತವಾಗಿ ।
ತಾಳುವನಲ್ಲವೊ ತಿರುಕ ಹಾರುವನೆ ॥ ೧ ॥

ಕೊರಳುಗೊಯ್ಕ ನೀನು ಸಾಲವ ತೆಗೆದು ।
ತಿರುಗುವುದುಚಿತವೆ ವನವನವ ॥
ಎರಡೇಳು ವರ್ಷಕೆ ಎನಗಿಂದು ಸಿಕ್ಕಿದೆ ।
ಒರಳಿಗೆ ಕಟ್ಟದೆ ಬಿಡುವೆನೆ ಕಳ್ಳ ॥ ೨ ॥

ಬತ್ತಲೆ ನಿಂತರೂ ಬಿಡುವೆನೆ ನಿನ್ನ ।
ಉತ್ತಮ ಗುಣಗಳ ತೋರಿದೆ ॥
ಹತ್ತಿದ್ದ ಕುದುರೆ ಸಹಿತವಾಗಿ ಹಿಡಿತಂದು ।
ಚಿತ್ತದಿ ಕಟ್ಟುವೆ ಪುರಂದರವಿಠಲ ॥ ೩ ॥

## ೧೧೦

ರಾಗ—ಶಂಕರಾಭರಣ  ತಾಳ—ಅಟ

[2]ನೀ ಕೊಡೆ ನಾ ಬಿಡೆ ಕೇಳಯ್ಯ—ಹರಿ- ।
ಗೋಕುಲಪತಿ ಗೋವಿಂದಯ್ಯ ॥ ಪ ॥

---

೧) ಇ (೧೦) ರಲ್ಲಿ ಮಾತ್ರ ಸಿಕ್ಕುತ್ತಿದೆ
೨) ಅ (೮). ಇ (೧೦) ಪ್ರತಿಗಳಿಂದ ತೆಗೆದುಕೊಳ್ಳಲಾಗಿದೆ.

ನೋಡುವೆ ನಿನ್ನನು ಪಾಡುವೆ ಗುಣಗಳ ।
ಕಾಡುವೆ ಬೇಡುವೆ ನಾಡೊಳಗೆ ॥
ಮೋಡಿಯ ಬಿಡು ಕೊಡು ಮೊದಲಿಗೆ ಬಡ್ಡಿಯ ।
ಕಾಡೊಳು ತುರುಗಳ ಕಾಯ್ದರಸನೆ ಹರಿ ॥ ೧ ॥

ಎಂಟಕ್ಷರವಿವೆ ದ್ವಯಸಾಕ್ಷಿಗಳಿವೆ ।
ಗಂಟಿಗೆ ಮೋಸವೆ ದಾಸರಿಗೆ ॥
ಉಂಟುಂಟೆನಿಸುವೆ ಬಂಟರ ಬಾಯಲಿ ।
ತುಂಟತನವ ಬಿಡು ತುಡುಗರರಸನೆ ॥ ೨ ॥

ಅಪ್ಪನೆ ಅಯ್ಯನೆ ಅಮರರಿಗೊಲಿದನೆ ।
ಸರ್ಪನ ಮೇಲೆ ಮಲಗಿಪ್ಪವನೆ ।
ಒಪ್ಪಿಸಿಕೊಟ್ಟರೆ ಪುರಂದರವಿಠಲನೆ ।
ಒಪ್ಪವ ತೋರುವೆ ಒಡೆಯನಿಗೆ ॥ ೩ ॥

## ೧೧೧

ರಾಗ—ನಾದನಾಮಕ್ರಿಯ ತಾಳ—ಅಟ

[೧]ಆರು ಬಿಟ್ಟರು ನಿನ್ನ ಬಿಡದೆ ನಾ ನಂಬಿದೆ ರಾಮರಾಮ—ಸ್ವಾಮಿ - ।
ನೀ ಬಿಟ್ಟರಿನ್ನು ಆಧಾರ ಸೇರಲು ಬೇಕೊ—ರಾಮರಾಮ ॥ ಪ ॥

ತುಂಬಿದ ನದಿಯಲಿ ಹರಿಗೋಲು ಮುಳುಗಿತೊ—ರಾಮರಾಮ—ಅಲ್ಲಿ- ।
ಅಂಬಿಗನಾತೆಯು ಅನುಗಾಲ ತಪ್ಪಿತೊ—ರಾಮರಾಮ ॥ ೧ ॥

ನಂಬಿ ಓಡಿದರೆ ಬಲುಕೊಂಬೆಯು ಮುರಿಯಿತೊ—ರಾಮರಾಮ ಅಲ್ಲಿ- ।
ಹಂಬಲಿಸಿದರೆ ಕೈಹಿಡಿವರ ನಾ ಕಾಣೆ ರಾಮರಾಮ ॥ ೨ ॥

ಹಿಂದೆ ನೋಡಲು ಹೆಬ್ಬಾವಟ್ಟಿ ಬರುತಿದೆ—ರಾಮರಾಮ—ಇಲ್ಲಿ- ।
ಮುಂದೆ ನೋಡಲು ಹೆಬ್ಬುಲಿ ಬಾಯ ತೆರೆದಿದೆ—ರಾಮರಾಮ ॥ ೩ ॥

೧) ಪಿ ಪ್ರತಿಯಲ್ಲಿ ಮಾತ್ರ ಈ ಹಾಡು ಸಿಕ್ಕುತ್ತಿದೆ.

ಇದಕಂಜಿ ಕಡಲ ಮಡುವ ಪೊಕ್ಕೆನೊ ಸ್ವಾಮಿ—ರಾಮರಾಮ—ಅಲ್ಲಿ- ।
ಅದುಭುತವಾದಂಥ ಸೆಗಳು ನುಂಗುತಲಿದೆ—ರಾಮರಾಮ ॥ ೪ ॥

ಶಿಶುವು ತನದಲಿ ಪಶುವ ನೀ ಕಾಯ್ದಿಯೊ—ರಾಮರಾಮ ।
ಅಸಮದಾಕಾರ ಶ್ರೀಪುರಂದರವಿಠಲ—ರಾಮರಾಮ ॥ ೫ ॥

## ೧೧೨

ರಾಗ—ಧನ್ಯಾಸಿ ತಾಳ—ಅಟ

[೧]ಹರಿ ನೀನೇ ಗತಿ ಎಂದು ನೆರೆನಂಬಿದವರನು ।
ಮರೆತಿರುವುದು ನ್ಯಾಯವೆ ? ॥ ಪ ॥

ಗರುಡಗಮನ ನೀ ಸಿರಿಲೋಲನಾಗಿರೆ ।
ಅರಸಿ ಎನ್ನನು ಕಾಯ್ವ ದೊರೆಗಳಿನ್ನಾರಯ್ಯ ॥ ಅ.ಪ ॥

ಮುಟ್ಟಿ ಪೂಜಿಸಿ ನಿನ್ನ ಇಷ್ಟವ ಬೇಡುವ ।
ದೃಷ್ಟಿಯೆನ್ನೊಳಗಿದೆಯೆ ? ॥
ಕಷ್ಟವ ಪಡಲಾರೆ ಸೃಷ್ಟಿಯೊಳಗೆ ಎನ್ನ ।
ದುಷ್ಟಕರ್ಮವ ಬಿಡಿಸಿ ದಿಟ್ಟನೆಂದೆಣಿಸೊ ॥ ೧ ॥

ಭುಜಗಶಯನ ನಿನ್ನ ಭಜಕರ ಹೃದಯದಿ ।
ನಿಜವಾಗಿ ನೀನಿಲ್ಲವೇ ?
ಅಜನ ಪಿತನೆ ಕೇಳು ತ್ರಿಜಗವೆಲ್ಲವು ನಿನ್ನ ।
ಸುಜನಪಾಲಕನೆಂದು ಭಜನೆ ಮಾಳ್ಪುದ ಕಂಡು ॥ ೨ ॥

ಭಾಗವತರರಸನೆ ಯೋಗಿಗಳೊಡೆಯನೆ ।
ಬಾಗಿ ಬಿನ್ನಯಿಪೆ ನಿನ್ನ ॥
ಸಾಗರಶಯನನೆ ನೀಗಿಸಿ ಶ್ರಮವನು ।
ಜಾಗುಮಾಡದೆ ಎನ್ನ ಬೇಗದಿ ಕಾಯಯ್ಯ ॥ ೩ ॥

---

೧) ಮುದ್ರಿತಪ್ರತಿಗಳಲ್ಲಿಯಷ್ಟೆ ಸಿಕ್ಕುತ್ತಿದೆ.

ತುಂಟರೈವರ ತುಳಿದು ಕಂಟಕನೊಬ್ಬನ ಕಳೆದು ।
ಎಂಟು ಮಂದಿಯ ಗರುವವನಳಿದು ॥
ನಂಟ ನೀ ಬಂದೆನ್ನ ಕಂಟಕವನೆ ಬಿಡಿಸಿ ।
ಉಂಟಾದ ವೈಕುಂಠ ಬಂಟನೆಂದೆನಿಸೊ ॥ ४ ॥

ಧರಣಿಯೊಳಗೆ ನೀ ಸುಜನರ ಸಲಹುವ ।
ಬಿರುದು ಪಡೆದವನಲ್ಲವೆ ? ॥
ಸಿರಿರಮಣನೆ ಎನ್ನ ಕರುಣದಿಂದಲಿ ಕಾಯೊ ।
ಪರಮಪುರುಷ ಸಿರಿ ಪುರಂದರವಿಠಲ ॥ ೫ ॥

## ೧೧೨

ರಾಗ—ಕಲ್ಯಾಣಿ ತಾಳ—ಅಟ

[1]ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ ।
ಕಪಟನಾಟಕ ಸೂತ್ರಧಾರಿ ನೀನೆ ॥ ಪ ॥

ನೀನು ಆಡಿಸಲು ಜಡವೊನಕೆ ಅಭಿನಯಬೊಂಬೆ ।
ಏನುಬಲ್ಲದು ಬೇರೆ [2]ವಿಕೃತಿಯನೊಂದ ॥
ನೀನಿಟ್ಟ ಸೂತ್ರದಿಂದಲುಗೆ ಕೈಕಾಲುಗಳು ।
ನೀನೆ ಮುಗ್ಗಿಸಲು ಮುಗ್ಗುವ ದೇಹ ತಾನಾಗೆ ॥ ೧ ॥

ಒಂದೆಂಟು ಬಾಗಿಲುಗಳುಳ್ಳ ಪಟ್ಟಣಕೆ ತನ- ।
ಗೆಂದು ಇಪ್ಪತ್ತಾರು ಮನೆಯಾಳ್ಗಳ ॥
ತಂದು ಕಾವಲು ನಿಲಿಸಿ ಎನ್ನ ನೀನೊಳಗಿಟ್ಟು ।
ಮುಂದೆ ಭವಭವದಿ ದಣಿಪುದು ನಿನ್ನದನ್ಯಾಯ ॥ ೨ ॥

ಯಂತ್ರವಾಹಕ ನೀನೆ ಒಳಗೆ ಇದ್ದೂ ಎನ್ನ—ಸ್ವ- ।
ತಂತ್ರನೆಂದೆನಿಸಿ ಕೊಲಿಸುವರೆ ಹೇಳೊ ॥

---

೧) 'ಏ' ಝ. ಮ, ಶ್ರೀ. ಪ್ರತಿಗಳಿಂದ ಆರಿಸಿದೆ. 'ಓ' ಪ್ರತಿಯ ಪಾಠಾಂತರಗಳು ವಿಕಾರಗೊಂಡಿವೆ.

೨) ತಪವ (ಮ)

ಕಂತುಪಿತ ಲಕ್ಷ್ಮೀಶ ಎಂತಾದಡಂತಹುದ- ।
ನಂತಮೂರುತಿ ನಮ್ಮ ಪುರಂದರವಿಠಲ ॥ ೩ ॥

## ೧೧೩

ರಾಗ—ಸೌರಾಷ್ಟ್ರ ತಾಳ — ಅಟ

[1]ಏನೆಂತೊಲಿದೆ ಇಂತವರಂತೆ ಕೆಡುಬುದ್ಧಿ—ಎನ್ನೊಳಿಲ್ಲ—ಗುಣ-।
ಹೀನರಲ್ಲದ ದೀನಜನರ ಪಾಲಿಪ ಬುದ್ಧಿ ನಿನ್ನೊಳಿಲ್ಲ ॥ ಪಲ್ಲ ॥

ತರಳ ಪ್ರಹ್ಲಾದನಂದದಿ ನಿನ್ನಯ ರೂಪ ಕೆಡಿಸಲಿಲ್ಲ ।
ನರನಂತೆ ತನ್ನ ಬಂಡಿಯ ಬೋವನ ಮಾಡಿ ಹೊಡಿಸಲಿಲ್ಲ ॥
ಸುರನದೀಸುತನಂತೆ ಪಣೆಯೊಳು ಬಾಣವ ನೆಡಿಸಲಿಲ್ಲ ।
ದೊರೆ ಅಂಬರೀಷನಂದದಿ ಈರೈದು ಜನ್ಮವ ಪಡಿಸಲಿಲ್ಲ ॥ ೧ ॥

ನಾರದನಂತೆ ಕಾಡವರ ಕೊಂಡೆಯವ ನಾ ಪೇಳಲಿಲ್ಲ ।
ಪರಾಶರನಂತೆ ನದಿಯೊಳಂಬಿಗ ಹೆಣ್ಣ ಕೂಡಲಿಲ್ಲ ॥
ಆ ರುಕುಮಾಂಗದನಂತೆ ಸುತನ ಕೊಲ್ಲಲು ದೃಢವಾಡಲಿಲ್ಲ ।
ಮಾರುತನಂತೆ ನೀನುಣುತಿದ್ದ ಎಡೆಯ ಕೊಂಡೋಡಲಿಲ್ಲ ॥ ೨ ॥

ವಿದುರನಂತೆ ನನ್ನ ಸದನವ ಮುರಿದು ನಾ ಕುಣಿಯಲಿಲ್ಲ ।
ಮದಕರಿಯಂತೆ ಮಕರಿಯ ಬಾಯೊಳು ಸಿಕ್ಕಿ ಒದರಲಿಲ್ಲ ॥
ಹೆದರದೆ ಬಲಿಯಂತೆ ಭೂಮಿಯ ಧಾರೆಯನೆರೆಯಲಿಲ್ಲ ।
ಸದರ ಮಾತುಗಳಾಡಿ ಶಿಶುಪಾಲನಂತೆ ನಾ ಜರೆಯಲಿಲ್ಲ ॥ ೩ ॥

ಸನಕಾದಿಮುನಿಯಂತೆ ಅನುದಿನ ಮನದೊಳು ಸ್ಮರಿಸಲಿಲ್ಲ ।
ಇನಸುತ ಕಪಿಯಂತೆ ವಂಚಿಸಿ ವಾಲಿಯ ಕೊಲಿಸಲಿಲ್ಲ ॥
ಬಿನುಗು ಬೇಡತಿಯಂತೆ ಸವಿದುಂಡ ಹಣ್ಣ ನಾ ತಿನಿಸಲಿಲ್ಲ ।
ಘನ ಅಜಾಮಿಳನಂತೆ ಸುತನ ನಾರಗನೆಂದು ಕರೆಯಲಿಲ್ಲ ॥ ೪ ॥

---

೧) ಏ. ಪ್ರತಿಯಲ್ಲಿ ಇದಕ್ಕೆ ೭ ನುಡಿಗಳಿದ್ದು ಅ. ಮತ್ತು ಶ್ರೀ. ಪ್ರತಿಗಳಲ್ಲಿ ೩ ನುಡಿಗಳಿವೆ. ಇವುಗಳಲ್ಲಿಯೂ ಭಿನ್ನತೆ ಇದೆ,

ವರ ಶೌನಕನಂತೆ ನಿತ್ಯ ಸೂತನ ಕಥೆ ಕೇಳಲಿಲ್ಲ ।
ಪಿರಿದು ತುಂಬುರುನಂತೆ ನಾಟ್ಯ-ಸಂಗೀತವ ಪೇಳಲಿಲ್ಲ ॥
ಉರಗಾಧಿಪತಿಯಂತೆ ಉದರದೊಳಿಟ್ಟು ನಾ ತೂಗಲಿಲ್ಲ ।
ಪಿರಿದು ಕುಚೇಲನ ತೆರನಂತೆ ಅವಲಕ್ಕಿ ಈಯಲಿಲ್ಲ ॥ ೫ ॥

ಭೃಗುಮುನಿಯಂತೆ ಗರ್ವದಿ ನಿನ್ನ ಎದೆಯನು ಒದೆಯಲಿಲ್ಲ ।
ಅಗಣಿತ ಮಹಿಮ ನೀನಹುದೆಂದು ಧ್ರುವನಂತೆ ಪೊಗಳಲಿಲ್ಲ ॥
ಖಗರಾಜನಂತೆ ನಿನ್ನನು ಪೊತ್ತು ಗಗನದಿ ತಿರುಗಲಿಲ್ಲ ।
ಅಗಜೆಯರಸನಂತೆ ಮಸಣದಿ ರಾಮನ ಸ್ಮರಿಸಲಿಲ್ಲ ॥ ೬ ॥

ಅವಹಿತದಲಿ ವಿಭೀಷಣನಂತೆ ಅಣ್ಣನ ಕೊಲಿಸಲಿಲ್ಲ ।
ಯುವತಿ ದ್ರೌಪದಿಯಂತೆ ಪತ್ರಶಾಕವನುಣಬಡಿಸಲಿಲ್ಲ ॥
ತವೆ ಪುಂಡಲೀಕನಂದದಿ ಇಟ್ಟಿಗೆಯ ಮೇಲೆ ನಿಲಿಸಲಿಲ್ಲ—ದೇವ ।
ಇವರಂತೆ ಪುರಂದರವಿಠಲ ನಿನ್ನಯ ಕೃಪೆಯೆನ್ನೊಳಿಲ್ಲ ॥ ೭ ॥

## ೧೧೪

ರಾಗ—ಮೋಹನ ತಾಳ—ಅಟ

[೧]ಕೇಳು ಕೋಪಿಸ ಬೇಡ ಪೇಳಲಿಕಂಜುವೆ ।
ಬಾಳು ಬಡತನವ ನಾನು ॥ ಪ ॥

ತಲೆಗೊಯ್ಕ ಹಿರಿಯ ಮಗ ಇಳೆಗೆ ಪೂಜಿತನಲ್ಲ ॥
ಬಲು ಭಂಡ ನಿನ್ನಯ ಕಿರಿಯ ಮಗ ॥
ಲಲನೆಯು ಸೇರಿದಳು ಬಲು ಲೋಭಿಗಳ ಮನೆಯ ।
ಹೊಲೆಕುಲವರಿಯಳು ನಿನ್ನ ಸೊಸೆಯು ರಂಗ ॥ ೧ ॥

ಮಗಳ ಮಾರ್ಗವು ಡೊಂಕು ಮೈದುನ ಗುರುದ್ರೋಹಿ ।
ಮಗನ ಮಗನು ಚಾಡಿಗಾರ ।

---

೧) ರಘು (೭) ಪ್ರತಿಯಿಂದ ಆರಿಸಿಕೊಂಡಿದೆ.

ಹಗರಣಕೆ ನೀಚರ ಹಣ್ಣು ಮೆದ್ದೆಂಜಲ ।
ಜಗದೊಡೆಯನೆನಿಸಿಕೊಂಡೆ—ನೀನುಂಡೆ ॥ ೨ ॥

ಲಕ್ಷ್ಮೀಪತಿಯು ಎನಿಸಿ ಭಿಕ್ಷೆಬೇಡಲು ಪೋದೆ ।
ಪಕ್ಷಿಯ ಮೆಗಲೇರಿ ರಾಜನೆನಿಸಿದೆ ॥
ಸಾಕ್ಷಾತು ಪುರಂದರವಿಠಲನೆ ನಿನ್ನ ಗುಣ- ।
ಲಕ್ಷಣ ಪೇಳಲಳವೆ—ಕಳವೆ ॥ ೩ ॥

## ೧೧೫

ರಾಗ—ಸೌರಾಷ್ಟ್ರ ತಾಳ—ಛಾಪು

[1]ವಾಸುದೇವ ನಿನ್ನ ಮರ್ಮ ಕರ್ಮಂಗಳ ।
ದೇಶದೇಶದೊಳು ಹೇಳಲೆ ? ॥ ಪ ॥

ಬೇಸರಿಯದೆ ಎನ್ನ ಹೃದಯಕಮಲದಲ್ಲಿ ।
ವಾಸವಾಗಿ ಸುಮ್ಮನಿರುವೆಯೊ ? ॥ ಅ.ಪ ॥

ಮತ್ಸ್ಯರೂಪನಾಗಿ ಮನಸು ಕಾಣಿಸಿಕೊಂಡು
ಮಕ್ಕಳ ತಿದ್ದಿದ್ದು ಹೇಳಲೆ ?
ಉತ್ಸಾಹದಿಂದ ನಿಗಮವ ತಂದು ಬ್ರಹ್ಮಗೆ
ಮೆಚ್ಚಿ ಕೊಟ್ಟದ್ದು ನಾ ಹೇಳಲಿ ? ॥ ೧ ॥

ಕಡೆಗೋಲ ಮಂಡೆಯಂದದಿ ಕೈಕಾಲು ಮು-
ದುಡಿಕೊಂಡದ್ದು ನಾ ಹೇಳಲೆ ?
ಕಡಲೊಳಗಿಂದ ಪಾತಾಳಕೆ ಇಳಿದಿಳೆ
ಪಡೆದಾತನ ಸುದ್ದಿ ಹೇಳಲೆ ? ॥ ೨ ॥

ಹುಚ್ಚು ಮನಸುಮಾಡಿ ಕಚ್ಚುತ ಕೆದರುತ
ರಚ್ಚೆಯಿಕ್ಕಿದ ಸುದ್ದಿ ಹೇಳಲೆ ?
ಮುಚ್ಚಿದ ಭೂಮಿಯ ಹಲ್ಲಿಂದ ಕಿತ್ತಿದ
ಹೆಚ್ಚುತನವ ನಾನು ಹೇಳಲೆ ? ॥ ೪ ॥

---

೧) ಆ (೨) ಪ್ರತಿಯಲ್ಲಿಯಷ್ಟೆ ಸಿಕ್ಕಿದೆ. 'ಇ' ಪ್ರತಿಯಲ್ಲಿ ವಿಕಾರಗೊಂಡಿದೆ

ಕಂದನ ಮಾತಿಗೆ ಕಡುಕೋಪದಿಂ ಬಂದು
ಕಂಬವನೊಡೆದದ್ದು ಹೇಳಲೆ ?
ಕುಂದದೆ ಹಿರಣ್ಯಕಶಿಪುವಿನುದರ ಸೀಳಿ
ಕರುಳ್ಮಾಲೆ ಧರಿಸಿದ್ದು ಹೇಳಲೆ ? ॥ ೪ ॥

ಬಾಲನಾಗಿ ಬ್ರಹ್ಮಚಾರಿವೇಷವ ತೋರಿ
ಬಲಿಯ ಬೇಡಿದುದನು ಹೇಳಲೆ ?
ಲೀಲೆಯಿಂದಲಿ ಧರೆಯ ಈರಡಿಮಾಡಿದ
ಜಾಲತನವನು ನಾನು ಹೇಳಲೆ ? ॥ ೫ ॥

ಹೆಸರಿಲ್ಲದೆ ಹೋಗಿ ಹೆತ್ತತಾಯ್ ತಲೆಕುಟ್ಟಿ
ಕೊಡಲಿಯ ಪಿಡಿದದ್ದು ಹೇಳಲೆ ?
ಸೋಸಿ ದೈತ್ಯರನೆಲ್ಲ ರೋಸಿ ಪ್ರಾಣವ ಕೊಂಡ
ದೋಷತನವ ನಾನು ಹೇಳಲೆ ? ॥ ೬ ॥

ತಾಯ ಮಾತನೆ ಕೇಳಿ ತಮ್ಮನ ಒಡಗೂಡಿ
ಅಡವಿಯೊಳಿದ್ದದ್ದು ಹೇಳಲೆ ?
ಮಾಯಾಸೀತೆಗಾಗಿ ರಾವಣನನು ಕೊಂದು
ಮಹಿಮೆಯ ನೆರೆದದ್ದು ಹೇಳಲೆ ? ॥ ೭ ॥

ತರಳತನದಲಿ ದುರುಳನಾಗಿ ಬಂದ
ಒರಳೆಳೆತಂದದ್ದು ಹೇಳಲೆ ।
[ಬೆರಳಿಂದ ಗಿರಿಯೆತ್ತಿ ಕಂಸನ ಕೊಂದ ಆ]
ದುರುಳತನದ ಸುದ್ದಿ ಹೇಳಲೆ ॥ ೮ ॥

.... ... ... ....
.... .... .... ....
... .... .... ....
(೯ನೆಯ ನುಡಿ ಹರಿದುಹೋಗಿದೆ) ॥ ೯ ॥

ರಾಯರಾವುತನಾಗಿ ರಾಯರ ಮನೆ ಪೊಕ್ಕು
ಕಡುಗವ ಪಿಡಿದದ್ದು ಹೇಳಲೆ ?
ಆಯತದಿಂದ ಕಲಿಯಲಿದ್ದು ಮನುಜರ
ಮಾಯವ ತೋರಿದ್ದು ಹೇಳಲೆ ? ॥ ೧೦ ॥

ಧರೆಯೊಳಧಿಕವಾದ ಉರಗಗಿರಿಯಲ್ಲಿ
ಸ್ಥಿರವಾಗಿ ನಿಂತದ್ದು ಹೇಳಲೆ ?
ಕರುಣದಿಂ ಭಕುತರ ಹೊರೆವ ಪುರಂದರ
ವಿಠಲನೆಂದು ನಾ ಹೇಳಲೆ ? ॥ ೧೧ ॥

## ೧೧೭

ರಾಗ—ಕಾಂಬೋದಿ ತಾಳ—ಝಂಪೆ

[೧]ಆರು ಬದುಕಿದರಯ್ಯ ಹರಿ ನಿನ್ನ ನಂಬಿ ।
ತೋರೊ ಈ ಜಗದೊಳಗೆ ಒಬ್ಬರನು ಕಾಣೆ ॥ ಪ ॥

ಕಲಹಬಾರದ ಹಾಗೆ ಕರ್ಣನನು ನೀ ಕೊಂದೆ ।
ಸುಲಭದಲಿ ಕೌರವರ ಮನೆಯ ಮುರಿದೆ ॥
ನೆಲನ ಬೇಡಲು ಪೋಗಿ ಬಲಿಯ ತಲೆಯನು ತುಳಿದೆ ।
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ ॥ ೧ ॥

ಕರಪತ್ರದಿಂದ ತಾಮ್ರಧ್ವಜನ ತಂದೆಯನು ।
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ ॥
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ ।
ಅರಿತು ನರಕಾಸುರನ ಹೆಂಡಿರನು ಬೆರೆದೆ ॥ ೨ ॥

ತಿರಿದುಂಬ ದಾಸರ—ಕೈಲಿ ಕಪ್ಪವ ಕೊಂಬೆ ।
ಗರುಡವಾಹನ ನಿನ್ನ ಚರಿಯವರಿಯೆ ॥
ದೊರೆ ಪುರಂದರವಿಠಲ ನಿನ್ನನ್ನು ನಂಬಿದರೆ ॥
ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ॥ ೩ ॥

---

೧) ಆ (೧) ಇ. ಟ ಪ್ರತಿಗಳಿಂದ ಆರಿಸಿಕೊಂಡಿದೆ

# ೬. ಭಕ್ತಿಜ್ಞಾನವಿವೇಕ

೧ ಭಕ್ತಿಭಾವ ಪರಿಣಾಮ

೨ ಇದುಭಾಗ್ಯ ಇದುಭಾಗ್ಯ

೩ ಸುಲಭಪೂಜೆ

೪ ಭಕ್ತಿನಿರ್ಭರಿತ

೫ ಶುಭಂ ಮಂಗಲಂ!

# ೧ ಭಕ್ತಭಾವ ಪರಿಣಾಮ

## ೧೧೮

## ಉಗಾಭೋಗ

### (೧)

೧ನವರತ್ನಗಳು ಕಂಡ ರಾವಿನಲಿ ಉಂಟೆ ।
ನವವಿಧಭಕುತಿ ಕಂಡವರಿಗುಂಟೆ ದೇವ ।
ನಿನ್ನ ಭಕುತಿ ಸುರ್‍ರನೆ ಸುರಿದುಕೊಂಡರೆ ಬಾರದು ।
ಕಲಿತರೆ ಬಾರದು ಪುರಂದರವಿಠಲನ ಒಲುಮೆಯಾಗದನಕ

### (೨)

ಶ್ವಾನನ ಕಂಕುಳೊಳಿಟ್ಟು ವಾರಣಾಸಿಗೆ ಪೋದಂತೆ ।
ಮಾನವಾ ಕೇಳು ಮದ-ಮತ್ಸರಗಳ ಬಿಡದೆ ।
ಏನ ಮಾಡಿದರೇನು ವ್ಯರ್ಥವಲ್ಲವೆ ? ।
ಜ್ಞಾನಿ ಪುರಂದರವಿಠಲನ ನೆನೆ ಕಾಣೊ ಮರುಳೇ

### (೩)

ಹರಿಯ ಭಜಿಸಬೇಕು ಮನಮುಟ್ಟಿ ।
ಭಜಿಸಿದರೆ ತನ್ನ ಕಾರ್ಯವೆ ಗಟ್ಟಿ ।
ಇಲ್ಲದಿದ್ದರೆ ತಾಪತ್ರಯವು ಬೆನ್ನಟ್ಟಿ ।
ಯಮದೂತರೆಳೆವರು ಹೆಡಮುಡಿಗಟ್ಟಿ ।
ಪುರಂದರವಿಠಲನ ಕೋಪದ ದೃಷ್ಟಿ ।
ಹರಿಯ ಭಜಿಸಬೇಕು ಮನಮುಟ್ಟಿ ॥

---

೧) ಆ (VI) ಪ್ರತಿಯಿಂದ ಆರಿಸಿಕೊಡಿಂದೆ.

(೪)

ಜಗವು ನಿನ್ನೊಳಗೆ ನೀನು ಎನ್ನೊಳಗೆ ।
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು ।
ಜಗವ ಸುತ್ತಿಹುದೆಲ್ಲ ನಿನ್ನ ಮಾಯೆಯಯ್ಯ ।
ನಿನ್ನ ಸುತ್ತಿಹುದೆಲ್ಲ ಎನ್ನ ಮಾಯೆಯಯ್ಯ ।
ಕರಿಯು ಕನ್ನಡಿಯೊಳು ಅಡಗಿಹ ತೆರನಂತೆ ।
ನೀ ಎನ್ನೊಳು ಅಡಗಿರೊ ಪುರಂಪರವಿಠಲ

(೫)

ಏಕಾನೇಕ ಮೂರುತಿ ಲೋಕವೆಲ್ಲ ಮೂರುತಿ ।
ಸನಕಾದಿಗಳಲ್ಲಿ ಸಾನ್ನಿಧ್ಯಮೂರುತಿ ।
ಮುನಿಗಳಲ್ಲಿ ಮಿನುಗುವ ಮೂರುತಿ ।
ನಮ್ಮ ಘನಮಹಿಮ ಬೊಮ್ಮ ಮೂರುತಿ ।
ಪುರಂದರವಿಠಲನೇ ಕಾಣಿರೊ ।

(೬)

ಚಂದಿರಗಿಂತಿನ್ನು ನಿಂದಿರೆ ತೆರಪಿಲ್ಲ ।
ಸೂರ್ಯನಿಗಿಂತಿನ್ನು ತಿರುಗಿಹೋಯಿತು ಹೊತ್ತು ।
ಬೊಮ್ಮಾದಿಗಳಿಗೆಲ್ಲ ರುದ್ರಾದಿಗಳಿಗೆಲ್ಲ ।
ಒಂದು ಉತ್ತರನಾಡಲು ತೆರಪಿಲ್ಲ ।
ಈ ದೇವರನೆಲ್ಲ ಒತ್ತಿ ಆಳುವ ನಮ್ಮ ।
ಪುರಂದರವಿಠಲ ಕಟ್ಟರಸು ಕಾಣಿರೊ

## ೧೧೯

ರಾಗ—ಸೌರಾಷ್ಟ್ರ ತಾಳ—ಆಟ

[೧]ಅಂತರಂಗದಲಿ ಹರಿಯ ಕಾಣದವ ತಾ ಹುಟ್ಟುಗುರುಡನೊ ।
ಸಂತತ ಶ್ರೀಕೃಷ್ಣಚರಿತೆ ಕೇಳದವ ಜಡಮತಿಯ ಕಿವುಡನೊ—
ಎಂದೆಂದಿಗೂ ॥ ಪ ॥

---

೧) ಆ (II) ೯ (೧೦) ಛ. ಝ (೨/೧೦ ೬/೧೦). ಈ ಪ್ರತಿಗಳಿಂದ ತೆಗೆದುಕೊಂಡಿದೆ.

ಹರುಷದಿಂದಲಿ ಮುರಹರನ ಪೂಜೆಯ ಮಾಡದವನೆ
ಕೈಮುರಿದವನೊ ।
ಕುರುವೀರಸೂತನ ಮುಂದೆ ಕೃಷ್ಣಾ ಎಂದು ಕುಣಿಯ
ದವನೆ ಕುಂಟನೊ ॥
ನರಹರಿ ಪಾದೋದಕ ಧರಿಸದ ಶಿರ ನಾಯುಂಡ
ಹಂಚು ಕಾಣೊ ।
ಸುರವರ ಕೃಷ್ಣಪ್ರಸಾದವಿಲ್ಲದ ಊಟ ಸೂಕರ-
ಭೋಜನವೋ ॥ ೧ ॥

ಅಮರೇಶಕೃಷ್ಣಗರ್ಪಿತವಲ್ಲವ ಕರ್ಮ ಅಸತಿಯ
ವ್ರತನೇಮವೊ ।
ರಮೆಯರಸಗೆ ಪ್ರೀತಿಯಿಲ್ಲದ ವಿತ್ತವು ರಂಡೆ-
ಕೊರಳಸೂತ್ರವೊ ॥
ಕಮಲನಾಭನ ಪೊಗಳದ ಸಾರಸಂಗೀತ
ಗಾರ್ದಭರೋದನವೊ ।
ಮಮತೆಯಿಂದಲಿ ಕೇಶವಗೆ ನಮಸ್ಕಾರ ಮಾಡದವನೆ
ಮೃಗವೊ ॥ ೨ ॥

ಜರೆ ಹುಟ್ಟು ಮರಣವ ತಡೆವ ಸುದ್ದಿಯ ಬಿಟ್ಟು ಸುರೆಯ
ಸುರಿಯಬೇಡವೊ ।
ಸುರಧೇನು ಇರಲಾಗಿ ಶ್ವಾನನ ಮೊಲೆಹಾಲ ಕರೆದು
ಕುಡಿಯಬೇಡವೊ ॥
ಕರಿ ರಥ ತುರಗವೇರಲು ಇದ್ದು ಕೆಡಹುವ ಕತ್ತೆ ಏರಲಿ
ಬೇಡವೊ ।
ಪರಮ ಪುರುಷ ಪುರಂದರವಿಠಲನಿರಲು ನರರ-
ಭಜಿಸ ಬೇಡವೊ ॥ ೩ ॥

## ೧೨೦

ರಾಗ—ಕಾಂಬೋದಿ ತಾಳ—ಝಂಪೆ

[೧]ಜ್ಞಾನವಂತರಿಗೆ ವಿಧಿ ಕಾಡುವುದು ಸತ್ಯ—ಅ- ।
ಜ್ಞಾನಿ ಮೂಢರಿಗೆ ಹರಿ ನಿನ್ನ ಬಲವಯ್ಯ ॥ ಪ ॥

ಹಿಂದೆ ಹರಿಶ್ಚಂದ್ರನ ಅರಣ್ಯವನೆ ಸೇರಿಸಿತು ।
ಮುಂದಾಗಿ ಕುಳಿತಿತ್ತು ಕರಿರಾಜಗೆ ॥
ಚೆಂದದಲಿ ಪಾಂಡವರ ಅರಣ್ಯ ಸೇರಿಸಿತು ।
ಸುಂದರಿಯ ಸೀತೆಯನು ಲಂಕೆಯೊಳಗಿಟ್ಟಿತು ॥ ೧ ॥

ಚಂದ್ರಂಗೆ ವಿಧಿ ಕಾಡಿ ಸರ್ಪ ತಾ ನುಂಗಿತು ।
ಇಂದ್ರಂಗೆ ವಿಧಿ ಕಾಡಿ ಅಂಗ ಭಗವಾಯಿತು ॥
ಚಂದ್ರಶೇಖರನನ್ನು ಸುಡುಗಾಡ ಸೇರಿಸಿತು ।
ಇಂದಿದನು ತಿಳಿದರೆ ನರರ ಪಾಡೇನು ॥ ೨ ॥

ವಿಧಿ ಕಾಡುವಾ ಕಾಲಕಿಲ್ಲದ್ದೆಲ್ಲವು ಬಂತು ।
ವಿಧಿ ಕಳವು ಸುಳ್ಳು ಹಾದರ ಕಲಿಸಿತು ॥
ವಿಧಿ ಬೇನೆ ಚಳಿಯುರಿಯು ರೋಗಂಗಳನೆ ತಂತು ।
ವಿಧಿಯ ಗೆದ್ದವ ನಮ್ಮ ಪುರಂದರವಿಠಲ ॥ ೩ ॥

## ೧೨೧

ರಾಗ—ಕಾಂಬೋದಿ ತಾಳ—ಆದಿ

[೨]ಈಸಬೇಕು—ಇದ್ದು—ಜಯಿಸಬೇಕು ।
ಹೇಸಿಕೆ ಸಂಸಾರದಲ್ಲಿ ಲೇಶ ಆಶೆ ಇಡದ ಹಾಗೆ ॥ ಪ ॥

---

೧) ರಘು (೬). ಪ್ರತಿಯಿಂದ ತೆಗೆದುಕೊಂಡಿದೆ. ಶ್ರೀ. ಪ್ರತಿಯಲ್ಲಿ ಇದು ವಿಕಾರಗೊಂಡಿದೆ.

೨) ರಘು (೨) ಟ. ಪ್ರತಿಗಳಿಂದ ಎತ್ತಿ ಬರೆದಿದೆ.

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು ।
ಸ್ವಾಮಿರಾಮನೆನುತ ಪಾಡಿ ಕಾಮಿತವ ಕೈಕೊಂಬರೆಲ್ಲ ॥ ೧ ॥

ಗೇರುಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ ।
ಮೀರಿ ಆಶೆ ಮಾಡದ ಹಾಗೆ ಧೀರ ಕೃಷ್ಣನ ನೆನೆಯುವರೆಲ್ಲ ॥ ೨ ॥

ಮಾಂಸದಾಶೆಗೆ ಮತ್ಸ್ಯವು ಸಿಲುಕಿ ಹಿಂಸೆಪಟ್ಟಪರಿಯೊಳು ।
ಮೋಸ ಹೋಗದೆ ಪುರಂದರವಿಠಲ ಜಗದೀಶನೆನುತ
ಕೊಂಡಾಡುವರೆಲ್ಲ ॥ ೩ ॥

## ೧೨೨

ರಾಗ—ಪಂತುವರಾಳಿ ತಾಳ—ಅಟ

[೧]ಬಂದೆಯಾ ಪರಿಣಾಮದಿ—ನಿನ್ನ- ।
ಬಂಧು-ಬಳಗವನೆಲ್ಲ ಬಿಟ್ಟು ಸನ್ಮಾರ್ಗದಿ ॥ ಪ ॥

ಸಂಚಿತ ಪ್ರಾರಬ್ಧ ಕರ್ಮಂಗಳನೆಲ್ಲ ।
ಕಿಂಚಿತುಮಾಡಿ ಸಂಕೋಲೆಯ ಹಾಕಿ ॥
ಮಿಂಚುವ ಧನ–ಪುತ್ರ-ದಾರೇಷಣಂಗಳ ।
ವಂಚಿಸಿ ಕವಲುದಾರಿಯ ಬಿಟ್ಟು ಮಾರ್ಗದಿ ॥ ೧ ॥

ಕಾಮವ ಖಂಡಿಸಿ ದ್ರೋಹವ ದಂಡಿಸಿ ।
ನಾಮರೂಪ ಕರ್ಮಂಗಳ ನಿಂದಿಸಿ ॥
ತಾಮಸಕರ್ಮ ನಡತೆಯ ತಗ್ಗಿಸಿ ನಿರ್- ।
ನಾಮ ಮಾಡಿ ಮದ-ಮತ್ಸರಂಗಳ ನೀಗಿ ॥ ೨ ॥

ಅಷ್ಟಭೋಗಂಗಳ ನಷ್ಟಂಗಳ ಮಾಡಿ ।
ಅಷ್ಟೈಶ್ವರ್ಯವ ಮಟ್ಟು ಮಾಡಿ ॥
ಅಷ್ಟಪ್ರಕೃತಿಗಳ ಕುಟ್ಟಿ ಕೆಡಹಿ ಬಹಳ ।
ನಷ್ಟತುಷ್ಟಿಗಳಲ್ಲಿ ದೃಷ್ಟಿಯೇನಿಲ್ಲದೆ ॥ ೩ ॥

---

೧) ಆ (VI) ಪ್ರತಿಯಲ್ಲಿ ಸಿಕ್ಕುತ್ತಿದೆ.

ಸ್ಥೂಲ ಸೂಕ್ಷ್ಮ ಕಾರಣ ದೇಹಂಗಳನೆಲ್ಲ ।
ಬೀಳುಗೆಡಹಿ ಪಂಚಭೂತಂಗಳ ॥
ಪಾಳುಮಾಡಿ ಪಂಚ ಪಂಚ ಇಂದ್ರಿಯಗಳ ।
ಕೋಳಕೆ ತಗುಲಿಸಿ ಕೊನಬುಗಾರನಾಗಿ ॥ ೪ ॥

ಹೊಳೆವ ಪ್ರಪಂಚದ ಬಲೆಯು ಬೀಸಿ ಸಂಗ- ।
ಡಲೆ ಸಾಗಿ ಬರುತಿಹ ದಾರಿಯೊಳು ॥
ಒಲಿದು ಮುಕ್ತಿಯನೀವ ಪುರಂದರವಿಠಲನು ।
ಬಲವನಿತ್ತುದರಿಂದೆ ನಾನು ನೀನೆನ್ನದೆ ॥ ೫ ॥

## ೧೨೩

## ಸುಳಾದಿ

ಧ್ರುವತಾಳ

[1]ತಾಯಿ ಲಕುಮಿ ತಂದೆ ವಿಟ್ಠಲ ।
ದಾಯಿಗ ಚತುರಾನನ ।
ವಾಯುತನುಜನು ರಕ್ಷಕನು ಸ- ।
ಹಾಯಿಗಳು ದೇವತೆಗಳು ।
ಮಾಯಿ ಅವರ ಮನೆದೊತ್ತು ರಘು- ।
ರಾಯನ ಡಿಂಗರಿಗರಿಗೆ ಏನಯ್ಯ ।
ಚತುರ್ದಶ ಭುವನಂಗಳಲ್ಲಿ ।
ಪ್ರತಿಕಕ್ಷಿಗಳಿಲ್ಲಿವರಿಂಗೆ ।
ಪುರಂದರವಿಠಲರಾಯನ ।
ಶರಣರ ಭಾಗ್ಯವಿನ್ನೆಂತೊ ! ॥ ೧ ॥

---

೧) ಇ (೮) ಓ. ಜ (೧–೨) ಪ್ರತಿಗಳಿಂದ ಆರಿಸಿಕೊಂಡಿದೆ.

ಮಟ್ಟೆತಾಳ

ಒಡಲೊಳು ಪೋಗುವನ್ನಕ ।
ಎರೆವರೊ ನಾಮಸುಧೆಯ
ಕೊಡುವರು ಮುಕುತಿಯ ।
ತಡೆವರು ಭವಸಿಂಧುವ ।
ಒಡೆಯ ಮುಕುಂದನ ।
ಒಡನಾಡಿಸಿ ತೋರ್ಪರು ।
ಕೊಡುವರು ಮುಕುತಿಯ ।
ತಡೆವರು ಭವಸಿಂಧುವ ।
ಮೃಡಸಖ ಪುರಂದರವಿಠಲನ ದಾಸರು ।
ಕೊಡುವರು ಮುಕುತಿಯ
ತಡೆವರು ಭವಸಿಂಧುವ ॥ ೨ ॥

ತ್ರಿವಿಡಿ

ನಿನ್ನನೆ ಪಾಡುವೆ ನಿನ್ನನೆ ಪೊಗಳುವೆ ।
ನಿನ್ನನೆ ಬೇಡಿ ಬೇಸರಿಸುವೆ ರಂಗಯ್ಯ ।
ನಿನ್ನ ಕಾಲಪಿಡಿವೆ ನಿನ್ನ ಹಾರಯಿಸುವೆ ।
ನಿನ್ನ ತಂಬುಲಕೆ ಕೈಯಾನುವೆ ರಂಗಯ್ಯ !
ನಿನ್ನಂತೆ ಸಾಕಬಲ್ಲ ಸ್ವಾಮಿ ಉಂಟೇ ದೇವ ।
ನಿನ್ನಾಣೆ ಪುರಂದರವಿಠಲರಾಯ ॥ ೩ ॥

ಅಟತಾಳ

ಅಚ್ಯುತನ ಭಕುತಿಗೆ ಆವನ ಮನ ।
ಮೆಚ್ಚದು ಅವ ಪಾಪಿ, ಆವನೊಳಾಡೆ
ನೋಡೆ ನುಡಿಸೆ ।
ಮನುಜವೇಷದ ರಕ್ಕಸನವ___ ।
ಆವನೊಳಾಡೆ ನೋಡೆ ನುಡಿಸೆ ।

ಸಚ್ಚಿದಾನಂದ ಪುರಂದರವಿಠಲನ ।
ತೊತ್ತಿನ ತೊತ್ತಿನ ಮಗನೆನ್ನದವನೊ- ।
ಳಾಡೆ ನೋಡೆ ನುಡಿಸೆ ! ॥ ೪ ॥

ಆದಿತಾಳ

ನಿನ್ನಾಳೆಂದಡೆ ಎನ್ನನು ಹರಿ
ಇನ್ನೇನಿನ್ನೇನಿನ್ನೇನು ।
ಎನ್ನ ಸಾಕದಿರಲು ಇನ್ನು ನಗರೆ
ನಿನ್ನ ದಾಸರು ? ।
ಎನ್ನಲಿದ್ದವ ನೀನಾದೆ—
ನಿನ್ನ ದಾಸನು ನಾನಾದೆ ।
ಘನ್ನಮಹಿಮ ಪುರಂದರವಿಠಲ ।
ಇನ್ನು ಸಾಕದಿಹರೆ ? ।

ಜತೆ

ಲಕುಮಿಯ ರಮಣನೆ ಲಕುಮಿಯಾಭರಣನೆ ।
ಲಕುಮಿಪರಾಯಣನೆ ಪುರಂದರವಿಠಲ ॥ ೬ ॥

## ೧೨೪

ರಾಗ—ಕಲ್ಯಾಣಿ ತಾಳ—ಅಟ

[1]ಒಂದೇ ಕೂಗಳತೆ—ಭೂ-ವೈಕುಂಠ- ।
ಸಂದೇಹವಿಲ್ಲವು ಸಾಧು-ಸಜ್ಜನರಿಗೆ ॥ ಪ ॥

ಅಂಬರೀಷನು ದ್ವಾದಶಿವ್ರತ ಮಾಡಲು ।
ಡೊಂಬೆಯ ಮಾಡಿದ ದುರ್ವಾಸನು ।
ಕುಂಭಿನೀಪತಿ ಕೃಷ್ಣ ಕಾಯಬೇಕೆನುತಲೆ ।
ಇಂಬಿಟ್ಟು ಚಕ್ರದಿ ಮುನಿಶಾಪ ಕಳೆದುದು ॥ ೧ ॥

೧) ಕ. ವಿ. ವಿ. ತಾಳೆಗರಿಯಿಂದ ತೆಗೆದುಕೊಂಡಿದೆ. (೧೭೯೦ ಸಂ. ೧೮೫೪)
ಅ (೮). ಆ (II) ಇ (೧೦) ಶ್ರೀ ಪ್ರತಿಗಳಲ್ಲಿ ನುಡಿಗಳು ವಿಕಾರಗೊಂಡಿವೆ.

ಕರಿರಾಜ ವನದಲಿ ಉಳುಹೆಂದು ಕೂಗಲು ।
ತ್ವರಿತದಿಂದಲಿ ಬಂದು ಕಾಯ್ದ ತಾನು ॥
ಕರುಣಸಾಗರ ಕೃಷ್ಣ ಕಾಯಬೇಕೆನುತಲೆ ।
ತರಳ ಪ್ರಹ್ಲಾದನ ಕಂಬದಿ ಬಂದುದು ॥ ೨ ॥

ದ್ರುಪದರಾಯನ ಪುತ್ರಿಗಾಪತ್ತು ಬರಲು ।
ಕೃಪೆಯಿಂದಲಕ್ಷಯವಿತ್ತನು ॥
ಕಪಟನಾಟಕ ಕೃಷ್ಣ ಪುರಂದರವಿಠಲನ ।
ಗುಪಿತದಿ ನೆನೆವರ ಹೃದಯವೇ ವೈಕುಂಠ ॥ ೩ ॥



## ೨ ಇದು ಭಾಗ್ಯ ಇದು ಭಾಗ್ಯ !

### ೧೨೫

ರಾಗ—ಕಾಂಬೋದಿ ತಾಳ—ಝಂಪೆ

[1]ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ।
ಪದುಮನಾಭನ ಪಾದ ಭಜನೆ ಸುಖವಯ್ಯ ॥ ಪ ॥

ಕಲ್ಲಾಗಿ ಇರಬೇಕು ಕಠಿನ ಭವತೊರೆಯೊಳಗೆ ।
ಬಿಲ್ಲಾಗಬೇಕು ಬಲ್ಲವರ ಒಳಗೆ ॥
ಮೆಲ್ಲನೇ ಮಾಧವನ ಮನದಿ ಮೆಚ್ಚಿಸಬೇಕು ।
ಬೆಲ್ಲವಾಗಿರಬೇಕು [2]ಭಕುತಜನರೊಳಗೆ ॥ ೧ ॥

ಬುದ್ಧಿಯಲಿ ತನ್ನ ಮನ ತಿದ್ದುತ್ತಲಿರಬೇಕು ।
ಮುದ್ದಾಗಬೇಕು ಮುನಿಯೋಗಿಗಳಿಗೆ ॥
ಮಧ್ವಮತದಬ್ಧಿಯೊಳು ಮೀನಾಗಿ ಇರಬೇಕು ।
ಶುದ್ಧ ಭಕುತಿಯ ಸುಕೃತ ಉಣಲುಬೇಕು ॥ ೨ ॥

ವಿಷಯಭೋಗದ ತೃಣಕೆ ಉರಿಯಾಗಿ ಇರಬೇಕು ।
[3]ಕುಶಲದಲಿ ಶ್ರೀಹರಿಯ ನೆನೆಯಬೇಕು ॥
ವಸುಧೆಯೊಳು ನಮ್ಮ ಶ್ರೀಪುರಂದರವಿಠಲನ ।
ಹಸನಾಗಿ ನೆನೆನೆನೆದು ಸುಖಿಯಾಗಬೇಕು ॥ ೩ ॥

### ೧೨೬

ರಾಗ—ಸಾವೇರಿ ತಾಳ—ಝಂಪೆ

[4]ಒಳಿತು ಈ ಶಕುನ ಫಲವಿಂದು ನಮಗೆ ।
ಜಲಜನಾಭನ ಸಂಗ ದೊರಕುವುದೆ ರಮಣಿ ॥ ಪ ॥

---

೧) ಅ (೧೧) ರಿಂದ ತೆಗೆದುಕೊಂಡಿದೆ. ೨) ಬಂಧುಜನರೊಳಗೆ (ಎ, ಓ).
೩) ನಿಶಿ ಹಗಲು (ಬಹುಮತ)
೪) ಅ (೮) ರಿಂದ ಈ ಹಾಡನ್ನು ತೆಗೆದುಕೊಂಡಿದೆ.

ವಾಮಗರುಡನ ನೋಡು ವಾಯಸದ ಬಲವನ್ನು ।
ಕೋಮಲಾಂಗಿಯರ್ತೈದು ಪೂರ್ಣಕುಂಭ ॥
ಸಾಮಾನ್ಯವೇ ಗೌಳಿ ಬಲಕಾಗಿ ನುಡಿಯುತಿದೆ ।
ಪ್ರೇಮದಲಿ ಮಧುರವಚನವ ಕೇಳು ರಮಣಿ ॥ ೧ ॥

ಮೊಳಗುತಿವೆ ಭೇರಿ ದುಂದುಭಿ ಘಂಟೆ ವಾದ್ಯಗಳು ।
ಫಲ ಪುಷ್ಪ ದಧಿಗಳಿದಿರಾಗುತಿದೆಕೊ ॥
ಚೆಲುವ ಭಾರದ್ವಾಜ ಪಕ್ಷಿ ಬಲವಾಗುತಿದೆ ।
ಬಲುಹಂಗ ಎಡವಾಗುತಿದೆ ನೋಡು ಕೆಳದಿ ॥ ೨ ॥

ನೋಡು ದ್ವಯಬ್ರಾಹ್ಮಣರು ಇದಿರಾಗಿ ಬರುವುದನು ।
ಕೂಡಿದುವು ಮನದ ಸಂಕಲ್ಪವೆಲ್ಲ ॥
ಬೇಡಿದ ವರಗಳೀವ ಪುರಂದರವಿಠಲನ ।
ನೋಡಿ ಸಂತೋಷದಲಿ ನೆರೆವೆನೆಲೆ ರಮಣಿ ॥ ೩ ॥

## ೧೨೭

ರಾಗ—ಪೂರ್ವಿ ತಾಳ—ರೂಪಕ

[೧]ಹುಚ್ಚು ಹಿಡಿಯಿತೊ—ಎನಗೆ—ಹುಚ್ಚು ಹಿಡಿಯಿತು ॥ ಪ ॥
ಅಚ್ಯುತನ ನಾಮವೆಂಬ ಮೆಚ್ಚುಮದ್ದು ತಲೆಗೆ ಏರಿ ॥ ಅ.ಪ ॥

ವಾಸುದೇವನೆಂಬ ನಾಮ ವದನದಲ್ಲಿ ಒದರುವೆ—ಮಾಯ- ।
ಪಾಶವೆಂಬ ಬಲೆಯು ಹರಿದು ಹರಿದು ಬಿಸುಡುವೆ ॥
ಕೇಶವನ ಹೂವ ಎನ್ನ ಮುಡಿಗೆ ಮುಡಿಸುವೆ—ಭವದ ।
ಕ್ಲೇಶವೆಂಬ ಗೋಡೆಯನ್ನು ಕೆದರಿಕೆದರಿ ಬಿಸುಡುವಂಥ ॥ ೧ ॥

ಕೃಷ್ಣನಂಘ್ರಿ ಕಮಲಗಳಲಿ ನಲಿದುನಲಿದು ಬೀಳುವೆ—ಭವ- ।
ಕಷ್ಟವೆಂಬ ಕುಂಭಗಳನು ಒಡೆದುಒಡೆದು ಹಾಕುವೆ ॥

---

೧) ಅ (೧೧) ಆ (I) ಇ. ಏ. ಶ್ರೀ, ಪ್ರತಿಗಳಿಂದ ಆರಿಸಿದೆ.
೨) ಧ್ಯಾನ (ಏ).

ನಿಷ್ಠುರನ್ನು ಕಂಡರವರ ಹಿಂದೆಹಿಂದೆ ತಿರುಗುವೆ ।
ಭ್ರಷ್ಟ ಮನುಜರನ್ನು ಕಂಡು ಕಲ್ಲು-ಕಲ್ಲಿಲಿಕ್ಕುವಂಥ ॥ ೨ ॥

ಮಂದಮತಿಗಳನ್ನು ಕಂಡರೆ ಮೂಕನಾಗುವೆನು — ಹರಿಯ ।
ನಿಂದೆ ಮಾಡುವವರ ಮೇಲೆ ಮಣ್ಣು ಚೆಲ್ಲುವೆ ॥
ಮಂದರಾದ್ರಿಧರನ ದಿನದೊಳನಶನನಾಗುವೆ ಎನ್ನ ।
ತಂದೆ ಪುರಂದರವಿಠಲನ ಪೊಗಳಿ ಪಾಡಿ ಆಡುವಂಥ ॥ ೩ ॥

## ೧೨೮

ರಾಗ—ದೇಶಿಕತೋಡಿ ತಾಳ—ರೂಪಕ

೧ಇದೀಗ ಭಕುತಿಯು—ಮು- ।
ತ್ತಿದೀಗ ಮುಕುತಿಯು ॥ ಪ ॥

ಮಧುದ್ವಿಷನ ಪದಕಮಲಕೆ ।
ಮಧುಪನಂತೆ ಎರಗುತಿಹುದು ॥ ಅ.ಪ ॥

ಶ್ರೀಕಾಂತ ಮೂರುತಿ ಬಾಹ್ಯಾಂತರದಿ ।
ಏಕಾಂತದಿ ನೆನೆದಾನಂದ ತುಳುಕಾಡಿ ॥
ಮುಖವಿಕಾಸದಿ ತನುವ ಮರೆದು ।
ವಿಕಳಭಾವದಿ ಉಬ್ಬುಬ್ಬಿ ಕುಣಿವುದು ॥ ೧ ॥

ಡಂಭವ ಸಾರುವರತ್ತತ್ತ ಜಡಿದು ।
ಕುಂಭಕ ರೇಚಕ ಪೂರಕವಿಡಿದು ॥
ಅಂಬುಧಿಶಾಯಿ ಪದಾಂಬುಜವೀಕ್ಷಿಸಿ ।
ಬಿಂಬವ ಕಾಂಬುವ ಹಂಬಲವಿಡುವುದು ॥ ೨ ॥

ಕಂಡವರ ಕಾಲಿಗೆ ಕುಮನುಜರಿಗೆ ।
ಮಂಡೆಯ ಬಾಗದೆ ಪರೇಶ ಕೊಟ್ಟಷ್ಟು ॥

೧) ಅ (C). ಹ. ಪ್ರತಿಗಳಿಂದ ಆರಿಸಿದೆ.

ಉಂಡು ಸಜ್ಜನರ ಕಂಡು ಸುಖಿಸಿ ಪಾ- ।
ಷಂಡ ಸಂಭಾಷಣೆ ಸೋಕದೆ ಬಾಳ್ವುದು ॥ ೩ ॥

ತಪುತಾರ-ಕಂಬುಲಾಂಛನ ಪಿಡಿದು ।
ಗುಪಿತ ಮಂತ್ರಗಳೊರೆವ ಗುರುಗ- ॥
ಳುಪದೇಶ ಕ್ರಮವ ಮೀರದೆ ಇತರ ।
ಕಪಟಬಿಟ್ಟು ನಲಿದು ಸುಖಿಪುದು ॥ ೪ ॥

ಸದ್ಭಕ್ತಿ ಸದ್ಧರ್ಮ ಮಾಡುತ ನೋಡುತ ।
ಸದ್ವಿಷ್ಣು ಸಚ್ಛಾಸ್ತ್ರ ಹೇಳುತ ಕೇಳುತ ॥
ದುಗ್ಧಸಮುದ್ರೇಶ ಪುರಂದರವಿಠಲಗೆ ।
ಇದ್ದ ಸಂಪದವ ತಪ್ಪದೆ ಒಪ್ಪಿಸುವುದು ॥ ೫ ॥



# ೩ ಸುಲಭಪೂಜೆ

## ೧೨೯

ರಾಗ—ಕಾಂಬೋದಿ ತಾಳ—ಝಂಪೆ

[೧]ಸುಲಭಪೂಜೆಯ ಕೇಳಿ ಬಲವಿಲ್ಲದವರು ।
ಕಾಲಕಾಲದ ಕರ್ಮ ಕಮಲಾಕ್ಷಗರ್ಪಿಸಿರಿ ॥ ಪ ॥

ಇರುಳು ಹಚ್ಚುವ ದೀಪ ಹರಿಗೆ ನೀರಾಜನವು ।
ಮರುವುಡುವ ಧೋತರವು ಪರಮವಸ್ತ್ರ ॥
ತಿರುಗಾಡಿ ದಣಿಯುವುದು ಹರಿಗೆ ಪ್ರದಕ್ಷಿಣೆಯು ।
ಮರಳಿ ಹೊಡಮರುಳ್ವುದು [೨]ನೂರೆಂಟು ದಂಡ ॥ ೧ ॥

ನುಡಿವ ಮಾತುಗಳೆಲ್ಲ ಪಾಂಡುರಂಗನ ಜಪವು ।
ಮಡದಿ-ಮಕ್ಕಳು ಎಲ್ಲ ಒಡನೆ ಪರಿವಾರ ॥
ನಡುಮನೆಯ ಅಂಗಳವು ಉಡುಪಿ ಭೂವೈಕುಂಠ ।
ಎಡಬಲದ ಮನೆಯವರು ಕಡುಭಾಗವತರು ॥ ೨ ॥

ಹೀಗೆ ಈಪರಿಯಲ್ಲಿ ನಿತ್ಯ ನೀವದಿತಿರಲು ।
ಜಗದೊಡೆಯ ಶ್ರೀಕೃಷ್ಣ ದಯವ ತೋರುವನು ॥
ಬೇಗದಿ ತಿಳಿದು ಕೇಳಿ ಹೋಗುತಿದೆ ಆಯುಷ್ಯ ।
ಯೋಗಿ ಪುರಂದರವಿಠಲ ಸಾರಿ ಪೇಳಿದನು ॥ ೩ ॥

## ೧೩೦

ರಾಗ—ಕಾಂಬೋದಿ ತಾಳ—ಝಂಪೆ

[೩]ಅಂಜಲೇತಕೆ [೪]ಮನವೆ ಅನುಗಾಲವು ।
ಕಂಜನಾಭನ ಭಕುತಿ ಕೈಕೊಂಡ ಬಳಿಕ ॥ ಪ ॥

---

೧) ಅ (೭), ಆ (II, VI) ಇ. (೧೦). ಛ. ಪ್ರತಿಗಳಿಂದ ಆರಿಸಿದೆ.
೨) ದೀರ್ಘದಂಡ. (ಛ).
೩) ಆ (VI). ಇ. ಖ ೧. ಇವುಗಳಿಂದ ತೆಗೆದುಕೊಂಡಿದೆ.
೪) ಜೀವ (ಝ ೭)

ನಾರಾಯಣನೆಂಬ ನಾಲ್ಕು ಅಕ್ಷರದಿಂದ ।
ಘೋರಪಾಪವನೆಲ್ಲ ಕಳೆಯಬಹುದು ॥
ಶ್ರೀರಾಮನಾಮವೆಂಬ ಸಿಂಗಾಡಿ ತಕ್ಕೊಂಡು ।
ವೈರಿಷಡ್ವರ್ಗಗಳ ವಧೆ ಮಾಡಬಹುದು ॥ ೧ ॥

ಶ್ರೀಕೇಶವನೆ ಎಂಬ ಸಿದ್ಧಮಂತ್ರಗಳಿಂದ
೧ಕಾಕುಕರ್ಮಗಳನ್ನು ಕಳೆಯಬಹುದು ॥
ವೈಕುಂಠಪತಿ ಎಂಬ ವಜ್ರವನೆ ತಕ್ಕೊಂಡು ।
ನೂಕಿ ಯಮಬಂಟರನು ನುಗ್ಗು ಮಾಡಲುಬಹುದು ॥ ೨ ॥

ಹರಿ ವಾಸುದೇವನೆಂಬ ಅಮೃತಪಾನಗಳಿಂದ ।
ಮರಣ-ಜನನಗಳೆರಡ ಜಯಿಸಬಹುದು ॥
ಅರಿತರೆ ಮನದೊಳಗೆ ಪುರಂದರವಿಠಲನ ।
ಸರಸ ಸದ್ಗತಿಯನ್ನು ಸವಿಗಾಣಬಹುದು ॥ ೩ ॥

## ೧೩೧

ರಾಗ—ಶಂಕರಾಭರಣ ತಾಳ—ರೂಪಕ

೨ಧಾನ್ಯ ದೊರಕಿತು—ಎನಗೆ- ।
ಧನವು ದೊರಕಿತು ॥ ಪ ॥

ಓಣಿಯೊಳಗೆ ಹೋದ ಮಾ- ।
ಣಿಕದ ಹರಳು ದೊರಕಿತೋ ! ॥ ಅ.ಪ ॥

ಕಟ್ಟಿ ಹಗೆಯ ಹಾಕುವುದಲ್ಲ ।
ಒಟ್ಟಿ ಕೆಸರ ಬಡಿಯುವುದಲ್ಲ ॥

---

೧) ಘೀಕರದ ಭೂತಗಳ ಜಯಿಸಬಹುದು. (ಓ) ಬೇಕಾದ ದೋಷಗಳ ಬೇಯಿಸಬಹುದು (ಎ).

೨) ಅ (೫/೧೭) ಮತ್ತು ಶ್ರೀ. ಪ್ರತಿಗಳಲ್ಲಿಯಷ್ಟೆ ಸಿಕ್ಕುತ್ತಿದೆ.

ಮುಟ್ಟಿ ಹಿರಿದು ಮೋಯಿಸಿದರೊಂ- ।
ದಿಷ್ಟು ಸೂಡು ಸವಿಯುಲಿಲ್ಲ ॥ ೧ ॥

ಹರಿದು ಗೋಣಸು ಹಚ್ಚುವುದಲ್ಲ ।
ಮುರಿದು ಸಣ್ಣಗೆ ಮಾಡುವುದಲ್ಲ ॥
ಅರಿದು ಇದನು ಪೇಟೆಗೆ ಒಯ್ದರೆ ।
ಕರೆದು ಬೆಲೆಯನು ಕಟ್ಟುವುದಲ್ಲ ॥ ೨ ॥

ಪಾಲುಪಸುಗೆ ಹಂಚುವುದಲ್ಲ ।
ಮೋಲೆ ಚಾರರು ಒಯ್ಯುವುದಲ್ಲ ॥
ಶ್ರೀಲೋಲ ಪುರಂದರವಿಠಲನ ।
ಮೂಲನಾಮ ದೊರಕಿತಲ್ಲ ॥ ೩ ॥

## ೧೩೩

ರಾಗ—ಪಂತುವರಾಳಿ ತಾಳ--ಅಟ

[೧]ವ್ಯಾಪಾರವೆನಗಾಯಿತು ।
ಶ್ರೀಪತಿಯ ಪಾದಾರವಿಂದ ಸೇವೆಯೆಂಬ ॥ ಪ ॥

ಹರಿಕರುಣವೆಂಬಂಗಿ ಗುರುಕರುಣ ಮುಂಡಾಸು ।
ಹರಿದಾಸರ ದಯವೆಂಬ ಒಲ್ಲಿ ॥
ಪರಮಪಾಪಗಳೆಂಬ ಪಾಪೋಸವನೆ ಮೆಟ್ಟಿ ।
ದುರುಳಾತ್ಮರಾದವರ ಎದೆ ಮೇಲೆ ನಡೆವಂಥ ॥ ೧ ॥

ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ ।
ನಾಲಗೆಯೆಂಬ ಲೆಕ್ಕಣಿಕೆ ॥
ಶ್ರೀಲೋಲನ ದಿವ್ಯನಾಮವೆಂಬುವ ಲೆಕ್ಕ ।
ಶೀಲದಿ ಬರೆದು ಶ್ರೀಹರಿಗೆ ಒಪ್ಪಿಸುವಂಥ ॥ ೨ ॥

---

೧) ಆ. (೮) ಇ. ಕ, ಶ್ರೀ. ಪ್ರತಿಗಳಿಂದ ಆರಿಸಿ ಬರೆಯಲಾಗಿದೆ.

ನುಡಿನುಡಿಗಾನಂದಬಾಷ್ಪ ರೋಮಾಂಚನ ।
ಮುಡುಪಿನೊಳಗೆ ಇಟ್ಟ ಕೈಜೀತವು ॥
ಕಡಮೆ ಸಂಬಳಕೆಲ್ಲ ಮುಕ್ತಿಸಾಧನವನ್ನು ।
ಕೊಡುವ ತೆರನಂತೆ ಚೀಟಿ ಬರೆಸಿಕೊಟ್ಟ ॥ ೩ ॥

ಹಿಂದಿನ ಸಂಸಾರ ಆಗಮನದ ಭಯ ।
ಎಂದೆಂದಿಗದರ ಚಿಂತೆಯು ಬಿಟ್ಟಿತು ॥
ಮುಂದಿನ ಸಂಸಾರ ಸ್ಥಾನಭಾರಕೆಲ್ಲ ।
ಸಂದಾಯವನು ಮಾಡಿ ಕತಬಿ ಹರಿಸಿಕೊಟ್ಟ ॥ ೪ ॥

ಕಂಡಕಂಡವರ ಕಾಲುಗಳಿಗೆರಗಿ ನನ್ನ ।
ಮಂಡೆ ದಡ್ಡುಗಟ್ಟಿ ಬಳಲಿದೆನೊ ।
ಪುಂಡರೀಕಾಕ್ಷ ಶ್ರೀ ಪುರಂದರವಿಠಲನು ।
ಕಂಡು ವೀಳೆಯ ಕೊಟ್ಟು ತನ್ನ ಸೇವೆಗೆ ಇಟ್ಟ ॥ ೫ ॥



# ೪ ಭಕ್ತಿನಿರ್ಭರತೆ

## ೧೩೪

ರಾಗ—ಮಧ್ಯಮಾವತಿ                                                     ತಾಳ—ಆದಿ

[1]ಬಂದದ್ದೆಲ್ಲವು ಬರಲಿ—ಗೋ- -
ವಿಂದನ ದಯ ನಮಗಿರಲಿ ॥ ಪ ॥

ಮಂದರಧರ ಗೋವಿಂದ ಮುಕುಂದನ ।
ಸಂದರುಶನ ನಮಗೊಂದೇ ಸಾಲದೆ ? ॥ ಅ.ಪ ॥

ಆರು ಅರಿಯದಿರಲೆನ್ನ—ಮುರಾರಿಯು ವರದ ಪ್ರಸನ್ನ ।
ತೋರುವ ದುರಿತದ ಬೆನ್ನ—ಭವಹಾರಿ ಕೃಪಾಂಬುಧಿ ಚೆನ್ನ ॥
ಶ್ರೀರಮಣನ ಶ್ರೀಚರಣ ಸೇವಕರಿಗೆ ।
ಘೋರಯಮನು ಶರಣಾಗತನಲ್ಲವೆ ? ॥ ೧ ॥

ಅರಗಿನ ಮನೆಯೊಳಗಂದು—ಪಾಂಡವರನು ಕೊಲಬೇಕೆಂದು ।
ದುರುಳ ಕುರುಪ ಕಪಟದಲಿ—ಹಾಕಿರುತಿರೆ ಆಕ್ಷಣದಲ್ಲಿ ॥
ಹರಿಕೃಪೆಯವರಲ್ಲಿದ್ದ ಕಾರಣ ।
ದುರಿತವೆಲ್ಲ ಬಯಲಾದುದಲ್ಲವೆ ? ॥ ೨ ॥

ಸಿಂಗನ ಪೆಗಲೇರಿದಗೆ—ಕರಿಭಂಗವೇಕೆ ಮತ್ತವಗೆ ।
ರಂಗನ ದಯವುಳ್ಳವಗೆ—ಭವಭಂಗದ ಭೀತಿಯು ಹಂಗೆ ॥
ಮಂಗಳಮಹಿಮ ಶ್ರೀಪುರಂದರವಿಠಲನ ।
ಹಿಂಗದ ದಯವೊಂದಿದ್ದರೆ ಸಾಲದೆ ? ॥ ೩ ॥

---

೧) ಆ (II). ಇ. ಛ ಪ್ರತಿಗಳಿಂದ ಆರಿಸಿದೆ.

## ೧೩೫

## ಉಗಾಭೋಗ

[೧]ಮಾತಾಪಿತರು ನಿನಗಂದೆ ಮಾರಿದೆರೆನ್ನ ।
ನೀತವೆ ನೀ ಎನ್ನ ಸಲಹದಿದ್ದರೆ ದೇವ ।
ಏತಕೆ ಭಕುತವತ್ಸಲನೆಂದೆನಿಸಿದೆ ? ।
ನಾ ತಡೆಯೆನು ನಿನ್ನ ಬಿರುದಿಗಂಜುವನಲ್ಲ ।
ಸಾತ್ತ್ವಿಕ ದೈವವೆ ಸಲಹೊ ಎನ್ನನು ವಿ- ।
ಖ್ಯಾತ ಮೂರುತಿ ಆದ್ಯ ಪುರಂದರವಿಠಲ ॥ ೧ ॥

## ೧೩೬

ರಾಗ—ಸಾರಂಗ ತಾಳ—ಅಟ

(ಮಧ್ಯಮಾವತಿ)

[೨]ದುರಿತವೆತ್ತಣದೊ ದುರ್ಗತಿಯು ಎಲ್ಲಿಹುದೊ ? ।
ಹರಿನಾಮಸ್ಮರಣೆಯೆಚ್ಚರದಲ್ಲಿದ್ದವರಿಗೆ ॥ ಪ ॥

ಸ್ನಾನವೇತಕೆ ಸಂಧ್ಯಾ—ಜಪತಪವೇತಕೆ ।
ಮೌನವೇತಕೆ ಮಾಸವ್ರತವೇತಕೆ ॥
ಮಾನಸದಲಿ ವಿಷ್ಣುಧ್ಯಾನವ ಮಾಡುವ ।
ಜ್ಞಾನವಂತರ ಸಂಗಸುಖದೊಳಿಪ್ಪವರಿಗೆ ॥ ೧ ॥

ಯಾತ್ರೆಯೇತಕೆ ಕ್ಷೇತ್ರಗಳ ನೋಡಲೇತಕೆ ।
ಗೋತ್ರಧರ್ಮದ ಪುಣ್ಯಫಲವೇತಕೆ ? ॥
ಸೂತ್ರದಿ ಜಗವ ಮೋಹಿಸುವ ಮುರಾರಿಯ ।
ಸ್ತೋತ್ರಮಾಡಿ ಪೊಗಳುವ ಭಾಗವತರಿಗೆ ॥ ೨ ॥

---

೧) ಆ (II) ಪ್ರತಿಯಿಂದ ಆರಿಸಿದೆ.

೨) ಅ (೮) ಆ (II) ಇ. ಝ (೧/೧೦) ಪ್ರತಿಗಳಿಂದ ಆರಿಸಿದೆ.

ಅಂಗದಂಡನೆ ಏಕೆ ಆತ್ಮಗಾಸಿಯು ಏಕೆ ।
ತಿಂಗಳ ಚಾಂದ್ರಾಯಣವೇತಕೆ ? ॥
ಮಂಗಳಮಹಿಮ ಶ್ರೀಪುರಂದರವಿಠಲನ ।
ಹಿಂಗದರ್ಚನೆ ಮಾಡುವ ಭಕ್ತ ಜನರಿಗೆ ॥ ೩ ॥

೧೩೭

ರಾಗ—ರೇಗುಪ್ತಿ ತಾಳ—ಝಂಪೆ

[೧]ನಾನೇಕೆ ಬಡವನೊ—ನಾನೇಕೆ ಪರದೇಶಿ ।
ನೀನಿರುವತನಕ ಹರಿಯೇ ! ॥ ಪ ॥

ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರರು ನೀನೆ ।
ಅಷ್ಟೆಲ್ಲ ಬಳಗ ನೀನೆ ॥
ಪೆಟ್ಟಿಗೆಯೊಳಗಿನ ಅಪ್ಪಾಭರಣ ನೀನೆ ।
ಶ್ರೇಷ್ಠಮೂರುತಿ ಕೃಷ್ಣ ನೀನಿರುವತನಕ ॥ ೧ ॥

ಒಡಹುಟ್ಟಿದಣ್ಣ ನೀನೆ ಒಡಲ ಹೊರೆವವ ನೀನೆ ।
ಇಡು-ತೊಡುವ ವಸ್ತು ನೀನೆ ॥
ಮಡದಿ-ಮಕ್ಕಳನೆಲ್ಲ ಕಡಹಾಯ್ಸುವವ ನೀನೆ ।
ಬಿಡದೆ ಸಲಹುವ ಒಡೆಯ ನೀನಿರುವ ತನಕ ॥ ೨ ॥

ವಿದ್ಯೆ ಹೇಳುವ ಗುರು ನೀನೆ ಬುದ್ಧಿಹೇಳುವ ಧಣಿ ನೀನೆ ।
ಉದ್ಧಾರಕರ್ತ ನೀನೆ ॥
ಮುದ್ದು ಶ್ರೀಪುರಂದರವಿಠಲನ ಪಾದದಲಿ ।
ಬಿದ್ದು ಲೋಲಾಡುತಿರು ಕಾಣು ಮನವೆ ॥ ೩ ॥

೧೩೮

ರಾಗ—ಸಾರಂಗ ತಾಳ—ಕುರುಝಂಪೆ

[೨]ನಾನೇಕೆ ಪರದೇಶಿ ನಾನೇಕೆ ಬಡವನೊ ।
[೩]ಮಾನಾಭಿಮಾನದೊಡೆಯ ವಿಠಲ ಎನಗಿರಲು ॥ ಪ ॥

---

೧) ಅ (೧) ಆ (II) ಶ್ರೀ, ಪ್ರತಿಗಳಿಂದ ಆರಿಸಿದೆ.
೨) ಅ (೧). ಪ್ರತಿಯಲ್ಲಿ ಮಾತ್ರವಿದೆ.
೩) ಓ. ರ ೧. ಮ. ಶ್ರೀ. 'ದಾನವಾಂತಕ ಮುದ್ದುವಿಠಲ'

ಮೂರುಲೋಕದ ಒಡೆಯ ಶ್ರೀಹರಿಯು ಎನ ತಂದೆ ।
ವಾರಿಜಾಂಬಕೆ ಲಕ್ಷ್ಮಿ ಎನ್ನ ತಾಯಿ ॥
ಮೂರು ಅವತಾರದವರೆನ್ನ ಗುರು ಕಾಣಿರೊ ।
ಸಾರಹೃದಯರು ಎನ್ನ ಬಂಧುಬಳಗ ॥ ೧ ॥

ಇಪ್ಪತ್ತುನಾಲ್ಕು ನಾಮಗಳೆಂಬ ಹಳನಾಣ್ಯ ।
ಒಪ್ಪದಲಿ ಉಣಲುಂಟು ಉಡಲುಂಟು ತೆಗೆದು ॥
ತಪ್ಪದಲೆ ನವಭಕ್ತಿಯೆಂಬ ನವರತ್ನಗಳು ।
ಮುಪ್ಪು ಇಲ್ಲದ ಭಾಗ್ಯ ಎನಗೆ ಸಿದ್ಧವಿರಲಿಕ್ಕೆ ॥

ಎನಗೆ ಎಂಬವನ ಹೆಸರೇನೆಂಬೆ ಶ್ರೀನಿವಾಸ ।
ತನಗೆಂದರೆಂದು ಬಗೆವನು ಕಾಣಿರೊ ।
ಘನಮಹಿಮನಾದ ಸಿರಿ ಪುರಂದರವಿಠಲನು ।
ಅನುಮಾನವಿರದೆನ್ನ ಶಿರದ ಮೇಲಿರಲಿಕ್ಕೆ ॥ ೨ ॥

## ೧೩೯

ರಾಗ—ಆನಂದಭೈರವಿ ತಾಳ—ಅಟ

[1]ಕೆಂಡಕ್ಕೆ [2]ಗೊರಲಿ ಮುತ್ತುವುದುಂಟೆ ।
ಪಾಂಡುರಂಗನ ದಾಸರಿಗೆ ಭಯವುಂಟೆ ? ॥ ಪ ॥

ಆನೆ ಸಿಂಹನ ಕೂಡ ಅಣಕವಾಡುವುದುಂಟೆ ।
ಶ್ವಾನಗೆ ಹುಲಿಯೊಳು ಸರಸವುಂಟೆ ? ॥
ಏನೆಂಬೆ ಎರಡಿಲ್ಲದಿರುಳು ಹಗಲು ನಿನ್ನ ।
ಧ್ಯಾನ ಮಾಡುವರಿಗೆ ನರಕವುಂಟೇ ಸ್ವಾಮಿ ? ॥ ೧ ॥

ಕತ್ತಲೆ ರವಿಯನು ಕವಿದು ಮುಚ್ಚುವುದುಂಟೆ ।
ಹೆತ್ತಿ ಸರ್ಪನ ಕಪ್ಪೆ ನುಂಗುವುದುಂಟೆ ? ॥

---

೧) ಕ. ವಿ. ವಿ ತಾಳೆಗರಿಯಿಂದ ಪ್ರತಿಮಾಡಿಗೆ. (೧೭೫೦-ಸಂ. ೧೮೫೮)
೨) ಕೆದಳು (ಕ. ವಿ ವಿ. ೧೭೫೦). ಓ. ಒರಳೆ.

ಅತ್ತಿತ್ತ ಮನವನು ಹರಿಬಿಡದಲೆ ಏಕ- ।
ಚಿತ್ತದಿ ನೆನೆವಗೆ ನರಕವುಂಟೆ ಸ್ವಾಮಿ ? ॥ ೨ ॥

ಆ ಮಾರುತನ ಗುದ್ದಿ ಹದ್ದು ನೋಯಿಸಲುಂಟೆ ।
ಹೇಮಗಿರಿಗೆ ವಜ್ರ ಸಿಡಿಯಲುಂಟೆ ?
ಸ್ವಾಮಿ ಶ್ರೀಪುರಂದರವಿಠಲರಾಯನೆ ನಿನ್ನ ।
ನಾಮಧಾರಿಗಳಿಗೆ ನರಕವುಂಟೆ ಸ್ವಾಮಿ ? ॥ ೩ ॥

## ೧೪೦

ರಾಗ — ಭೈರವಿ ತಾಳ — ಆದಿ

[೧]ಆರು ಒಲಿದರೇನು — ನಮಗಿನ್ನಾರು ಮುನಿದರೇನು ।
ಕ್ಷೀರಸಾಗರ ಶೇಷಶಯನನ ಒಲುಮೆಯುಳ್ಳ ಹರಿದಾಸರಿಗೆ ॥ ಪ ॥

ಪಡೆದ ತಾಯಿ-ತಂದೆ ನಮ್ಮೊಳು ಅಹಿತವ ಮಾಡಿದರೇನು ।
ಮಡದಿ-ಮಕ್ಕಳು ನಂಟರಿಷ್ಟರು ಮುನಿಸು ಮಾಡಿದರೇನು ।
ಒಡನೆ ತಿರುಗುವ ಗೆಳೆಯರು ನಮ್ಮೊಳು ವೈರವ ಬೆಳಸಿದರೇನು ।
ಕಡಲ ಶಯನನ ಕರುಣಾಂಬುಧಿಯ ಒಲುಮೆಯುಳ್ಳ ಹರಿದಾಸರಿಗೆ ॥ ೧ ॥

ಊರನಾಳುವ ದೊರೆಗಳು ನಮ್ಮನು ಹೊರಗೆ ನೂಕಿದರೇನು ।
ಮಾರಿಯ ಹಿಂಡು [೨]ಮುಸಲರ ದಂಡು ಮೈಗೆ ಮುತ್ತಿದರೇನು ॥
ಅರಣ್ಯದಿ ಹರಿದಾಡುವ ಮೃಗಗಳು ಅಡ್ಡಗಟ್ಟಿದರೇನು ।
ವಾರಿಜನಾಭನ ವಸುದೇವಸುತನ ಒಲುಮೆಯುಳ್ಳ ಹರಿದಾಸರಿಗೆ ॥ ೨ ॥

ಕಾನನದೊಳು ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು ।
ಜೇನಿನಂದದಿ ಕ್ರಿಮಿಕೀಟಂಗಳು ಚರ್ಮಕೆ ಮುತ್ತಿದರೇನು ॥
ಭಾನು ಮಂಗಳ ಬುಧ ಶುಕ್ರಂಗಳ ಬಲವು ತಪ್ಪಿದರೇನು ।
ಮಾಣದೆ ಭಜಿಸುವ ಪುರಂದರವಿಠಲನ ಒಲುಮೆಯುಳ್ಳ ಹರಿದಾಸರಿಗೆ ॥ ೩ ॥

---

೧) ಕ. ವಿ. ವಿ. ತಾಳೆಗರಿಯಿಂದ ಪ್ರತಿಮಾಡಿದೆ. (೧೭೫೦, ಸಂ. ೧೮೫೪)
೨) ಶ್ರೀ. ಮುಸುಕಿನ ದಂಡು.

## ೧೪೧

ರಾಗ—ಸಾವೇರಿ ತಾಳ—ಅಟ

೧ವೆಂಕಟರಮಣ ವೇದಾಂತ ನಿನ್ನಯ ಪಾದ ।
ಪಂಕಜ ಕಂಡಮೇಲೆ—ಇಂಥ- ॥
ಮಂಕುಜನರ ಬೇಡಿಸುವುದುಚಿತವೇ ।
ಶಂಖಚಕ್ರಾಂಕಿತನೇ ॥ ಪ ॥

ಕ್ಷೀರಸಾಗರ ಮಥನಿಸಿ ಪೊಂದಿದಾತಗೆ ।
ನೀರುಮಜ್ಜಿಗೆ ಕಡವೆ ॥
ಚಾರು ಕಲ್ಪವೃಕ್ಷದಡಿಯಲ್ಲಿ ಕುಳಿತಂಗೆ ।
ದೋರೆತಿಂತ್ರಿಣಿ ಬಯಕೆ ? ॥ ೧ ॥

ಸಾರ್ವ ಭೂಪಾಲನ ಸೂನುವೆನಿಸಿಕೊಂಡು ।
ಸೋರೆಕೂಳಿನ ತಿರುಕೆ ॥
ನಾರಿ ಲಕ್ಷ್ಮೀಕಾಂತ ನಿನ್ನ ನಂಬಿದವಗೆ ।
ದಾರಿದ್ರ್ಯದಂಜಿಕೆಯೆ ? ॥ ೨ ॥

ಸುರನದಿಯಲಿ ಮಿಂದು ಶುಚಿಯಾದ ಬಳಿಕಿನ್ನು ।
ತೀರ್ಥದ ಅಟ್ಟುಳಿಯೇ ॥
ಕರುಣಾನಿಧಿಯೆಂದು ಮೊರೆಹೊಕ್ಕ ದಾಸಗೆ ।
ದುರಿತದ ದುಷ್ಫಲವೆ ? ॥ ೩ ॥

ಗರುಡನ ಮಂತ್ರವ ಕಲಿತು ಜಪಿಸುವಂಗೆ ।
ಉರಗನ ಹಾವಳಿಯೆ ॥
ಹರಿಯ ಪಕ್ಕದೊಳು ಮನೆ ಕಟ್ಟಿದಾತಂಗೆ ।
ಕರಿಗಳ ಭೀತಿಯುಂಟೆ ? ॥ ೪ ॥

ಪರಮಪುರುಷ ಸುಗುಣಾತ್ಮಕ ನೀನೆಂದು ।
ಮೊರೆಹೊಕ್ಕೆ ಕಾಯೊ ಎನ್ನ ॥

---

೧) (ಲ). ಅ (II). ಝ (೧/೧೦). ಪ್ರತಿಗಳಿಂದ ಆರಿಸಿದೆ.

ಉರಗಾದ್ರಿವಾಸ ಶ್ರೀಪುರಂದರವಿಠಲನೆ ।
ಪರಬ್ರಹ್ಮ ನಾರಾಯಣ । ॥ ೫ ॥

## ೧೪೨

ರಾಗ—ಕಾನಡಾ ತಾಳ—ಅಟ

[1]ನಾ ನಿನ್ನ ಧ್ಯಾನದೊಳಿರಲು—ಇಂಥ ।
ಹೀನ ಮಾನವರಿಂದೇನಾಹೋದು ಹರಿಯೆ ॥ ಪ ॥

ಮುಚ್ಚರಿಸಿದರೇನ ಮಾಡಲಾಪರೊ ಎನ್ನ ।
ಅಚ್ಯುತ ನಿನ್ನದೊಂದು ದಯವಿರಲು ॥
ವಾಚ್ಛಲ್ಯ ಬಿಡದಿರು ನಿನ್ನ ನಂಬಿದ ಮೇಲೆ ।
ಕಿಚ್ಚಿಗೆ ಗೊರಲೆ ಮುತ್ತುವುದೆ ಕೇಳೆಲೊ ರಂಗ ॥ ೧ ॥

ದಾಳಿಯಲಿ ತೇಜಿ ಪೈಹಾಳಿಯಲಿ ನಡೆಯಲು ।
ಧೂಳು ರವಿಗೆ ತಾನು ಮುಸುಕುವುದೇ ॥
ತಾಳಿದವರಿಗೆ ವಿರುದ್ಧ ಲೋಕದೊಳುಂಟೆ ? ।
ಗಾಳಿಗೆ ಗಿರಿ ನಡುಗುವುದೆ ಕೇಳೆಲೊ ರಂಗ ॥ ೨ ॥

ಕನ್ನಡಿಯೊಳಗಿನ ಗಂಟ ಕಂಡು ಕಳ್ಳ ।
ಕನ್ನವಿಕ್ಕಲು ವಶವಾಗುವುದೇ ? ॥
[2]ನಿನ್ನ ಧ್ಯಾನವ ಮಾಡೆ ಪುರಂದರವಿಠಲನೆ ।
ಚಿನ್ನಕ್ಕೆ ಪುಟವಿಕ್ಕಿದಂತೆ ಕೇಳೆಲೊ ರಂಗ ॥ ೩ ॥

## ೧೪೩

ರಾಗ—ಪೂರ್ವಿ ತಾಳ—ಅಟ

[3]ಯಮ ತನ್ನ ಪುರದಿ ಸಾರಿದನು—ನಮ್ಮ- ।
ಕಮಲನಾಭನ ದಾಸರ ಮುಟ್ಟದಿರಿ ಎಂದು ॥ ಪಲ್ಲ ॥

೧) ಅ (೧). ಆ (II) ಶ್ರೀ. ಪ್ರತಿಗಳಿಂದ ಆರಿಸಿದೆ.
೨) ನಿನ್ನ ನಂಬಿದ ಮೇಲೆ (ಛ) ಪನ್ನಂಗ ಶಯನ ಶ್ರೀ. (ಆ)
೩) ಅ (೧). ಏ (ದಾ ೨) ಇವುಗಳಿಂದ ಆರಿಸಿಕೊಂಡಿದೆ. ಇ ಎ. ಓ, ಛ. ಝ (೯/೧೦), ಪ್ರತಿಗಳಲ್ಲಿ ಆಯ್ದು ಹಾಗು ಆರು ನುಡಿಗಳಿದ್ದು ವಿಕಾರವುಯ ವಾಗಿವೆ.

ಭುಜದಲೊಪ್ಪುವ ಶಂಖ-ಚಕ್ರ ಮುದ್ರಾಂಕಿತ ।
ನಿಜ ದ್ವಾದಶನಾಮ ಧರಿಸಿಪ್ಪರ ॥
ತ್ರಿಜಗವಂದಿತಳಾದ ತುಳಸೀಮಾಲಿಕೆಯುಳ್ಳ ।
ಸುಜನರ ಕೆಣಕದೆ ಸುಮ್ಮನೆ ಬನ್ನಿರೊ ಎಂದು ॥ ೧ ॥

[೧]ತಾಳ ದಂಡಿಗೆ ಗೀತವಾದ್ಯ ಸಮ್ಮೇಳದಿ ।
ಊಳಿಗವನು ಮಾಳ್ಪ ಹರಿದಾಸರ ॥
ಕೇಳಿದೊಡನೆ ಕರವೆತ್ತಿ ಮುಗಿದು ಯಮ- ।
ನಾಳುಗಳೆಂದು ಹೇಳದೆ ಬನ್ನಿರೋ ಎಂದು ॥ ೨ ॥

ಹೆಮ್ಮೆಯು ಸಿಡಿಯೇರಿ ಬೇವಿನುಡುಗೆಯುಟ್ಟು ।
ಚಿಮ್ಮುತ ಚೀರುತ ಬೊಬ್ಬೆಯಿಟ್ಟು
ಕರ್ಮಕೆ ಗುರಿಯಾಗಿ ಪ್ರಾಣಹಿಂಸೆಯ ಮಾಳ್ಪ ।
ಬ್ರಹ್ಮೇತಿಕಾರರನೆಳತನ್ನಿರೋ ಎಂದು ॥ ೩ ॥

ಮಾತಾಪಿತರ ದುರ್ಮತಿಯಿಂದ ಬೈವರ ।
ಪಾತಕಿಗಳ ಪರದ್ರೋಹಿಗಳ ॥
ನೀತಿಯಿಲ್ಲದೆ ವಿಮೋಹಿಸಿದವರ ಬಾಯೊಳು ।
ಒತ್ತಿ ಸೀಸವ ಕಾಸಿ ಹೊಯ್ದು ಕೊಲ್ಲಿರಿ ಎಂದು ॥ ೪ ॥

ನರರ ಹಾಡಿ ಪಾಡಿ ನರರ ಕೊಂಡಾಡುವ ।
ನರಕಿಗಳ ಕೀಳುನಾಯ್ಗಳ ಮನ್ನಿಸುವ ॥
ದುರುಳಜ್ಞಾನಿಜನರನೆಳೆತಂದು ಬಾಯೊಳು ।
ಅರಗನೆ ಕಾಯಿಸಿ ಹೊಯ್ದು ಕೊಲ್ಲಿರಿ ಎಂದು ॥ ೫ ॥

ಕೇಶವ ಹರಿ ಎಂಬ ದಾಸರ ಹೃದಯದಿ ।
ವಾಸವಾಗಿಹ ಸಿರಿತಿರುಮಲೇಶ ॥

---

೧) ತಾಳದಂಡಿಗೆ ಸಂಪ್ರದಾಯ ವಿವೇಕದಿ (ಅ. ೧, ಏ ದಾ ೨).

ದಾಸರ ದಾಸರ ದಾಸನೆನಿಪ ಹರಿ- ।
ದಾಸರನ್ನು ಕೆಣಕದೆ ಬನ್ನಿರೋ ಎಂದು ॥ ೬ ॥

ಅನ್ಯಮಂತ್ರವ ಬಿಟ್ಟು ದೈವಮಂತ್ರವ ಭಜಿಸಿ ।
ಪನ್ನಗಶಯನನೆ ಗತಿಯೆನ್ನುತ ॥
ತನ್ನ ಭಕ್ತರ ಕಾಯ್ವ ಪುರಂದರವಿಠಲನ ।
ಉನ್ನತದಲಿ ನಮಸ್ಕರಿಸಿ ಬನ್ನಿರೊ ಎಂದು ॥ ೭ ॥

## ೧೪೪

## ಉಗಾಭೋಗ

### (೧)

[೧]ಜಗದಂತರ್ಯಾಮಿ ನೀನು ನಿನ್ನ ಬಟ್ಟಬಯಲೆಂದು ।
ಬಗೆವವನು ಜಗದೊಳಗೆ ಬ್ರಹ್ಮಹತ್ಯಾಕಾರಿ ।
ಅಗಣಿತಗುಣ ನೀನು ನಿನ್ನ ಗುಣಗಳಿಷ್ಟೆಂದು ।
ಬಗೆವವನು ಜಗದೊಳಗೆ ಸ್ವರ್ಣಸ್ತೇಯಿ ।
ಜಗದೊಡೆಯ ನೀನಿರಲು ಅನ್ಯದೇವನು ಒಡೆಯನೆಂದು ।
ಬಗೆವವನು ಜಗದೊಳಗೆ ಮದ್ಯಪಾನಿ ।
ಜಗದ ತಂದೆ ನೀನು ನಿನ್ನ ದಾಸನೆಂದೆನಿಸದೆ ನೀನೆ ತಾನೆಂದು ।
ಬಗೆವವನೆ ಜಗದೊಳಗೆ ಗುರುತಲ್ಪಗಾಮಿ
ಅವರ ಸಾಕ್ಷಿಯೋಗದಿಂದಲಿ ಇಹ ಜನರು ।
ಜಗದೊಳಗೆ ಮುಖ್ಯ ಪಂಚಮಹಾಪಾತಕರು ।
ಆದುಕಾರಣದಿಂದ ನೀ ನಿತ್ಯ, ನೀ ಸತ್ಯ, ನಿ ಬಲ ನೀ ।
ಅಗಣಿತ ಗುಣನಿಲಯ ನೀ ಸಕಲಸುಖಕಾರಣದಿಂದ ।
ನಂಬಿದೆ ನೀ ಸಲಹಯ್ಯ ಪುರಂದರವಿಠಲ ॥ ೨ ॥

೧) ಅ (೧೧) ಆ (II). ಪ್ರತಿಗಳಿಂದ ಆರಿಸಿದೆ.

## ೧೪೫

## ಉಗಾಭೋಗ

(೧)

ಹಾಡಿದರೆನ್ನೊಡೆಯನ ಹಾಡುವೆ ।
ಬೇಡಿದರೆನ್ನೊಡೆಯನ ಬೇಡುವೆ ।
ಒಡೆಯಗೆ ಒಡಲನು ತೋರುತ ನನ್ನಯ ।
ಬಡತನ ಬಿನ್ನಹ ಮಾಡುವೆ ಕಾಡುವೆ ।
ಒಡೆಯ ಪುರಂದರವಿಠಲನ ।
ಅಡಿಗಳ ಸಾರಿ ಬದುಕುವೆನಯ್ಯ ಸಾರಿ ಬದುಕುವೆ

(೨)

ಆರು ಮುನಿದು ನಮಗೆ ಏನು ಮಾಡುವುರಯ್ಯ ।
ಊರು ಒಲಿದು ನಮಗೇನ ಮಾಡುವುದಯ್ಯ ।
ಕೊಡಬೇಡ ನಮ್ಮೊಡಲಿಗೆ ತುಸವನು ।
ಇಡಬೇಡ ನಮ್ಮ ಶುನಕಗೆ ತಳಿಗೆಯ ।
ಆನೆಯ ಮೇಲೆ ಬಪ್ಪನ ಶ್ವಾನ ಕಚ್ಚಲು ಬಲ್ಲುದೆ ।
ದೀನನಾಥ ನಮ್ಮ ಪುರಂದರವಿಠಲ ಉಳ್ಳನಕ
ಆರುಮುನಿದು.... ॥

(೩)

ತುಳಸಿ ಇರಲು ತುರುಚಿಯನು ತರುವಿರೊ ।
ಗಂಗೆ ಇರಲು ಕೂಪಸ್ನಾನ ಮಾಡುವಿರೊ ।
ಹಂಸವಿರಲು ಹಾಲ ಕೋಳಿಗೆರೆಯುವಿರೊ ।
ಬಾವನ್ನದ ನೆಳಲಿರಲು ಬೇಲಿಯ ಬಯಸುವಿರೊ ।
ತಾಯ ಮಾರಿ ತೊತ್ತನು ತರುವಿರೊ ।
ಪುರಂದರವಿಠಲನ ದೂರ ಮಾಡುವಿರೊ ।

(೪)

ಮರವಿದ್ದರೇನಯ್ಯ ನೆರಳಿಲ್ಲದನಕ ।
ನೆರಳಿದ್ದರೇನಯ್ಯ ನೀರಿಲ್ಲದನಕ ।
ಧನವಿದ್ದರೇನಯ್ಯ ಕೊಡುವ ಮನವಿಲ್ಲದನಕ ।
ಮನವಿದ್ದರೇನಯ್ಯ ಜ್ಞಾನವಿಲ್ಲದನಕ ।
ತನುವಿದ್ದರೇನಯ್ಯ ಪುರಂದರವಿಠಲನ ।
ನೆನೆನೆನೆದು ಊಳಿಗವ ಮಾಡದನಕ

(೫)

[1]ಮರ್ಕಟನ ಕೈನೂಲ ಕುಕ್ಕಡಿಯು ತೆರನಂತೆ ।
ಸಿಕ್ಕಿಕೊಂಡು ಕಾಮಕ್ರೋಧ ಮೋಹಗಳೆನ್ನ ।
ಹಿಕ್ಕಿ ಹೀರುತಲಿವೆ ಏಕೆ ನೋಡುತ್ತಲಿರುವೆ ।
ಅಕ್ಕಟಕ್ಕಟಾ ! ನಿನ್ನ ದಾಸನಲ್ಲವೆ ನಾನು !
ಸಿಕ್ಕ ಬಿಡಿಸಿ ನಿನ್ನ ಭಕ್ತಿಯ ತೋರಿಸೊ ।
ಪಕ್ಷಿವಾಹನ ನಮ್ಮ ಪುರಂದರವಿಠಲ !

(೬)

ಗಾಣದೆತ್ತಿನಂತೆ ತಿರುಗಾಡಲಾರೆ ।
ದಂಡಿಗೆಯು ನೊಗದಂತೆ ನಾ ಬೀಳಲಾರೆ ।
ನವಿಲಂತೆ ನಾನಿನ್ನು ನೆಗೆದಾಡಲಾರೆ ।
ಗಿಳಿಯಂತೆ ನಾನಿನ್ನು ಕೂಗಾಡಲಾರೆ ।
ಪುರಂದರವಿಠಲನ್ನ ಕಾಣದೆ ಧರೆ ಮೇಲೆ
ಮಾತನಾವುದ ಕೇಳಲಾರೆ ।

(೭)

ಕಿಚ್ಚಿನೊಳಗೆ ಬಿದ್ದ ಕೀಟಕನು ನಾನು ।
ಅಚ್ಯುತಾ ತೆಗೆಯೊ ಅನಂತಾ ಕಾಯೊ ಗೋವಿಂದಾ ಪೊರೆಯೊ ।

---

೧) ಆ (VI). ಇ (ಮುದ್ರಿತ) ಪ್ರತಿಗಳಿಂದ ಆರಿಸಿಕೊಂಡಿದೆ.

ಘೋರಪಾತಕಿ ನಾನು ಪುರಂದರವಿಠಲ ।
ನೀ ಕರುಣದಿ ಕಾಣೊ !

(೮)

ಕ್ರಿಮಿಕೀಟಕನಾಗಿ ಹುಟ್ಟಿದಂದು ನಾನು ।
ಹರಿಶರಣೆಂದೆನ್ನಲುಂಟೆ ।
ಹಕ್ಕಿ ಹರಿಣಿಯಾಗಿ ಹುಟ್ಟಿದಂದು ನಾನು ।
ಹರಿಶರಣೆಂದೆನ್ನಲುಂಟೆ ।
ಹಂದಿ–ಸೊನಗನಾಗಿ ಹುಟ್ಟಿದಂದು ನಾನು ।
ಹರಿಶರಣೆಂದೆನ್ನಲುಂಟೆ ।
ಮರೆದೆ ಮಾನವಾ ನಿನ್ನ ಹಿಂದಿನ ಭವಗಳನಂದು ।
ಮಾನುಷದೇಹ ಬಂದಿತೊ ನಿನಗೀಗ ।
ನೆನೆಯೆಲೊ ಬೇಗ ಪುರಂದರವಿಠಲರಾಯನ !

(೯)

ಸೂಸಲಾಸೆಗೆ ಹೋಗಿ ಬಡಿಗಲ್ಲಿನೊಳು ಸಿಕ್ಕಿದ ।
ಮೂಷಕನ ಪರಿಯಂತೆ ಆದೆನೊ ಎಲೆ ದೇವ ।
ಹೇಸಿ ವಿಷಯಂಗಳಿಗೆ ಎರಗುತಿದೆ ಎನ್ನ ಮನ ।
ಗಾಸಿಯಾದೆನೊ ಹೃಷೀಕೇಶ ಸಲಹಯ್ಯ ।
ವಾಸವಾರ್ಚಿತ ಪುರಂದರವಿಠಲ ನಿನ್ನ ।
ದಾಸರ ಸಂಗದಲಿ ಇರಿಸೆನ್ನ ಅನವರತ

(೧೦)

ಪ್ರಪನ್ನರಕ್ಷಕ ನೀನು ಪಾಲಿಸು ನಿನ್ನವ ನಾನು ।
ಉಪಸಾಧನವರಿಯೆನು ಒಮ್ಮೆ ನಿನ್ನ ನೆನೆವೆನು ।
ಅಪರಾಧಿ ನಾನಾದಡೇನು ಅಭಯಪ್ರದನು ನೀನು ।
ವಿಪರೀತ ಮಾಡಿದೆನ್ನನು ಸಲಹೊ ಪುರಂದರವಿಠಲ !

(೧೧)

[೧]ನಿನ್ನಂಥ ತಂದೆ ಎನಗುಂಟು ನಿನಗಿಲ್ಲ ।
ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ ।
ನಿನ್ನಂಥ ದೊರೆಯೊಬ್ಬ ಎನಗುಂಟು ನಿನಗಿಲ್ಲ ।
ನೀನೆ ಪರದೇಶಿ ನಾನು ಸ್ವದೇಶಿ ।
ನಿನ್ನ ಅರಸಿ ಲಕ್ಷ್ಮಿ ಎನನೆ ತಾಯಿಯುಂಟು ।
ಎನಗಿದ್ದ ತಾಯ್ತಂದೆ ನಿನಗಾರಯ್ಯ ಪುರಂದರವಿಠಲ



೧) ಖ ೧. ಝ (೯) ಪ್ರತಿಗಳಿಂದ ಆರಿಸಿದೆ.

## ೫ ಶುಭಂ ಮಂಗಲಂ!

### ೧೪೭

ರಾಗ–ಆನಂದಭೈರವಿ ತಾಳ–ಅಟ

[1]ಒಂದೇ ನಾಮದೊಳಡಗಿದುವೊ ಆ- ।
ನಂದದಿಂದುಸುರುವ ಅಖಿಳವೇದಗಳು ॥ ಪ ॥

ಒಂದೇ ನಾಮವು ಪ್ರಹ್ಲಾದನ ಕಾಯ್ತು–ಮ– ।
ತ್ತೊಂದೆ ನಾಮವೆ ಅಜಮಿಳನ ಸಲಹಿತು ॥
ತಂದೆ ತಾಯಿಯ ಬಿಟ್ಟ ಕಂದ ಧ್ರುವರಾಯಗಾ- ।
ನಂದಪದವನಿತ್ತ ಅದ್ಭುತಗುಣವೆಲ್ಲ ॥ ೧ ॥

ಮತ್ಸ್ಯಾದ್ಯನಂತಾವತಾರ–ಅಷ್ಟಾದಶ- ।
ಸ್ವಚ್ಛ ಪುರಾಣಗಳಮೃತದ ಸಾರ ॥
ಕಚ್ಛಪನಾಗಿ ತ್ರೈಜಗಕೆ ಆಧಾರ–ತ- ।
ನ್ನಿಚ್ಛೆಯಿಂದಲಿ ತಾನು ಮಾಳ್ಪ ವ್ಯಾಪಾರ ॥ ೨ ॥

ಒಬ್ಬರೀತಗೆ ಸಮರಿಲ್ಲ ತ– ।
ನ್ನಬ್ಬರದಿಂದಲಿ ಸಲಹುವನೆಲ್ಲ ॥
ಕಬ್ಬುಬಿಲ್ಲನ ಪಿತ ಪುರಂದರವಿಠಲ ವೈ ।
ದರ್ಭಿಯ ರಮಣನ ವರಸುಗುಣಗಳೆಲ್ಲ ॥ ೩ ॥

### ೧೪೭

ರಾಗ—ಮಧ್ಯಮಾವತಿ ತಾಳ—ಆದಿ

[2]ರಾಮಮಂತ್ರವ ಜಪಿಸೊ—ಏ ಮನುಜಾ ಶ್ರೀ- ।
ರಾಮಮಂತ್ರವ ಜಪಿಸೊ ॥ ಪಲ್ಲ ॥

---

೧. ಆ (೧) : ರ್ಝ (೧/೧೦) : ಖ ೧ (೭) ಈ ಪ್ರತಿಗಳಿಂದ ಆರಿಸಿಕೊಂಡಿದೆ.
೨) ಆ (VI) ಪ್ರತಿಯಿಂದ ತೆಗೆದುಕೊಂಡಿದೆ. ಆ (೧–೮), ಎ. ಓ. ರ್ಝ (೧/೧೦) ಪ್ರತಿಗಳಲ್ಲಿ ಈ ಹಾಡು ಬಹಳ ವಿಕಾರಗೊಂಡಿದೆ,

ಆ ದುಂತ್ರ ಈ ಮಂತ್ರ ನೆಚ್ಚಿ ಕೆಡಲು ಬೇಡ ।
ಸೋಮಶೇಖರಗಿದು ಭಜಿಸಿ ಬಾಳುವ ಮಂತ್ರ ॥ ಅ.ಪ ॥

ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ ।
ಛಲದಿ ಬೀದಿಯೊಳು ಉಚ್ಚರಿಪ ಮಂತ್ರ ॥
ಹಲವು ಪಾತಕಗಳ ಹಸಗೆಡಿಸುವ ಮಂತ್ರ ।
ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ ॥ ೧ ॥

ಸನುಮುನಿಗಳಿಗೆಲ್ಲ ಸಲುಗೆಯಾಗಿಹ ಮಂತ್ರ ।
ಮನುಮುನಿಗಳಿಗೆಲ್ಲ ಮೌನಮಂತ್ರ ॥
ಹೀನ ಗುಣಗಳೆಲ್ಲ ಹಿಂಗಿಹೋಗುವ ಮಂತ್ರ ।
ಏನೆಂಬೆ ಧ್ರುವನಿಗೆ ಪಟ್ಟಗಟ್ಟಿದ ಮಂತ್ರ ॥ ೨ ॥

ಸಕಲವೇದಗಳಿಗೆ ಸಾರವಾಗಿಹ ಮಂತ್ರ ।
ಮುಕುತಿಪಥಕೆ ಇದು ಮೂಲಮಂತ್ರ ॥
ಶಕುತವರಕೆ ಇದು ಬಟ್ಟೆದೋರುವ ಮಂತ್ರ ।
ಸುಖನಿಧಿ ಪುರಂದರವಿಠಲ ಮಹಾಮಂತ್ರ ॥ ೩ ॥

## ೧೪೪

ರಾಗ—ಶಂಕರಾಭರಣ ತಾಳ – ಅಟ್ಟ

[1]ಅರಿಯರು ಮನುಜರು ಅರಿತೂ ಅರಿಯರು ।
ಧರೆಗೆ ಒಡೆಯ ಶ್ರೀಹರಿಯಲ್ಲದಿಲ್ಲವೆಂದು ॥ ಪಲ್ಲ ॥

ಶಿವಬಲ್ಲ ಧ್ರುವಬಲ್ಲ ದ್ರೌಪದಿ ಬಲ್ಲಳು ।
ಅವನಿಪಾಲಿಪ ಜನಕ ನೃಪಬಲ್ಲನು ॥
ಯುವತಿಗೆ ಶಾಪವಿತ್ತ ಗೌತಮಬಲ್ಲನು ।
ಭವರೋಗ ವೈದ್ಯ ಶ್ರೀಹರಿಯಲ್ಲದಿಲ್ಲವೆಂದು ॥ ೧ ॥

---

೧) ಅ (೧) ಪ್ರತಿಯಿಂದ ತೆಗೆದುಕೊಂಡಿದೆ. ಇ ಪ್ರತಿಯಲ್ಲಿ ವ್ಯತ್ಯಾಸಗಳಿವೆ.

ನಾರದಮುನಿ ಬಲ್ಲ ವಾರಿಜೋದ್ಭವ ಬಲ್ಲ ।
ಪಾರಾಶರನು ಬಲ್ಲ ಮನು ಬಲ್ಲನು ॥
ಧೀರ ಭೀಷ್ಮನು ಬಲ್ಲ ಪಾರ್ವತಿ ಬಲ್ಲಳು ।
ಕಾರಣಕರ್ತ ಶ್ರೀಹರಿಯಲ್ಲದಿಲ್ಲವೆಂದು ॥ ೨ ॥

ದಿಟ್ಟ ಪ್ರಹ್ಲಾದ ಮೊರೆಯಿಟ್ಟ ಗಜೇಂದ್ರಬಲ್ಲ ।
ದೃಷ್ಟಾಂತಕಂಡ ಭೃಗುಮುನಿ ಬಲ್ಲನು ॥
ಕೊಟ್ಟ ಬಲಿಯು ಬಲ್ಲ ಕೆಟ್ಟಜಾಮಿಳ ಬಲ್ಲ ।
ಸೃಷ್ಟಿಗೆ ಪುರಂದರವಿಠಲನಲ್ಲದಿಲ್ಲವೆಂದು ॥ ೩ ॥

೧೪೯

ರಾಗ—ಕಾಂಬೋದಿ ತಾಳ—ಝಂಪೆ

[೧]ಸಕಲ ಗ್ರಹಬಲ ನೀನೆ ಸರಸಿಜಾಕ್ಷ ।
ನಿಖಿಳವೇತಕೆ ಎನಗೆ ವಿಶ್ವವ್ಯಾಪಕ ಮೋಹಿ ॥ ಪಲ್ಲ ॥

ರವಿ ಚಂದ್ರ ಬುಧ ನೀನೆ ರಾಹುಕೇತುವು ನೀನೆ ।
ಕವಿ ಗುರುವು ಶನಿಯು ಮಂಗಳನು ನೀನೆ ॥
ದಿವಸ ರಾತ್ರಿಯು ನೀನೆ ನವವಿಧಾನವು ನೀನೆ ।
ಭವರೋಗಹರ ನೀನೆ ರಕ್ಷಕನು ನೀನೆ ॥ ೧ ॥

ಪಕ್ಷಮಾಸವು ನೀನೆ ಪರ್ವಕಾಲವು ನೀನೆ ।
ನಕ್ಷತ್ರಯೋಗ ಕರಣಗಳು ನೀನೆ ॥
ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದೆ ।
ಪಕ್ಷಿವಾಹನ ದೀನರಕ್ಷಕನು ನೀನೆ ॥ ೨ ॥

ಋತುಕಾಲಗಳು ನೀನೆ ವ್ರತದಿನಂಗಳು ನೀನೆ ।
ಕ್ರತುವು ಸಂಧ್ಯಾನ ಸದ್ಗತಿಯು ನೀನೆ ॥
ಜಿತವಾಗಿ ಎನ್ನೊಡೆಯ ಪುರಂದರವಿಠಲನೆ ।
ಶ್ರುತಿಗೆ ನಿಲುಕದ ಮಹಾತ್ಮನು ಹರಿಯು ನೀನೆ ॥ ೩ ॥

---

೧) ಅ (೧). ಆ (VI) ಇ (೧೦). ಝ (೧/೧೦. ೫/೨೦) ಪ್ರತಿಗಳಿಂದ ಆರಿಸಿ. ಬರೆದಿದೆ.

## ೧೫೦

ರಾಗ – ಸೌರಾಷ್ಟ್ರ ತಾಳ—ಅಟ

೧ವೇಳೆಯಿಲ್ಲದೆ ಮಾತನಾಡುತಲಿರಲೊಮ್ಮೆ
ಕೃಷ್ಣಾ ಎನಬಾರದೆ।
ದಾರಿಯ ನಡೆಯುತ ಭಾರವ ಹೊರುವಾಗ
ಕೃಷ್ಣಾ ಎನಬಾರದೆ ॥ ಪ ॥

ತಿರುಗಾಡುತ ಮನೆಯೊಳಗಾದರು ಒಮ್ಮೆ—ಕೃಷ್ಣಾ- ।
ಪರಿವರಿ ಕೆಲಸದೊಳಿದುವೊಂದು ಕೆಲಸವು—ಕೃಷ್ಣಾ ॥ ೧ ॥

ಮಲಗಿಯೆದ್ದು ಮೈಮುರಿದೇಳುತಲೊಮ್ಮೆ—ಕೃಷ್ಣಾ ।
ಹಲವು ಯೋಚಿಸುತಲಿ ಮಂದಿರದಲಿ ಒಮ್ಮೆ—ಕೃಷ್ಣಾ ॥ ೨ ॥

ಚೆಂದುಳ್ಳ ಹಾಸಿಗೆ ಮೇಲೆ ಕುಳಿತು ಒಮ್ಮೆ ಕೃಷ್ಣಾ।-—
ಕಂದನ ಬಿಗಿದಪ್ಪಿ ಮುದ್ದಾಡುತಲೊಮ್ಮೆ—ಕೃಷ್ಣಾ ॥ ೩ ॥

ಗಂಧವ ಪೂಸಿ ತಾಂಬೂಲ ಮೆಲ್ಲುತಲೊಮ್ಮೆ—ಕೃಷ್ಣಾ- ।
ಮಂದಗಮನೆಯೊಳು ಸರಸವಾಡುತಲೊಮ್ಮೆ—ಕೃಷ್ಣಾ ॥ ೪ ॥

ಕ್ಷೀರಸಾಗರಶಯನ ನೀನೇ ಗತಿಯೆಂದು—ಕೃಷ್ಣಾ -
ದ್ವಾರಕಾಪುರವಾಸ ಪುರಂದರವಿಟ್ಠಲಕ—ೃಷ್ಣಾ ॥ ೫ ॥

---

೧) ಅ (೧) ಪ್ರತಿಯಲ್ಲಿಯ ಪಾಠವನ್ನು ತೆಗೆದುಕೊಳ್ಳಲಾಗಿದೆ. ಉಳಿದುವುಗಳಲ್ಲಿ ವಿಕಾರ ಹೆಚ್ಚಿವೆ.

ಓ. ಪ್ರತಿಯಲ್ಲಿ ಎರಡು ನುಡಿಗಳು ಹೆಚ್ಚಿವೆ.

ವಿ. ಸೂ : ಸಾಮಾನ್ಯವಾಗಿ ಕೆಳಗಿನ ಪಲ್ಲವಿ ಹೆಚ್ಚು ಪ್ರಚಾರದಲ್ಲಿದೆ.

ಕೃಷ್ಣಾ ಎನಬಾರದೆ ।
ಕೃಷ್ಣನ ನೆನೆದರೆ ಕಷ್ಟವೊಂದಿಷ್ಟಿಲ್ಲ ॥ ಪ ॥

## ೧೫೧

ರಾಗ – ಕಾಂಬೋದಿ　　　　ತಾಳ—ಝಂಪೆ

೧ಭೂಷಣಕೆ ತನ್ನ ನಿಜವೇ ಭೂಷಣ　　॥ ಪಲ್ಲ ॥

ನಾಲಗೆಗೆ ಭೂಷಣವು ನಾರಾಯಣನ ನಾಮ ।
ಕಾಲಿಗೆ ಭೂಷಣವು ಹರಿಯಾತ್ರೆಯು ॥
ಆಲಯಕೆ ಭೂಷಣವು ತುಲಸಿ ವೃಂದಾವನವು ।
ಮೂಲೋಕಭೂಷಣವು ಹರಿಕಥಾಮೃತವು　　॥ ೧ ॥

ದಾನವೇ ಭೂಷಣವು ಎರಡು ಹಸ್ತಂಗಳಿಗೆ ।
ಮಾನವೇ ಭೂಷಣವು ಮಾನವರಿಗೆ ॥
ಜ್ಞಾನವೇ ಭೂಷಣವು ಯೋಗಿಜನ ಮುನಿಗಳಿಗೆ ।
ಮಾನಿನಿಗೆ ಭೂಷಣವು ಪತಿಭಕ್ತಿಯು　　॥ ೨ ॥

ರಂಗನನು ನೋಡುವುದೆ ಕಂಗಳಿಗೆ ಭೂಷಣವು ।
ಮಂಗಳಾಂಗನ ಕಥೆಯು ಕಿವಿಗೆ ಭೂಷಣವು ।
ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣವು ।
ರಂಗ ಪುರಂದರವಿಠಲ ನಾಮವೇ ಭೂಷಣವು　　॥ ೩ ॥

## ೧೫೨

ರಾಗ—ಸೌರಾಷ್ಟ್ರ　　　　ತಾಳ— ಅಟ

೧ಹರಿದಾಸರ ಸಂಗ ದೊರೆಯಿತು ಎನಗೀಗ ಇನ್ನೇನಿನ್ನೇನು ।
ವರಗುರು ಉಪದೇಶ ನೆರವಾಯ್ತು ಎನಗೀಗ ಇನ್ನೇನಿನ್ನೇನು　॥ಪ॥

---

೧) ಆ (೧). ಆ (B/II). ಪ್ರತಿಗಳನ್ನು ಹೊಂದಿಸಿ ಬರೆದಿದೆ.
　ಭೂಷಣಕೆ ಭೂಷಣ ಇದು ಭೂಷಣ ।
　ಶೇಷಗಿರಿವಾಸ ವರವೆಂಕಟೇಶ ॥ ಎಂಬುದೊಂದು ಪಲ್ಲವಿ ಇದೆ.
ವಿ. ಸೂ ಇದು ಕೆಲವು ಮುದ್ರಿತ ಪ್ರತಿಗಳಲ್ಲಿ ರಂಗವಿಠಲನ ಅಂಕಿತದಿಂದ ಪ್ರಸಿದ್ಧವಾಗಿದೆ.

ಮಾಯದ ಸಂಸಾರ ಮಮಕಾರ ತಗ್ಗೀತು ಇನ್ನೇನಿನ್ನೇನು ।
ತೋಯಜಾಕ್ಷನ ನಾಮ ಜಿಹ್ವೆಯೊಳ್ನೆಲಸಿತು ಇನ್ನೇನಿನ್ನೇನು ॥ ೧ ॥

ಹಲವು ದೈವಗಳೆಂಬ ಹಂಬಲಬಿಟ್ಟಿತು ಇನ್ನೇನಿನ್ನೇನು ।
ಜಲಜನಾಭನ ಧ್ಯಾನ ಹೃದಯದೊಳ್ನೆಲಸಿತು ಇನ್ನೇನಿನ್ನೇನು ॥ ೨ ॥

ತಂದೆ-ತಾಯಿ ಮುಚುಕುಂದವರದನಾದ ಇನ್ನೇನಿನ್ನು ।
ಸಂದೇಹವಿಲ್ಲ ಮುಕುಂದ ದಯಮಾಡಿದ ಇನ್ನೇನಿನ್ನೇನು ॥ ೩ ॥

ಏನೆಂದು ಹೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು ।
ಆನಂದಗೋಪನ ಕಂದನಮಹಿಮೆಯು ಇನ್ನೇನಿನ್ನೇನು ॥ ೪ ॥

ಎನ್ನವಂಶಗಳೆಲ್ಲ ಪಾವನವಾದುವು ಇನ್ನೇನಿನ್ನೇನು ।
ಚಿನ್ಮಯ ಪುರಂದರವಿಠಲಯ್ಯ ದೊರಕಿದ ಇನ್ನೇನಿನ್ನೇನು ॥ ೫ ॥

## ೧೫೩

ರಾಗ—ಕಾಂಬೋದಿ ತಾಳ—ಅಟ

[೧]ಈಸಬೇಕು ಇದ್ದು ಜಯಿಸಬೇಕು ।
ಹೇಸಿಕೆ ಸಂಸಾರದಲ್ಲಿ ಲೇಶ ಆಶೆ ಇಡದಲೆ ॥ ಪ ॥

ತಾಮರಸ ಜಲದಂತೆ ಪ್ರೇಮವಿಟ್ಟು ಭವದೊಳು ।
ಸ್ವಾಮಿರಾಮನೆನುತ ಪಾಡಿ ಕಾಮಿತ ಕೈಕೊಂಬರೆಲ್ಲ ॥ ೧ ॥

ಗೇರುಹಣ್ಣಿನಲ್ಲಿ ಬೀಜ ಸೇರಿದಂತೆ ಸಂಸಾರದಿ ।
ಮೀರಿ ಆಸೆ ಮಾಡದ ಹಾಗೆ ಧೀರ ಕೃಷ್ಣನನೆನೆವ ರೆಲ್ಲ ॥ ೨ ॥

ಮಾಂಸದಾಶೆಗೆ ಮತ್ಸ್ಯಸಿಲುಕಿ—ಓಂಸೆಬಟ್ಟ ಪರಿಯೊಳು ।
ಮೋಸಹೋಗದೆ ಪುರಂದರವಿಠಲ ಶ್ರೀಶ ಜಗದೀಶನೆನುತ ॥ ೩ ॥

---

೧) ಉ. ೧. ಝ. (೨-೧/೧೦) ಇ. ಪ್ರತಿಗಳಿಂದ ತಗೆದುಕೊಂಡಿದೆ.

## ೧೫೪

ರಾಗ—ಪಂತುವರಾಳಿ ತಾಳ—ಆದಿ

[೧]ಡಂಗುರವ ಸಾರಿ ಹರಿಯ ಡಿಂಗರಿಗರೆಲ್ಲರು ಭೂ- ।
ರಂಗದೊಳಗೆಲ್ಲ ಪಾಂಡುರಂಗ ಪರದೈವವೆಂದು ॥ ಪಲ್ಲ ॥

ಹರಿಯು ಮುಡಿದ ಹೂವ ಹರಿವಾಣದೊಳಗಿಟ್ಟುಕೊಂಡು ।
ಹರುಷದಿಂದ ಹಾಡಿ ಪಾಡಿ ಕುಣಿದು ಚಪ್ಪಳಿಕ್ಕುತ ॥ ೧ ॥

ಒಡಲ ಜಾಗಟೆಯ ಮಾಡಿ ಮಿಡಿವ ಗುಣಿ ನಾಲಗೆಯ ಮಾಡಿ ।
ಒಡನೆ ಥಣ ಥಣ ಥಣ ಥಣ ಎಂದು ಕುಣಿದು ಚಪ್ಪಳಿಕ್ಕುತ ॥ ೨ ॥

ಇಂತು ಸಕಲ ಜಗಕೆ ಲಕ್ಷ್ಮೀಕಾಂತನೆ ಪರದೈವವೆಂದು ।
ಕಂತುಪಿತ ಪುರಂದರವಿಠಲ ಪರದೈವವೆಂದು ॥ ೩ ॥

## ೧೫೫

ರಾಗ—ಭೈರವಿ ತಾಳ—ಅಟ

[೧]ಹರಿಯ ಚರಣವೆಂಬ ಸುರಧೇನುವನು
ಗುರುಬೋಧೆಯೆಂಬ ಕಣ್ಣಿಯಲಿ ಕಟ್ಟಿರಯ್ಯ ॥ ಪ ॥

ಭಕುತಿಯೆಂಬ ಕರುವನೆ ಬಿಟ್ಟು ನಿರುತ ವಿ- ।
ರಕುತಿಯೆಂಬ ಚೆನ್ನದಳಿಯ ಹಾಕಿ ॥
ಯುಕುತವಾದ ನಿತ್ಯಕಾಯ ಚರಿಗೆಯೊಳು ।
ಮುಕುತಿನಾಮಾಮೃತ ಕರೆದುಕೊಳ್ಳಿರಯ್ಯ ॥ ೧ ॥

ಕಾಮ ಕ್ರೋಧ ಲೋಭ ಮೋಹ ಮದಮತ್ಸರಗಳೆಂಬ- ।
ಹಮ್ಮೆಂಬ ಕುರುಳನೆ ತಾಳಿ ಹಾಕಿ ॥
ತಾಮಸ ಜ್ಞಾನಾಗ್ನಿ ಪುಟಗೈದು ಇಂದ್ರಿಯ ।
ನೇಮದ ನೀರಬೆರಸಿ ಕಾಯಲಿಡಿರೊ ॥ ೨ ॥

---

೧) ಅ (೧) ಅ (VI) ಝ (೧/೧೦) ಪ್ರತಿಗಳಿಂದ ಆರಿಸಿಕೊಂಡಿದೆ.
೧) ಅ. (II–೦) ಇ. ಇವುಗಳಿಂದ ಆರಿಸಲಾಗಿದೆ.

ಶಾಂತಗುಣವೆಂಬ ಹದನರಿತು ಆರಿಸಿ ಮತ್ತೆ ।
ಭ್ರಾಂತಮನಮಜ್ಜಿಗೆಯ ಹೆಪ್ಪನಿಕ್ಕಿ ॥
ಕಾಂತವಿಷ್ಣುಮಾಯಾಮಂಥದಿ ಶೋಧಿಸಿ-ಸಿ ।
ದ್ಧಾಂತವೆಂಬ ಕಡೆಗೋಲ ನೇಣನೆ ಪಿಡಿದು ॥ ೩ ॥

ಪರಬೊಮ್ಮನೆನಿಪ ಬೆಣ್ಣೆಯ ಮುದ್ದೆಯನೆ ತೆಗೆದು ।
ಶರಣಮಣೆಯೆಂಬ ತುಪ್ಪವನೆ ಕಾಸಿ ॥
ಮರಣವೆಂಬ ನೊರೆ ತೆಗೆದೊಗೆದು ಅಮೃತವ ।
ನಿರುತಹೃದಯವೆಂಬ ಕೊಡವನೆ ತುಂಬಿರೊ ॥ ೪ ॥

ಅನವರತ ಹರಿಸ್ಮರಣೆಯೆಂಬ ಬೀಸೂರಿಗೆ ।
ಅನುವಾಗಿ ಕುಳಿತುಂಡು ಸುಖದಿತೇಗಿ ॥
ಚಿನುಮಯ ಚಿದಾನಂದ ಪುರಂದರವಿಠಲನ ।
ಅನುದಿನ ನೆನೆ-ನೆನೆದು ಸುಖಿಯಾಗಿರಯ್ಯ ॥ ೫ ॥

## ೧೫೭

ರಾಗ - ಬಿಲಹರಿ ತಾಳ—ಅಟ

೧ಕೃಷ್ಣೇತಿ ಮಂಗಳಂ ದಿವ್ಯನಾಮ ॥ ಪ ॥
ಇಷ್ಟರಿಂದಲಿ ಭವಬಂಧನ
ನಷ್ಟವಾಗಿ ಹೋಹುದೋ ॥ ಅ.ಪ ॥

ನಾರದಮುನಿ ತಾನು ನರಕ ಪಟ್ಟಣಕೆ ಹೋಗಿ ।
ವಾರೀಜನಾಭ ಎಂದು ಒದರಿದಾಗ ॥
ಘೋರಪಾತಕವೆಲ್ಲ ದೂರವಾಗಿ ಹೋಯ್ತು ।
ಸೂರೇಯಾಯಿತು ಸ್ವರ್ಗಲೋಕವೆಲ್ಲ ॥ ೧ ॥

ಅಜಮಿಳನು ಈ ನಾಮ ಅಂತ್ಯಕಾಲಕೆ ಸ್ಮರಿಸೆ ।
ನಿಜಪದವಿಯೈದಿದನು ನಿಮಿಷದಲಿ ॥

---

೧) ನ ಇ ಮತ್ತು 'ಎ' ಪ್ರತಿಗಳಿಂದ ತೆಗೆದುಕೊಳ್ಳಲಾಗಿವೆ. ನ ಕೈಬರಹದ ಪ್ರತಿಯಲ್ಲಿ ೧೧ ನುಡಿಗಳಿದ್ದು ೨ ಪ್ರಕ್ಷಿಪ್ತವೆಂದು ಬಿಡಲಾಗಿದೆ. ಮುದ್ರಿತ ಪ್ರತಿಗಳಲ್ಲಿ ೭ ನುಡಿಗಳು ಮಾತ್ರ ಇವೆ.

ಭುಜಗಭೂಷಣನು ತಾ ಶ್ರೀರಾಮ ನಾಮವ |
ನಿಜಕಾಂತೆಯನು ಕರೆದು ಉಪದೇಶವಿತ್ತ ॥ ೨ ॥

ಪಂಚಪಾಂಡವರನು ಪರಿಪಾಲಿಸಿತು ನಾಮ |
ಪಾಂಚಾಲೀ ಮೊರೆಕೇಳಿ ಪೊರೆಯಿತು ನಾಮ ॥
ವಂಚನೆ ಮಾಡಿ ಕೌರವರ ಮಡುಹಿ ನಿ- |
ಶ್ಚಿಂತೆಯಲಿ ಪಾಂಡವರ ಪಟ್ಟಗಟ್ಟಿದ ನಾಮ ॥ ೩ ॥

ಸರಸಿಯೊಳಗೆ ಮುಳುಗಿ ಅರಿಯ ಬಾಧೆಗೆ ಸಿಲುಕಿ |
ಕರಿರಾಜ ಬಲುನೊಂದು ಮೊರೆಯಿಡಲು |
ತ್ವರಿತದಿಂದಲಿ ಬಂದು ಕರಿಯನುದ್ಧರಿಸುತ |
ಕರಿರಾಜವರದನೆಂದೆನಿಸಿಕೊಂಡ ನಾಮ ॥ ೪ ॥

ಧ್ರುವ ತನ್ನ ತಂದೆ ತೊಡೆಯ ಮೇಲೇರಲು ಪೋಗೆ |
ಅವನ ಮಲತಾಯಿ ಗರ್ಜಿಸಿದಳಾಗ ॥
ಧ್ರುವ ಸುಖಬಿಟ್ಟು ವನಕೆ ಪೋಗಿ ತಪ ಮಾಡಿ |
ಸವಿಯಾದಚಲಪದವ ಪಡೆದನಾಗ ॥ ೫ ॥

ಹಿರಣ್ಯಕಶಿಪು ತನ್ನ ಮಗನ ಬಾಧೆಯ ಪಡಿಸೆ |
ಗಿರಿಯ ಶಿಖರದಿಂದೀಡಾಡಲು ॥
ನರಹರಿ, ಪರಹರಿ, ರಕ್ಷಿಸೆಂದೆನ್ನಲು |
ನರಸಿಂಹರೂಪದಿಂದವನ ಪಾಲಿಸಿದ ॥ ೬ ॥

ಕಂದನ ಅಪರಾಧವ ಕೇಳದೆ ನೃಪನು ತಾ ॥
ನಂದತಿ ದಾರುಣ ಕಡಹದೊಳು ಕೆಡಹೆ ॥
ಅಂದು ಸುಧನ್ವ ಶ್ರೀಕೃಷ್ಣನೆಂದೆನಲಾಗಿ |
ಬೆಂದು ಕುದಿವ ಎಣ್ಣೆ ತಣ್ಣೀರಾಯಿತು ॥ ೭ ॥

ಅಸುರಬಾಧೆಗೆ ಸಿಲುಕಿ ಅಶೋಕವನದಲಿ |
ಶಶಿಮುಖಿ ಬೀಜಮಂತ್ರವ ಜಪಿಸೆ |

ಅಸುರನ ಕೊಂದು ಅಶೋಕವನವ ಬಿಡಿಸಿ ।
ವಸುಧೀಸುತೆಯ ಸಲಹಿದ ರಾಮನಾಮ ॥ ೮ ॥

ಪರಿಪರಿ ಭಕ್ತರನು ಪಾಲಿಸಿತು ಈ ನಾಮ ।
ಪರಮ ಮಂಗಲವು ಪಾವನವು ಈ ನಾಮ ॥
ಸುರರು ಬ್ರಹ್ಮಾದಿಗಳು ಸ್ತೋತ್ರಮಾಡುವ ನಾಮ ।
ಧರೆಯೊಳು ಸಿರಿ ಪುರಂದರವಿಠಲ ನಾಮ ॥ ೯ ॥

## ೧೫೭

ರಾಗ—ಶ್ರೀರಾಗ ತಾಳ—ಅಟ

೧ಶೋಭನ ಶೋಭನವೆ ನಮ್ಮ ।
ಶ್ರೀ ಭೂದೇವಿಯರ ಅರಸು ವೆಂಕಟಗೆ ॥ ಪ ॥

ಅಂದು ಕ್ಷೀರಾಂಬುಧಿಯನ್ನು ಮಥಿಸಲಾಗ ।
ಇಂದಿರೆ ಹರುಷದಿಂದುದಿಸಿ ಬಂದು ॥
ಮಂದಾರಮಾಲೆಯ ಹಾಕಿದ ದೇವಗೆ ।
ಕಂದರ್ಪಕೋಟಿ ಲಾವಣ್ಯ ಮೂರುತಿಗೆ ॥ ೧ ॥

ಜನಕನ ಮನೆಯಲ್ಲಿ ರಾಜಾಧಿರಾಜರು ।
ಎಣಿಕೆಯಿಲ್ಲದೆ ಬಂದಿರಲಾಗಿ ॥
ಸನಕಾದಿವಂದ್ಯನ ಕಂಡು ಸಂತೋಷದಿ ।
ಜನಕಜೆ ಮಾಲೆಯ ಹಾಕಿದ ರಾಮಗೆ ॥ ೨ ॥

ರುಕುಮನು ಶಿಶುಪಾಲಗೀವೆನೆಂಬ ಮಾತಿಗೆ ।
ಸಕಲರಾಯರು ಬಂದಿರಲಾಗಿ ॥
ಭಕುತವತ್ಸಲನ ಕಂಡು ಸಂತೋಷದಿ ।
ರುಕುಮಿಣಿ ಮಾಲೆಯ ಹಾಕಿದ ಕೃಷ್ಣಗೆ ॥ ೩ ॥

೧) ಅ (೧೧) ರಿಂದ ತೆಗೆದು ಬರೆದಿದೆ. ಈ ಪ್ರತಿಯಲ್ಲಿ ವಿಕಾರಗೊಂಡಿದೆ.

ಸತ್ಯಭಾಮೆ ನೀಳಾ ಭದ್ರಾಕಾಳಿಂದಿಯು ।
ಮಿತ್ರವಿಂದಾ ಲಕ್ಷಣಾ ಜಾಂಬವತಿ ॥
ಮತ್ತೆ ಸೋಳಾಸಾಸಿರ ಗೋಪಿಕೆಯರ ।
ಪ್ರತ್ಯಕ್ಷವಾಳಿದ ಕಲ್ಯಾಣಗೆ ॥ ೪ ॥

ಪದ್ಮದೇಶದಲೊಬ್ಬ ದೇವಾಂಗನೆಯು ।
ಪದ್ಮಮುಖಿಯು ಶ್ರುತಕೀರ್ತಿಯಾಗಿ ॥
ಪದ್ಮನಾಭ ಶ್ರೀಪುರಂದರವಿಠಲಗೆ ।
ಪದ್ಮಾವತೀಪ್ರಿಯ ಶ್ರೀನಿವಾಸಗೆ ॥ ೫ ॥

## ೧೫೮

ರಾಗ—ಸಾರಂಗ ತಾಳ—ಆದಿ

[೧]ಶೋಭನವೆ-ಹರಿ-ಶೋಭನವೆ ॥ ಪ ॥

ಶೋಭನವೆನ್ನಿರಿ ಶುಭಕರದಿಂದಲಿ ।
ಶೋಭನ ಶ್ರೀಲೋಲ ಗೋಪಾಲನೆನ್ನಿರೆ ॥ ಅ.ಪ ॥

ಪಾಲುಗಡಲು ಮನೆಯಾಗಿರಲು ।
ಆಲದೆಲೆಯ ಮೇಲೆ ಮಲಗುವರೆ ॥
ಮೂಲೋಕವೇ ನಿನ್ನುದರದೊಳಿರಲು ।
ಬಾಲಕನಾಗಿ ಎತ್ತಿಸಿಕೊಂಬುವರೆ ॥ ೧ ॥

ಸಿರಿ ನಿನ್ನ ಕೈವಶವಾಗಿರಲು ।
ತಿರುಮಲ ಮಲೆಯನು ಸೇರುವರೆ ॥
ಸರಸಿಜಭವ-ಭವ ನಿನ್ನ ಪೂಜಿಸಲು ।
ನರನ ಬಂಡಿಯ ಬೋವನೆನಿಸುವರೆ ॥ ೨ ॥

---

೧) ಆ (II). ಪ್ರತಿಯಿಂದ ಆರಿಸಿದೆ

ಕಮ್ಮಗೋಲನ ಪಿತನಾಗಿರಲು ।
ಗಮ್ಮನೆ ಕುಬುಜೆಗೆ ಸೋಲುವರೆ ॥
ಬ್ರಹ್ಮ ಪರಬ್ರಹ್ಮಚರಣಕೆ ಶರಣು ।
ಹಮ್ಮಿನ ದೈವ ಶ್ರೀಪುರಂದರವಿಠಲ ॥ ೩ ॥

## ೧೫೯

ರಾಗ—ಶ್ರೀರಾಗ ತಾಳ—ಅಟ

[೧]ಆರತಿಯು ಬೆಳಗಿರೆ ॥ ಪಲ್ಲ ॥

ಅರಸಿ ರುಕ್ಮಿಣಿಕೂಡ ಅರಸು ವಿಠಲಗೆ ।
ಬಿರುದಿನ ಶಂಖವ ಪಿಡಿದ ವಿಠಲಗೆ ॥
ಸರಸಿಜ ಸಂಭವ ಸನ್ನುತ ವಿಠಲಗೆ ।
ನಿರುತ ಇಟ್ಟಿಗೆ ಮೇಲೆ ನಿಂತ ವಿಠಲಗೆ ॥ ೧ ॥

ದಶರಥರಾಯನ ಉದರದಿ ವಿಠಲ ।
ಶಿಶುವಾಗಿ ಜನಿಸಿದ ಶ್ರೀರಾಮವಿಠಲ ॥
ಪಶುಪತಿ ಗೋಪಿಯು ಕಂದನೆ ವಿಠಲ ।
ಅಸುರೆ ಪೂತನಿಯು ಕೊಂದ ವಿಠಲಗೆ ॥ ೨ ॥

ಕಂಡಿರ ಬೊಬ್ಬುರ ವೆಂಕಟವಿಠಲನ ।
ಅಂಡಜವಾಹನ ಅಹುದೋ ನೀ ವಿಠಲ ॥
ಪಾಂಡುರಂಗ ಕ್ಷೇತ್ರಪಾವನ ವಿಠಲಾ ।
ಪುಂಡರೀಕಾಕ್ಷ ಶ್ರೀಪುರಂದರವಿಠಲಗೆ ॥ ೩ ॥

## ೧೬೦

ರಾಗ—ಶ್ರೀ. ತಾಳ—ಝಂಪೆ

ಜಯಮಂಗಳಂ ನಿತ್ಯ ಶುಭಮಂಗಳಂ
ಜಯತುಂಗ ಲಕ್ಷ್ಮೀಪತಿ ನರಸಿಂಹಗೆ ॥ ಪ ॥

---

೧) ಅ (೧) ಪ್ರತಿಯಿಂದ ಆರಿಸಿಕೊಂಡಿದೆ.

ಕಂದರ್ಪನಯ್ಯಗೆ ಕೋಟಿಲಾವಣ್ಯಗೆ ।
ಮಂದರೋದ್ಧಾರ ಮಧುಸೂದನನಿಗೆ ॥
ಕಂದ ಪ್ರಲ್ಹಾದನನು ಕಾಯ್ದ ದೇವನಿಗೆ ಶ್ರೀ- ।
ಇಂದಿರಾರಮಣ ಸರ್ವೋತ್ತಮನಿಗೆ ॥ ೧ ॥

ಕರಿರಾಜವರದನಿಗೆ ಕರುಣಾಸಮುದ್ರನಿಗೆ ।
ಸರಸಿಜೋದ್ಭವ-ಭವವಂದ್ಯ ಹರಿಗೆ ॥
ಗಿರಿಯರಸು ಕಾವೇರಿಪುರದ ರಂಗಯ್ಯಗೆ ।
ಗಿರಿರಾಜಪತಿವಂದ್ಯ ಸುರರ ನಿಧಿಗೆ ॥ ೨ ॥

ಅಂಬರೀಷನ ಶಾಪ ಅಪಹರಿಸಿದವನಿಗೆ ।
ತುಂಬುರ—ನಾರದ—ಮುನಿವಂದ್ಯಗೆ ॥
ಕಂಬುಕಂಧರ ಪುರಂದರವಿಠಲರಾಯಗೆ ।
ಅಂಬುಜನಾಭಗೆ ಅಜನ ಪಿತಗೆ ॥ ೩ ॥



## ೧ನೆಯ ಹಾಡು

ಭಕ್ತರಲ್ಲಿ ನಾಲ್ಕು ಬಗೆಯೆಂದು ಭಗವದ್ಗೀತೆ ಹೇಳುತ್ತದೆ. (ಆರ್ತೋ ಜಿಜ್ಞಾಸು-ರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ಭ. ಗೀ. ೭/೧೬). ಆರ್ತಭಕ್ತ ಎಂದರೆ ಸಂಸಾರ ದುಃಖದಿಂದಲೂ ಅಜ್ಞಾನಜನ್ಯ ದುಃಖದಿಂದಲೂ ಪೀಡಿತವಾದ ಜೀವ. ಅದು ಪರಮಾತ್ಮ ನಲ್ಲಿ ಮೊರೆಯಿಡುವುದು. ಈ ಅವಸ್ಥೆಗೆ ಆರ್ತಭಕ್ತಿ ಎಂಬ ಹೆಸರು.

ಈ ವಿಭಾಗದಲ್ಲಿ ಬರುವ ಹಾಡುಗಳೆಲ್ಲ ಆರ್ತಭಕ್ತನ ವಿವಿಧ ಮನೋಭಾವವನ್ನು ಪ್ರಕಟಿಸುವಂತಹವಾಗಿವೆ. ಬೇಸತ್ತ ಜೀವ, ಮೊದಲು ನಿಷ್ಕ್ರಿಯವಾಗಿ ತನ್ನ ಹಣೆಬರೆಹ ವನ್ನು ಕುರಿತು ಯೋಚಿಸುವುದು. ಈ ಮೊದಲನೆಯ ಹಾಡು ಹಣೆಯ ಬರೆಹವನ್ನು ಕುರಿತುದೇ ಆಗಿದೆ.

೧ **ಎಂತು** = ಎನಿತು=ಎಷ್ಟು.

**ಬಲ್ಲಿದ** = ಐಶ್ವರ್ಯವಂತ.

**ಅಲ್ಲ** = ಖಾರಗೆಣಸು.

೨ **ಪಂಚಬಾಣ** = ಕಾಮ (ಅರವಿಂದಮಶೋಕಂ ಚ ಚೂತಂ ಚ ನವ ಮಲ್ಲಿಕಾ ॥ ನೀಲೋತ್ಪಲಂ ಚ ಪಂಚೈತೇ ಪಂಚಬಾಣಸ್ಯ ಸಾಯಕಾಃ—ಅಮರ.)

**ಮಾಣು** = ಬಿಡು; ತಡೆ; ಹೋಗು.

## ೨ನೆಯ ಹಾಡು

ಆರ್ತಭಕ್ತನ ಇನ್ನೊಂದು ಬಗೆಯ ಗೋಳು.

**ಭಂಡನಾಗು** = ಹಣ್ಣಾಗು; ಸೋತುಹೋಗು.

**ಕಂಡಕಲ್ಲು** = ದೇವರಮೂರ್ತಿ, ಭರಮಪ್ಪ, ಕರಿಯವ್ವ ಮುಂ.

**ದಿಂಡೆಗಾರ** = ಸ್ವೇಚ್ಛಾಚಾರಿ.

**ಶುಂಡಾಲ** = ಆನೆ.

**ಉಳುಹು** = ಕಾಯಿ; ಸಂರಕ್ಷಿಸು.

## ೩ನೆಯ ಹಾಡು

ಅಜ್ಞಾನದ ಕತ್ತಲೆಯಲ್ಲಿ ತೊಳಲಾಡುವ ಭಕ್ತನ ಮೊರೆಯನ್ನು ಇಲ್ಲಿ ಕಾಣಬಹುದು.

೧ **ಮಾಯೆ** = ಅಜ್ಞಾನ. (ಮಮಮಾಯಾದುರತ್ಯಯಾ ಭ. ೧೬)

**ವಿಷಯ** = ಕಾಮೇಚ್ಛೆ,

ಶ್ವೇತಬಿಂದು = ವೀರ್ಯ.
ಕೀತ = ಪಕ್ವವಾದ
ಹುಟ್ಟಿಹೋಗಲಾರೆ = ಜನ್ಮತಾಳಲಾರೆ.

೨ ಹೂಸೆ = ತೊಡೆಯಲಾಗಿ.
ಹೊಲೆಯ ಗೂಡು = ಗರ್ಭಾಶಯ.
ಹರಿದು ತಿನ್ನು = ಹೆಚ್ಚಾಗಿ ಕಾಡು.
ಜವ = ಯಮ.
ಬೆನ್ನಬಪ್ಪರು = ಸಂಗಡಬರುವವರು.

೩ ಬಸಿಬಸಿರೊಳು = ಜನ್ಮಜನ್ಮದಲ್ಲಿ
ಹರಿದು = ಓಡಾಡಿ.
ತರಗೆಲೆ = ಒಣಗಿದೆಲೆ.
ಕುಕ್ಷಿ = ಹೊಟ್ಟೆ.

## ೪ನೆಯ ಹಾಡು

ತನ್ನ ಸಂಸಾರದ ನಿರ್ವಹಣೆಗಾಗಿ ಅಧಾರ್ಮಿಕ ರೀತಿಯಿಂದ ಬದುಕಿದ ಜೀವ ವರಮಾತ್ಮನನ್ನು ಈ ರೀತಿ ಪ್ರಾರ್ಥಿಸುತ್ತಿದೆ.

ಒದಗಿ=ಅನುಕೂಲವಾಗಿ.

೨ ಕಲ್ಲಕರಗಿಸಬಹುದು; ಹುರಿಗಡಲೆಯನ್ನು ಅರೆದು ತೈಲವನ್ನು ತೆಗೆದಾದರುಣಲುಬಹುದು. (ಹೋ. ಲಭೇತ ಸಿಕತಾಸು ತೈಲಮಪಿ ಯತ್ನತಃ ಪೀಡಯನ್ ॥ ಭ. ನೀತಿಶತಕ)

೩ ಹಲ್ಲುಕಿರಿ = ದೈನ್ಯಭಾವ ತೋರಿಸು.
ಭ್ರಾಂತಿ = ಅಜ್ಞಾನ.

## ೫ನೆಯ ಹಾಡು

ಜೀವ ೧ಗೊದಗುವ ಜನ್ಮಜನ್ಮಾಂತರಗಳ ಕಷ್ಟ–ಕೋಟಲೆಗಳನ್ನು ಈ ಸುಳಾದಿಯಲ್ಲಿ ವಿವರಿಸಲಾಗಿವೆ.

೧ ಮತ್ರ್ಯ = ಭೂಮಿ

**ಹಮ್ಮು**= ಅಹಂಕಾರ
**ಎಂಬತ್ತೆಂಟು ಸಾಸಿರ**= ಎಣಿಕೆಯಿಲ್ಲದಷ್ಟು
**ವೈತರಣಿ**= ಯಮಲೋಕಕ್ಕೆ ಹೋಗುವ ಹಾದಿಯಲ್ಲಿರುವ ಒಂದು ಭಯಂಕರವಾದ ನದಿ.

೨ **ಸಂಚಿತಕರ್ಮ**= ಮಾಡಿಟ್ಟ ಕರ್ಮ (ಪೂರ್ವಜನ್ಮದಲ್ಲಿ ಮಾಡಿದ ಕರ್ಮಗಳು.)
**ಪ್ರಾರಬ್ಧಕರ್ಮ**= ಈಗ ಅನುಭವಿಸುತ್ತಿರುವ ಸಂಚಿತ ಕರ್ಮದಲ್ಲಿಯ ಭಾಗ.
**ಆಗಾಮಿಕರ್ಮ**= ಮುಂದಿನ ಜನ್ಮದಲ್ಲಿ ಸಂಚಿತವಾಗುವ ಕರ್ಮ.

೩ **ಸ್ತ್ರೀಗೋಷ್ಠಿ**= ವಿಷಯಸುಖ
**ದಕ್ಕು**= ಸಲ್ಲು; ಹೊಂದಿಕೆಯಾಗು

೪ **ಕೃಚ್ಛ್ರ**= ದೇಹದಂಡನೆಯ ಒಂದು ವ್ರತ
**ಗೋವತ್ಸಪಥದಂತೆ**= ಆಕಳ ಹಿಂದೆ ಕರು ಹೋದ ಹಾಗೆ
**ಚಿತ್ಸುಖ**= ಪರಮಾತ್ಮ

**ಗೋವತ್ಸಪದ**= ಆಕಳ ಕರುವಿನ ಹೆಜ್ಜೆಯಲ್ಲಿ ನಿಂತ ನೀರು. ಅಂದರೆ ಕಿರಿದಾದ ಹಾಗು ಆಳವಲ್ಲದ ಜಲಾಶಯ.
**ಶ್ರೀವತ್ಸ**= ವಿಷ್ಣುವಿನ ಎದೆಯಮೇಲಿರುವ ಚಿಹ್ನ.

(ವಿ. ಸೂ. ಸ್ವಾಯಂಭುವ ಮನುವಿನ ಯಜ್ಞಕಾಲದಲ್ಲಿ ತ್ರಿಮೂರ್ತಿಗಳಲ್ಲಿ ಶ್ರೇಷ್ಠರಾರೆಂಬುದನ್ನು ನಿರ್ಣಯಿಸುವ ಕಾರ್ಯವನ್ನು ಭೃಗುಋಷಿಗೆ ಒಪ್ಪಿಸಲಾಯಿತು. ಆಗ ಆತನು ಶಿವಲೋಕ ಮತ್ತು ಬ್ರಹ್ಮಲೋಕಗಳಿಗೆ ಹೋಗಿ ಶಿವನಿಗೂ ಬ್ರಹ್ಮನಿಗೂ ಶಾಪ ಕೊಟ್ಟು ವಿಷ್ಣುಲೋಕಕ್ಕೆ ಬಂದಾಗ ವಿಷ್ಣುವು ನಿದ್ದೆಹೋಗಿದ್ದನು. ಭೃಗು ಸಿಟ್ಟಿಗೆದ್ದು ವಿಷ್ಣುವಿನ ಎದೆಗೆ ಒದೆದ. ಇದೆ ಶ್ರೀವತ್ಸಚಿಹ್ನವೆಂದು ಹೆಸರಾಯಿತು. ಭಾಗ. ೧೦/೮೯).

೫ **ಚಂದ್ರಮ........ಕಣ್ಣಿಂದ**= ಇದರ ಪೌರಾಣಿಕ ಸಂದರ್ಭ ನಮಗೆ ಗೊತ್ತಾಗಿಲ್ಲ.

**ಇಂದ್ರ, ನಿನ್ನ ಪಾರಿಜಾತವ ತಂದ**= ಎಲೈ ಇಂದ್ರನೆ, ಕೃಷ್ಣನು ನಿನ್ನ ಪಾರಿಜಾತವನ್ನು ಭೂಮಿಗೆ ತಂದನು. (ಸಂ, ೧/೩೦೪)

ಪಂಚೈತೇ ದೇವತರವೋ ಮಂದಾರಃ ಪಾರಿಜಾತಕಃ ॥
ಸಂತಾನಃ ಕಲ್ಪವೃಕ್ಷಶ್ಚ ಪುಂಸಿ ವಾ ಹರಿಚಂದನಂ ॥ (ಅಮರ)

೬ **ವರುಣದೂತರು ಬಂದು .......ಮಾಡಿಸಿಕೊಂಡ**
ನಂದಗೋಪನು ಏಕಾದಶಿಯಂದು ನಿರಾಹಾರ ಮಾಡಿ ಶ್ರೀಹರಿಪೂಜೆ ಮುಗಿಸಿ ಮರುದಿನ ದ್ವಾದಶಿಯ ದಿನದ ನಸುಕಿನಲ್ಲಿ ಸ್ನಾನಕ್ಕಾಗಿ ಯಮುನೆಗೆ ಹೋದನು. ಆಗ ವರುಣನ ದೂತರು ಅವನನ್ನು ತೆಗೆದುಕೊಂಡು ವರುಣನ ಕಡೆಗೆ ಹೋದರು. ಇದನ್ನು ನೋಡಿದ ದನಗಾಹಿಗಳು ಅಳತೊಡಗಿದರು. ಆಗ ಕೃಷ್ಣನು ಅವರನ್ನು ಸಂತೈಸಿ ವರುಣಲೋಕಕ್ಕೆ ಹೋದನು. ಕೃಷ್ಣನನ್ನು ಕಂಡ ವರುಣನು ಅವನನ್ನು ಆದರದಿಂದ ಬರಮಾಡಿಕೊಂಡು ಮನ್ನಿಸಿ ನಂದಗೋಪನನ್ನು ಆತನಿಗೆ ಒಪ್ಪಿಸಿದನು. (ಭಾಗ ೧೦/೨ ಅಧ್ಯಾಯ)

೭ **ಸಾಸಿರಶಿರನೆ ..ಸಾಸಿರ ಚರಣನೆ**= (ಸಹಸ್ರಶೀರ್ಷಾ . ,ಪುರುಷಸೂಕ್ತ. ಋಗ್ವೇದ ೧೦/೯)

## ೬ನೆಯ ಹಾಡು

ಆರ್ತ ಭಕ್ತನ ಮನಸ್ಸಿನಲ್ಲಿ ಜೀವನ ಅಸ್ಥಿರ, ಪರಮಾತ್ಮನೊಬ್ಬನೇ ಸ್ಥಿರ ಎಂಬ ವಿಚಾರವು ಮೂಡುತ್ತದೆ.

೧ **ಯಮಧರ್ಮ**= ಸೂರ್ಯನ ಮಗ. (ದಕ್ಷಿಣದಿಕ್ಪಾಲಕ, ಸಂಜ್ಞಾದೇವಿ ಈತನ ತಾಯಿ, ಯಮುನಾನದಿ ಈತನ ತಂಗಿ, ಶನಿ ,ಇವನ ಮಲತಾಯಿಯ ಮಗ ತನ್ನ ಉದ್ದಾಮ ನಡತೆಯಿಂದ ಶಾಪಗ್ರಸ್ತನಾಗಲು ವೈರಾಗ್ಯ ಹುಟ್ಟಿ ತಪಶ್ಚರ್ಯ ಮಾಡಿದನು. ಬ್ರಹ್ಮನು ಇವನಿಗೆ ಪಿತೃಗಳ ಸ್ವಾಮಿತ್ವ ಹಾಗು ಜಗತ್ತಿನ ಪಾಪಪುಣ್ಯ ಗಳ ಮೇಲ್ವಿಚಾರಣೆಗಳನ್ನು ಒಪ್ಪಿಸಿದನು.
**ಬಾರದೆ**= ಬರುವದಿಲ್ಲವೆ ?

೨ **ಲೋಲ**= ಆಸಕ್ತ.
**ಮೂಳ**= ಬುದ್ಧಿಗೇಡಿ.
**ನೂಲಮಾಲೆ**= ಗುಣರಹಿತವಾದದ್ದು, ನಿಸ್ಸಾರವಾದದ್ದು.

೩ **ಕರವಾಳು**= ಕೈಗತ್ತಿ. ನಾಶಕಾರಿ.
**ಬೀಳು**= ಹಾಳು.

೪ **ಮನೆ, ಮನೆವಾರ್ತೆ**= ಮನೆ ಮತ್ತು ಸಂಸಾರ.
**ವನಜಸಂಭವಗೂ ನಿಶ್ಚಯವಿಲ್ಲ**=ವೈಷ್ಣವತತ್ತ್ವದ ಪ್ರಕಾರ ಬ್ರಮ್ಹ ಪದವಿಯೂ ಅಸ್ಥಿರವಾದುದೆ. ಯಾಕಂದರೆ ಮುಂದಿನ ಕಲ್ಪದಲ್ಲಿ ವಾಯುದೇವರು (ಹನುಮಂತ) ಬ್ರಹ್ಮಪಟ್ಟಕ್ಕೆ ಬರುವರು.

## ೭ನೆಯ ಹಾಡು

ಗರ್ಭವಾಸದಿಂದ ಮೊದಲ್ಮಾಡಿ ಮರಣಾಂತ್ಯದ ವರೆಗೆ ಜೀವನು ಬೇರೆ ಬೇರೆ ಅವಸ್ಥೆಗಳಲ್ಲಿ ಪಡುವ ಕಷ್ಟ-ನಷ್ಟಗಳನ್ನು ಈ ಪದ್ಯಗಳಲ್ಲಿ ದಾಸರು ಪರಮಾತ್ಮನೆದುರು ತೋಡಿ ಕೊಂಡಿದ್ದಾರೆ.

೧ **ಪಂಚಭೂತ**= ಪೃಥ್ವೀ, ಅಪ್, ತೇಜ, ವಾಯು, ಆಕಾಶ.
**ಔಷಧಿ**= ವನಸ್ಪತಿಗಳು
**ಅನ್ನ**= ಆಹಾರ
**ಶುಕ್ಲ - ಶೋಣಿತ**= ವೀರ್ಯ ಮತ್ತು ರಕ್ತ

೨ **ಇಂದ್ರಿಯ**= ವೀರ್ಯ
**ಹೊಲೆರುಧಿರ**= ಋತುಸ್ರಾವ
**ಬುದಬುದ**= (ಬುದ್ಬುದ) ಗುಳ್ಳೆ

೩ **ಅಂಗ**= ಶಿರವನ್ನು ಬಿಟ್ಟು ಉಳಿದ ದೇಹ.
**ನವರಂಧ್ರ**= ೨ ಕಣ್ಣು; ೨ ಕಿವಿ; ೨ ಮೂಗಿನ ಹೊರಳೆಗಳು; ೧ ಬಾಯಿ; ೧ ಗುದ: ೧ ಉಪಸ್ಥ.
**ಏಳಲಿ**= ಏಳನೆಯ ತಿಂಗಳಲ್ಲಿ
**ಧಾತು**= ದೇಹದ ಏಳು ಮೂಲತತ್ತ್ವಗಳು— ರಸ; ರಕ್ತ; ಮಾಂಸ; ನೆಣ; ಎಲುವು; ಮಿದುಳು; ವೀರ್ಯ.

೪ **ಪೂರ್ವಾನುಭವ ಕರ್ಮ**= ಪೂರ್ವಜನ್ಮದ ಕರ್ಮಫಲದ ಅನುಭವ.

೫ **ನರಕ**=ಕೊಳೆ
**ಘನಮರುತ**=ಪ್ರಸೂತಿವಾತ
**ಅರುಹ**= (ಪೂರ್ವಜನ್ಮದ) ಜ್ಞಾನ
**ಮೃತಭಾವ**=ಸತ್ತಂತಹಸ್ಥಿತಿ

೬ **ವಿಷ್ಣುಮಾಯೆ**=ದುರ್ಗೆ
(ದೈವೀ ಹ್ಯೇಷಾ ಗುಣಮಯೀ ಮಮಮಾಯಾ ದುರತ್ಯಯಾ । ಭ. ಗೀ ೭/೧೪)

೭ **ದುರಿತರೂಪ**=ಮೂರ್ತಿವೆತ್ತ ಪಾಪ

೮ **ವಿಷಮದಿಂದ**=ತಪ್ಪು ಹೆಜ್ಜೆ ಹಾಕುತ್ತ

೯ **ಗೋಳಿಡುತ**+**ಅವಿದ್ಯೆಕರ್ಮ**=ಅಜ್ಞಾನದಿಂದ ಕೂಡಿದ ಕರ್ಮ.

೧೦ **ಜ್ವರದ ಮೇಲೆ ಅತಿಸಾರ ಬಂದಂತೆ**=ಜ್ವರದಲ್ಲಿ ಅತಿಸಾರ ಕೂಡಿದರೆ ಅದು ಅಸಾಧ್ಯರೋಗವಾಗುತ್ತದೆಂದು ವೈದ್ಯರ ಮತ.
**ವಿಷಯ**=ಕಾಮೋಪಭೋಗ

೧೧ **ಹುತ್ತು**=ಹುಳುಗಳ ಮನೆ; ಆಶ್ರಯ
**ಜೊತ್ತು**=ಸಂಬಂಧ (ತ್ಸ–ಯೋಕ್ತ್ರ)
**ಕರಡು**=ಬರಡು
**ಕರ್ಮಕತ್ತಲೆ**=ಅವಿದ್ಯಾಕರ್ಮದಿಂದಾದ ಅಜ್ಞಾನ
(ಪರಮಾತ್ಮನ ಜ್ಞಾನವು ವಿದ್ಯೆಯೆನಿಸುತ್ತದೆ)

೧೨ **ಅಡಸು**=ಮುತ್ತು
**ಸರಕುಮಾಡರು**=ಆಲಕ್ಷಿಸುವರು

೧೩ **ಅವಜ್ಞೆ**=ಅವಮಾನ
**ಅಳಲು**=ಆಸೆಪಡು
**ಕಟ್ಟಳೆಯ ದಿನತುಂಬಿ**=ಗೊತ್ತುಪಡಿಸಿದ ದಿನ ಮುಗಿದು
(ಆಯುಷ್ಯ ಮುಗಿದು)
**ಕುಟ್ಟಿಕೊಂಡು**+**ಅಳು**=ಬಹಳ ದುಃಖಪಡು

೧೫ **ಯೋನಿಮುಖ** = ಜನ್ಮಸ್ಥಾನ
**ಸನ್ಮತಿ** = ಸುಜ್ಞಾನ

## ೮ನೆಯ ಹಾಡು

೧ **ತಂದೆಯುದರದಿ ಮೂರುತಿಂಗಳು** = ಯಾವುದೇ ಜೀವವು ಜನ್ಮಕ್ಕೆ ಬರುವ ಮೊದಲು ತಂದೆಯ ದೇಹದಲ್ಲಿ ವಾಸವಾಗಿದ್ದು ಅವನ ಮೂಲಕ ತಾಯಿಯ ಗರ್ಭಕ್ಕೆ ಬರುತ್ತದೆ, (ಭಾಗ. ೮/೩೧—೧. ಭಾರತ, ತಾ. ನಿ. ೧೨/೬೨. ೬೩)

೨ **ನಿನ್ನನು ಮರೆತೆನು** = ಹೊಟ್ಟೆಯಲ್ಲಿರುವ ವರೆಗೆ ಪೂರ್ವಜನ್ಮಸ್ಮರಣೆ ಇರುತ್ತದೆ. ಹುಟ್ಟಿದ ಕೂಡಲೆ ಅದು ಮರೆಯಾಗುತ್ತಿದೆ.
**ಉತ್ತಮೋತ್ತಮ** = ಸರ್ವೋತ್ತಮ.

೩ **ವಿಾರಿ** = ಮರೆತು.
**ಕಕ್ಕುಲತೆ** = ಸೆಳೆತ.

೪ **ಬಳಕೆಮಾತು** = ವ್ಯವಹಾರದ ಮಾತು.

೫ **ಆಳ್** = ಮುಳುಗು.
**ದೃಢದಿ** = ಗಟ್ಟಿಯಾಗಿ.

## ೯ನೆಯ ಹಾಡು

೧ ಇದರಲ್ಲಿ ದಾಸರು ಸಾಂಸಾರಿಕ ಚಿಂತೆಗಳನ್ನೆಲ್ಲ ಪರಮಾತ್ಮನಿಗೆ ಒಪ್ಪಿಸಿ ನಿಶ್ಚಿಂತಭಾವ ವನ್ನು ವ್ಯಕ್ತಪಡಿಸಿದ್ದಾರೆ.
**ಕೊತ್ತಿ** = ಬೆಕ್ಕು;

೨ ಅರ್ಥರಹಿತವಾದ ಪ್ರದಕ್ಷಿಣೆ, ನಮಸ್ಕಾರ, ನರ್ತನ, ಪ್ರಾರ್ಥನೆ ಮುಂತಾದವುಗಳಿಗೆ ಪರಮಾತ್ಮನು ಒಲಿಯಲಾರನೆಂಬ ಭಾವವನ್ನು ದಾಸರು ವ್ಯಕ್ತಪಡಿಸಿದ್ದಾರೆ.
**ದಂಡಿಯ ನೊಗದಂತೆ ಬೀಳಲಾರೆ** = ದಂಡವತ್‌ಪ್ರಣಾಮ ಮಾಡಲಾರೆ.

**ನೆಗೆದಾಡು**=ನರ್ತನಮಾಡು.

**ಮತ್ತೆ**=ಬೇರೆ ವಿಷಯ.

## ೧೦ನೆಯ ಹಾಡು

ಸಂಸಾರಭ್ರಾಂತವಾದ ಜೀವ ಪರಮಾತ್ಮನನ್ನು ಮರೆತುದಕ್ಕಾಗಿ ಪಶ್ಚಾತ್ತಾಪವನ್ನು ಹೊರಹಾಕುವ ಹಾಡುಗಳು ಈ ವಿಭಾಗದಲ್ಲಿ ಇವೆ.

೧ **ಕಿಂಕಿಣಿಧ್ವನಿ**=ಕೂಸಿನ ಕಿರುಗೆಜ್ಜೆಯ ಸವಿನಾದ.
**ಮಂಕು**=ಮರುಳಾದ.

೨ **ಲೋಚನಚರಿಸುತ**=ಕಣ್ಣುಗಳನ್ನು ಹೊರಳಿಸುತ್ತ,
**ಪತಂಗ**=ದೀಪದ ಹುಳು.

೩ **ಗುಹ್ಯ**=ಯೋನಿ.
**ತೀಟೆ**=ಅತೀವ ಆಸಕ್ತಿ; ತಿಂಡಿ.
**ಬಡಿಗಲ್ಲು**=ಬಲೆಯ ಬಾಗಿಲಿಗೆ ಕಟ್ಟಿದ ಕಲ್ಲು.
**ಅಡಗಿದ**=ಬಲೆಯಲ್ಲಿ ಸಿಕ್ಕ.

೪ **ವೃತ್ತಿ**=ಉದ್ಯೋಗ,
**ಬಲೆ**=ಗಾಳ.

೫ **ಲಂಪಟ**=ಆಸಕ್ತ.
**ಸೊಂಪಿನ**=ಮಧುರ; ಸವಿಯಾದ.
**ಸೊಂಪಳಿ**=ಸೌಂದರ್ಯವನ್ನು ಕಳೆದುಕೊಳ್ಳು.

ವಿ. ಸೂ.— ಸಂಪಿಗೆಹೂವಿನಲ್ಲಿ ಸವಿರಸವಿಲ್ಲದುದರಿಂದ ಜೇನ್ನೊಣಗಳು ಅದನ್ನು ಮುತ್ತುವದಿಲ್ಲ. ಮುತ್ತಿದರೆ ಬರಿ ಹುಡಿ ಮೈಗೆ ಮೆತ್ತಿ ಮೈಬಣ್ಣವು ವಿಕಾರಗೊಳ್ಳುತ್ತದೆ.

೬ **ತನ್ನು**=ತಮ್ಮಷ್ಟಕ್ಕೆ ತಾವೆ;
**ಕಾಂತಾರದ ಅರಸು**=ಅಡವಿಯರಾಜ; ವಿದೇಶಿ.

ವಿ. ಸೂ.— ಇದರೊಡನೆ (ಸಂ. ೧. ಪುಟ, ೯೪) ನಾವಿನಗೇನ ಬೇಡುವುದಿಲ್ಲ ಎಂಬ ಹಾಡನ್ನು ಹೋಲಿಸಿ ನೋಡಿರಿ.

## ೧೧ನೆಯ ಹಾಡು

೧ **ಛಿಹಿ, ಹಳಿ, ಥೂ**=ತಿರಸ್ಕಾರಾರ್ಥ ಶಬ್ದಗಳು.
**ಬಣ್ಣದ ಬೀಸಣಿಕೆ**=ಆಕರ್ಷಕ ವಸ್ತು; ಹೊರಮಿಂಚಿನ ಹೆಣ್ಣುಗಳನ್ನು ಈ ಹೆಸರಿನಿಂದ ಬಣ್ಣಿಸುವ ರೂಢಿ ಇದೆ.
**ಕಣ್ಣಲ್ಲಿ ಮಣ್ಣು ಚೆಲ್ಲಿಕೊ**=ಕಣ್ಣನ್ನು ದುರುಪಯೋಗ ಮಾಡಿಕೊ.

೨ **ಜಾಗರ**=ಇಡಿಯ ರಾತ್ರಿ ಪರಮಾತ್ಮಸ್ತುತಿ ಮಾಡಿ ಎಚ್ಚತ್ತಿರುವುದು.
**ಮುಗಿಲು ಹರಿದು ಬೀಳು**=ಅಸಾಧ್ಯವಾದ ಕೇಡೊದಗು.
**ವಾಸುದೇವ**=ಸರ್ವವ್ಯಾಪಕನಾದ ಪರಮಾತ್ಮ, ಕೃಷ್ಣ. (ವಸುದೇವನ ಮಗ) (ಭಾ. ಉದ್ಯೋಗ ೭೯)

೩ **ತಲೆಯ ಚಿಟ್ಟೆಕ್ಕಿ**=ಬೇಸತ್ತು.
**ದಾಸಿಯ ಮಗ**=ತೊತ್ತಿನ ಮಗ; ಆಳು.

೪ **ಪ್ರಸ್ತ**=ಭೋಜನಕೂಟ.
**ಹಿರಿಯ ಮಗ**=ಅಧಿಕಾರವಂತ
**ಬಿಂದುಮಾತ್ರವೆ.... ಪರ್ವತದಷ್ಟು**=ಸುಖವು ಎಷ್ಟಿದ್ದರೂ ಅದು ಅಲ್ಪವಾಗಿ ಕಾಣುವುದು. ದುಃಖವು ಅಲ್ಪವಾದರೂ ಪರ್ವತಪ್ರಾಯವಾಗಿ ತೋರುತ್ತದೆ.

## ೧೨ನೆಯ ಹಾಡು

೧ **ಮಂದಜ್ಞಾನ**=ಅಜ್ಞಾನ.
**ದೇಹಸಂಬಂಧಿ.... ಇವರೈವರು**=ಪಂಚೇಂದ್ರಿಯಗಳು.

೨ **ಕ್ರೋಧ**=ಕೋಪಿಗಳು.
**ಕುಹಕ**–ಮೋಸಗಾರರು.
**ಕಾಲ**=ಯಮ,

೩ **ಕದುವು**=ಇಕ್ಕಟ್ಟಾದ ತೆಗ್ಗು.

## ೧೩ನೆಯ ಹಾಡು

ಕಾಲಮಹಿಮೆಯನ್ನು ದಾಸರು ಈ ಪದ್ಯದಲ್ಲಿ ಹೇಳಿದ್ದಾರೆ. (ಪುರಾಣಗಳಲ್ಲಿ ಕಾಣುವ ಭವಿಷ್ಯದ್ದರ್ಶನ, ಕಾಲವಮಾಹಾತ್ಮ್ಯ, ವೀರಶೈವರ ಕಾಲಜ್ಞಾನ ಮುಂ. ಹೋಲಿಸಿ ನೋಡಬಹುದು.)

೧ **ಕೈಬರು**=ಮಾಡಲು ಸಿದ್ಧವಾಗು.
**ಬಾಹುದೊ**=ಬರುವದು.
**ಉಂಟು**=ಕಾಲವು ಇರುವದು
**ಪುಂಡು**=ತುಂಟತನ
**ಪೋಕರಿ**=ಮಂಗತನ; ಹುಡುಗಾಟಿಕೆ
**ಭಂಡೆಯರು**=ಮಾನಗೇಡಿಗಳು
**ದಿಂಡೆಯರು**=ಸೊಕ್ಕಿದವರು

೨ **ಒತ್ತೆ**=ಸೂಳೆಗೆ ಕೊಡುವ ಹಣ
**ತೊತ್ತೆಯರು**=ಬೀದಿಬಸವೆಯರು
**ಅರ್ತಿಕಾರ್ತಿ**=ಪ್ರೀತಿಯ ಹೆಂಡತಿ; ಪ್ರೇಯಸಿ

೩ **ಮಸಿ**=ಇದ್ದಲಿ
**ಬೆಸಸು**=ಬೇಡಿಕೊಳ್ಳು

## ೧೪ನೆಯ ಹಾಡು

ಸಂಸಾರದಲ್ಲಿ ನಿರಾಶನಾದ ಭಕ್ತನ ಕಳವಳದ ನುಡಿಗಳು.

೧ **ಭಾಸುರಾಂಗ**=ಪ್ರಕಾಶಮಾನವಾದ ದೇಹವುಳ್ಳವ
**ವಾಸುಕಿಶಯನ**=ಶೇಷಶಾಯಿ
**ಮುರ**=ಒಬ್ಬ ರಾಕ್ಷಸ (ಸಂ, ೧ ಪು. ೨೬೫).
**ಮುಷ್ಟಿಕ**=ಕಂಸನ ಆಸ್ಥಾನದಲ್ಲಿಯ ಒಬ್ಬ ಜಟ್ಟಿ. ಚಾಣೂರ ಮತ್ತು ಇವ ಒಡಹುಟ್ಟಿದವರು. ಮಲ್ಲಯುದ್ಧದಲ್ಲಿ ಕೃಷ್ಣನು ಇವನನ್ನು ಕೊಂದನು. (ಭಾಗ ೧೯/೪೪).

೨ **ಮಾಯೆ**=ಅಜ್ಞಾನ
**ಕಾಯಜ**=ಕಾಮ
**ಅಂಗದೊಳಿರು**=ಸಾಯುಜ್ಯಮುಕ್ತಿ ಹೊಂದು

## ೧೫ನೆಯ ಹಾಡು

ತನ್ನ ಅಪರಾಧಗಳನ್ನು ಅರಿತುಕೊಂಡ ಭಕ್ತ ಪಡುವ ಪಶ್ಚಾತ್ತಾಪದ ನುಡಿಗಳಿವು.

೧ **ಒಂದೊಂದಾಗಿ**=ಒಂದೊಂದನ್ನೂ
**ಹಿಂದಿಕ್ಕಿಕೊ**=ಸಂರಕ್ಷಿಸು
**ಕೃಪಾಸಿಂಧು**=ದಯಾಸಾಗರ

೨ **ಆನ್**=ನಾನು
**ಒಡನಿದ್ದು ಆಡಿಸುತಿಪ್ಪ**=ಅಂತರ್ಯಾಮಿಯಾಗಿ ನನ್ನ ಎಲ್ಲ ಕರ್ಮಗಳ ನಿಯಾಮಕನಾದ.

೩ **ಶ್ರುತಿ**=ವೇದ
**ಸ್ಮೃತಿಗಳು**=ಜೀವನಧರ್ಮದ ನೇಮಗಳಿರುವ ಗ್ರಂಥಗಳು
**ಯತಿತತಿ**=ಋಷಿಗಳ ಸಮುದಾಯ
**ಪರಕೋಟಿ**= (ಋಷಿಗಳು ರಚಿಸಿದ) ಅಸಂಖ್ಯವಾದ
**ಅತರ್ಕ್ಯ**=ತರ್ಕಕ್ಕೆ ಸಿಲುಕದ.

**ಅಪ್ರಮೇಯ**=ಅಳೆಯಲಿಕ್ಕೆ ಬಾರದ; ಸರ್ವವ್ಯಾಪಿಯಾದ.
**ಒಲಿದವರಿಗೆ**=ಭಕ್ತರಿಗೆ.
**ಅಳವಡು**=ಹೊಂದು.

೪ **ಉತ್ತುಂಗ**=ಅತಿಶ್ರೇಷ್ಠ,
**ಸತ್ವ**=ಸಾಮರ್ಥ್ಯ
**ತುರಿಯ**=ತ್ಸತುರ್ಯ ಅಂದರೆ ನಾಲ್ಕನೆಯ ಅವಸ್ಥೆ.
(೧) ಜಾಗ್ರತಿ=(೨) ಸ್ವಪ್ನ (೩) ಸುಷುಪ್ತಿ.
**ಅತುರಿಯ**=ತುರ್ಯಾವಸ್ಥೆ ಮೀರಿದವ.

೫ ದೈವಜ್ಞ=ದೇವರ ಜ್ಞಾನ ಪಡೆದವ,
ಅನ್ಯಥಾ=ಬೇರೆ ರೀತಿಯಲ್ಲಿ.
ಹಿರಿಯರು = ಜ್ಞಾನವೃದ್ಧರು.

೬ ಸಾತ್ತ್ವಿಕ=ಸತ್ತ್ವಗುಣವುಳ್ಳವ.

೭ ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ (ಸಂ.೧ ಪು ೨೧೮)
ಹನುಮಂತ (ಸಂ. ೧. ಪು ೨೦೯)
ತುಂಬುರು (ಸಂ ೧. ಪು. ೨೭೨)
ನಾರದ (ಸಂ ೧. ಪು. ೨೫೭)
ವೈಕುಂಠಪುರ=ವಿಷ್ಣುವಿನ ಮೂರು ವಾಸಸ್ಥಾನಗಳಲ್ಲಿ ಒಂದು
(ಭಾರತ, ಶಾಂತಿ ೩೪೩–೩೪೬)
ವೈಕುಂಠಪ್ರಿಯ=ವೈಕುಂಠವನ್ನು ಪ್ರೀತಿಸುವವ.

## ೧೬ನೆಯ ಹಾಡು

೧ ರಾಗ=ಪ್ರೀತಿ.
ಭಾಗವತ=ಹರಿಭಕ್ತ.
ಬಾಗದಲೆ ತಲೆ-ತಲೆಬಾಗದೆ
ಹೊತ್ತು ಏರಿಸು=ಹೊತ್ತುಗಳೆ.
ಮೃತ್ತಿಕೆ=ತುಳಸೀವೃಂದಾವನದ ಮಣ್ಣು.

೩ ನಡೆ=ಆಚಾರ.

## ೧೭ನೆಯ ಹಾಡು

ಇದೊಂದು ಕಾಲಮಹಿಮೆಯನ್ನು ವರ್ಣಿಸುವ ಪದ್ಯವಿದೆ.

೨ ಎರಡನ್ನು ಎಣಿಸು=ಕೃತಘ್ನನಾಗು.
ರುವಿ=ಕಾಸು.

೩ ಸೋಲು = ಮನಸೋಲು; ಒಲಿ.
ಬಲ್ಲಿದ = ಬಲಿಷ್ಠ,
ಬಡ = ಕ್ಷುದ್ರ; ಕೀಳು;

## ೧೮ನೆಯ ಹಾಡು

ಸಂಸಾರತಪ್ತನಾದ ಭಕ್ತ ಅನನ್ಯಗತಿಕನಾಗಿ ಶ್ರೀಹರಿಯಲ್ಲಿ ಬಿನ್ನವಿಸಿಕೊಳ್ಳುತ್ತಾನೆ.

೧ **ಮದ** = ಸೊಕ್ಕು;
**ಅನ್ನಮದ** = ಅಷ್ಟಮದದಲ್ಲಿ ಇದು ಒಂದು.
**ಅಷ್ಟಮದ** = ಅನ್ನ, ಅರ್ಥ, ಅಂಹಕಾರ, ವೈಭವ, ಸಾಹಸ, ಪ್ರಭುತ್ವ.

೨ **ಭ್ರಾಂತಿ** = ತಪ್ಪುತಿಳಿವಳಿಕೆ.
**ಹಸನುಳ್ಳ** = ಬೆಲೆಯುಳ್ಳ.

೩ **ಕಾಣಾಚಿ** = ನಾಣಾಶಿ; ದ್ರವ್ಯ,
**ನಷ್ಟ** = ನಶ್ವರ; ಕ್ಷಣಭಂಗುರ.

## ೧೯ನೆಯ ಹಾಡು

೨ **ಮೈಗೆಡು** = ಅಶುದ್ಧವಾಗು.

೪ **ಪದ್ಮನಾಭನದಿನ** = ಹರಿದಿನ: ಏಕಾದಶಿ.

೫ **ಮಂದಭಾಗ್ಯದ** = ದುರ್ದೈವದ.

## ೨೦ನೆಯ ಹಾಡು

೧ **ಋಣ** = ಸಾಲ.
**ಸೂತಕ** = ಮೈಲಿಗೆ.
**ಕಡೆಹಾಯಿಸು** = ಪಾರುಮಾಡು,

೫ **ಹೆತ್ತಸೂತಕ** = ವೃದ್ಧಿ
ವಿ. ಸೂ. ಇದರಲ್ಲಿ ದಾಸರು ಸಾಮಾನ್ಯವಾಗಿ ಸಾಲಗಾರನ ಸಂಕಷ್ಟಗಳನ್ನು ಹೇಳಿದ್ದಾರೆ. ಇ ವರೆ ಪುರಂದರದಾಸರ ಜೀವನಕ್ಕೆ ಇದು ಅನ್ವಯಿಸಲಾರದು.

## ೨೧ನೆಯ ಹಾಡು

೧ ಪ ...ತ್ಮನ ಅಗಲಿಕೆಯನ್ನು ಜೀವವು ಸೈರಿಸಲಾರದು. ಅವನಲ್ಲಿ ಅಗಲದೆ ಇರು ವ ...ೀವನ ಸಾರ್ಥಕ್ಯ.

**ಪ್ರೊಗರ್** = ಕಾಂತಿ.
**ಸಂಸೃತಿ** = ಸಂಸಾರ.
**ಬನ್ನ** = ಕಷ್ಟ (ತ್ಸ, ಭಗ್ನ)
**ಚೆನ್ನ** = ಚೆಲುವ.

೨ **ಶೀಲ** = ಆಚಾರ.
**ಲೋಲ** = ಚಂಚಲ.
**ಅಘ** = ಪಾಪ.
**ಅಭಿಮಾನಿಸು** = ಬಹಳವಾಗಿ ಮನ್ನಿಸು.
**ಶ್ರೀಕರ** = ಕಲ್ಯಾಣವನ್ನು ಮಾಡುವ.

೪ **ಎಳೆಗಂದಿ** = ಆದೇ ಈದ ಆಕಳು.
**ಪಿರಿದು** = ಹೆಚ್ಚಾಗಿ.
**ನಿಜ** = ಮಹಿಮೆ.

೫ **ಸಾಲಿಗ್ರಾಮ** = (ಶಾಲಗ್ರಾಮ) ವಿಷ್ಣುವಿನ ಸಾನ್ನಿಧ್ಯವಿರುವುದೆಂದು ಭಾವಿಸಲಾದ ಒಂದು ಬಗೆಯ ಕರಿಯ ಹೊಳಪು ಶಿಲೆ. ಇದು ಗಂಡಕೀ ನದಿಯಲ್ಲಿರುವ ಶಾಲಗ್ರಾಮ ಎಂಬ ಕ್ಷೇತ್ರದಲ್ಲಿ ಸಿಕ್ಕುತ್ತದೆ.
(ಭಾರತ, ವನ. ೮೨)
**ರಾಮರಮಣಿ** = ಲಕ್ಷ್ಮೀದೇವಿ.
**ಸುಖಧಾಮ** = ಆನಂದದ ತವರು.

## ೨೨ನೆಯ ಹಾಡು

೧ **ಸಾರ** = ರಸವತ್ತಾದ.
**ಖೋಡಿವಿನೋದ** = ಮಂಗಚೇಷ್ಟೆ.

೨ **ಕಾರಣಾರ್ಥ** = ಶುಭಕಾರ್ಯ.
**ನರಸಾರಥಿ** = ಅರ್ಜುನನ ಸಾರಥಿ = ಶ್ರೀಕೃಷ್ಣ.

೩ **ವಸುದೇವಾತ್ಮಜ** = ಕೃಷ್ಣ (ಸಂ ೧. ಪು. ೨೪೪)

**ಶಿಶುಪಾಲಕ್ಷಯ** = ಶಿಶುಪಾಲನನ್ನು ಕೊಂದವ, ಕೃಷ್ಣ.
(ಸಂ. ೧. ಪು. ೨೭೯)

೪ **ಉತ್ಕೃಷ್ಟ** = ಸುಖ.
**ಅಷ್ಟಾಕ್ಷರ ಮಹಾಮಂತ್ರ** = ಎಂಟು ಅಕ್ಷರಗಳಿಂದ ಕೂಡಿದ ಮಹಾ ಮಂತ್ರ ಉದಾ: ಓಂ ನಮೋ ನಾರಾಯಣಾಯ. (ವಾಸುದೇವಾಯ)

೫ **ಜನಕಜಾ** = ಜನಕರಾಜನ ಮಗಳು ಸೀತಾದೇವಿ.
ವಿದೇಹ ದೇಶದ ಅರಸು. ಮಿಥಿಲೆ ಇವನ ರಾಜಧಾನಿ. ಪುತ್ರಕಾಮೇಷ್ಟಿಯನ್ನು ಮಾಡಲಾಗಿ ಇವನಿಗೆ ಭೂಮಿಯೊಳಗಿಂದ ಸೀತಾ ಮತ್ತು ಇಬ್ಬರು ಗಂಡುಮಕ್ಕಳು ದೊರಕಿದರು.
**ಸಾಸಿರನಾಮ** = ಸಹಸ್ರನಾಮ ವಿಷ್ಣು [ಸಹಸ್ರನಾಮ(ಭಾರತ, ಅನುಶಾಸನ ]

## ೨೩ನೆಯ ಹಾಡು

೧ **ಮಾಯಾಮಲ** = ಮಾಯೆಯಿಂದ ನಿರ್ಮಿತವಾದ ಕೊಳೆ.

೨ **ವಿತ್ತ** = ದ್ರವ್ಯ.

## ೨೪ನೆಯ ಹಾಡು

೧ **ಫುಲ್ಲ** = ಹೂ.
**ಕೋಟಲೆ** = ಕಷ್ಟ.
**ಮುರಮರ್ದನ** = (ಸಂ, ೧. ಪು. ೨೬೫)
**ನಂದಗೋಪ** = (ಸಂ, ೧. ಪು, ೭೪೬)
**ವೃಂದಾವನಪ್ರಿಯ** = (ವೃಂದಾವನ ಸಂ, ೧. ಪು. ೨೫೧)
**ಉಡುಪಿ** = (ಸಂ. ೧. ೨೩೭)

## ೨೫ನೆಯ ಹಾಡು

೧ **ಹದಿನಾಲ್ಕು ಲೋಕ** = (ಸಂ. ೧. ಪು. ೩೦೯)
**ತರಹರಿಸು** = ಕಳವಳಿಸು.

೨ **ಶರಣ್ಯ** = ಆಶ್ರಯ ಕೊಡುವವ.

೩ **ಪತಂಗ**=ದೀಪದ ಹುಳ.

**ಖಗರಾಜ**=ಗರುಡ.

## ೨೬ನೆಯ ಹಾಡು

(೧)

**ಆನೆ .. ಏನು**=ಕರಿರಾಜನನ್ನು ಉದ್ಧರಿಸುವಾಗ ಅವನಿಗೆಷ್ಟು ಜ್ಞಾನ ವಿದ್ದಿತು ?

(೨)

**ಪನ್ನಗಾದ್ರಿ**=ಶೇಷಾಚಲ, ತಿರುಪತಿ. (ಸಂ. ೧. ಪು. ೨೩೮)

**ಕುನ್ನಿ**=ಕ್ಷುದ್ರ.

(೫)

**ಒಂದಿ**=ಕೂಡಿ.

**ಎಂಬತ್ತು ನಾಲ್ಕು ಲಕ್ಷಯೋನಿ**= (ಸಂ. ೧. ಪು. ೨೮೧)

**ಮನೆವಾರ್ತೆ**=ಮನೆಯ ಕೆಲಸಗಳು,

(೬)

**ತುಪ್ಪ ಓಗರ**=ತುಪ್ಪನ್ನ.

**ಭಾಜನ**=ಪಾತ್ರ.

**ಗೋಕರ್ಕಲ್ಲು**=ಬೋರಗಲ್ಲು; ಅಗಸೆಯ ಕಲ್ಲು.

(೧೦)

**ಮೀಟು**=ಬೆರಳಿನಿಂದ ಬಾರಿಸು.

ವಿ. ಸೂ.— ಹರಿದಾಸ ದೀಕ್ಷೆಯನ್ನು ಪಡೆದು ತಾಳ ತಂಬೂರಿಗಳನ್ನು ಬಾರಿಸುತ್ತ ಗೀತ ನೃತ್ಯದೊಂದಿಗೆ ದೇವರನ್ನು ಸ್ಮರಿಸಿದರೆ ಅವನು ಮುಕ್ತನಾಗುವನು ಎಂಬುದು ಇದರ ಭಾವ.

## ೨೭ನೆಯ ಹಾಡು

ಮೂರು ಬಗೆಯ ಕರ್ಮಗಳಲ್ಲಿ ಸಂಚಿತ ಕರ್ಮಗಳಲ್ಲಿಯ ಅನುಭವಿಸುವ ಭಾಗವು ಪ್ರಾರಬ್ಧಕರ್ಮ ಅಥವಾ ಪ್ರಾಚೀನಕರ್ಮ ಎನಿಸಿಕೊಳ್ಳುತ್ತದೆ. ಪ್ರಾಚೀನ ಕರ್ಮಾನು ಭವವು ಯಾರನ್ನೂ ಬಿಡುವುದಿಲ್ಲವೆಂಬುದು ದಾಸರ ಅಭಿಮತ.

೧ **ಪಣೆ** = ಹಣೆ.

೫ **ಕುಂಬೆ** = ಗೋಡೆ.

ವಿ. ಸೂ.— ಪ್ರಾಚೀನ ಕರ್ಮವು ಜೀವನದಲ್ಲಿ ಅಕಲ್ಪಿತವಾದ ಅನೇಕ ಆಪತ್ತುಗಳನ್ನು ತಂದೊಡ್ಡುತ್ತಿರುವುದು.

## ೨೮ನೆಯ ಹಾಡು

೧ **ಪಡೆದುಬಂದುದು** = ಪ್ರಾಚೀನ ಕರ್ಮದ ಬಲದಿಂದ ಸಂಪಾದಿಸಿದ್ದು.
**ಥರೆಗಿಳಿ** = ಕುಗ್ಗು; ಕೈಕಾಲು ಬಿಡು.

೨ **ಸರಿಯ** = ಸಮಾನರಾದವರು.
**ಕರುಬು** = ಹೊಟ್ಟೆಕಿಚ್ಚುಪಡು.
**ಅಲ್ಪರಿ** = ದೈನ್ಯದಿಂದ ಬೇಡಿಕೊಳ್ಳು.

## ೨೯ನೆಯ ಹಾಡು

ಪ್ರಾರಬ್ಧವು ದೇವರನ್ನೂ ಕೂಡ ಬಿಟ್ಟಿಲ್ಲವೆಂಬುದನ್ನು ಈ ಹಾಡಿನಲ್ಲಿ ಕಾಣಬಹುದು.

೧ **ಮರಳಿಮರಳಿ....ಇಲ್ಲ** = ಮತ್ಸ್ಯಾವತಾರ.
**ಹೊರೆ....ಇಲ್ಲ** = ಕೂರ್ಮಾವತಾರ,
**ಬರಿಯ....ಇಲ್ಲ** = ವರಾಹಾವತಾರ.
**ಪರರಿಗೆ....ಇಲ್ಲ** = ನರಸಿಂಹಾವತಾರ.

೨ **ಬಲಿದ....ಇಲ್ಲ** = ವಾಮನಾವತಾರ.
**ನೆಲದಿ....ಇಲ್ಲ** = ಪರಶುರಾಮಾವತಾರ.
**ತಲೆ....ಇಲ್ಲ** = ರಾಮಾವತಾರ.
**ಕೊಳಲೂದಿ .. ಇಲ್ಲ** = ಕೃಷ್ಣಾವತಾರ.
**ಧೀರತನ ...ಇಲ್ಲ** = ಬೌದ್ಧಾವತಾರ.
**ಮೀರಿದ್ದ....ಇಲ್ಲ** = ಕಲ್ಕ್ಯಾವತಾರ.

ವಿ. ಸೂ.— ಪರಮಾತ್ಮನು ದೇವರಂತೆ ವರ್ತಿಸುವೆನೆಂದು ಯಾವ ಯಾವಪ್ರೊ ಬಹಿರಂಗ ವೇಷಗಳನ್ನು ಹಾಕಿದರೂ ಅವನು ಫಲವನ್ನು ಕಾಣನು. ಪರಮಾತ್ಮನ ನಾಮಸ್ಮರಣೆ ಮಾತ್ರ ಪ್ರಾರಬ್ಧವನ್ನು ಮೀರಿನಿಂತು ಮನುಷ್ಯನನ್ನು ಉದ್ಧರಿಸುವದೆಂಬುದು ದಾಸರ ಅಭಿಪ್ರಾಯ.

## ೩೦ನೆಯ ಹಾಡು

ಎಂತೆಂತಹ ಮಹಾಪುರುಷರನ್ನೂ ಪ್ರಾರಬ್ಧ ಕರ್ಮವು ಹೇಗೆ ಪೀಡಿಸುವುದೆಂಬುದನ್ನು ಸೋದಾಹರಣವಾಗಿ ಇಲ್ಲಿ ವಿವರಿಸಲಾಗಿದೆ.

೧ **ಐದು ವರುಷದ ತರಳ** = ಧ್ರುವ (ಸಂ. ೧ ಪು. ೨೬೧)

**ಮಲತಾಯಿ** = ಸುರುಚಿ

**ಐದೆ** = ಹೆಚ್ಚಾಗಿ

೨ **ರಘುರಾಮ** = ಅಯೋಧ್ಯೆಯ ಅರಸು, ದಶರಥನ ಹಿರಿಯಮಗ.

ಶ್ರೀಹರಿಯ ಏಳನೆಯ ಅವತಾರ. ತಂದೆಯ ವಚನಪಾಲನೆಗಾಗಿ ಹದಿನಾಲ್ಕು ವರ್ಷ ವನವಾಸ ಕೈಕೊಂಡು ಸೀತಾಲಕ್ಷ್ಮಣರೊಡನೆ ವನವಾಸದಲ್ಲಿದ್ದನು.

**ಲಕ್ಷ್ಮಣ** = ಶ್ರೀರಾಮನ ತಮ್ಮ. ದಶರಥ ಮತ್ತು ಸುಮಿತ್ರೆಯರ ಮಗ.

**ಸೀತೆಯನ್ನು** = (ಇದೆ ಸಂಪುಟದ ಹಾಡು ೨೨ ನೋಡಿರಿ)

**ಖಳ** = ನೀಚ (ರಾವಣ) (ಸಂ ೧ ಪು, ೨೩೩)

**ವಿಪರೀತ** = ಬಹಳ, ಪ್ರಚಂಡ

೩ **ದುಶ್ಶಾಸ** = ದುರ್ಯೋಧನನ ತಮ್ಮ ದುಃಶಾಸನ. ದ್ರೌಪದಿಯ ಸೀರೆಯನ್ನು ಸೆಳೆದು ಮಾನಭಂಗ ಮಾಡಿದ ತಪ್ಪಿಗಾಗಿ ಯುದ್ಧದಲ್ಲಿ ಭೀಮನು ಇವನನ್ನು ಕೊಂದನು. (ಭಾರತ, ಕರ್ಣ ೮೭-೮೮)

**ದ್ರೌಪದಿ** = ದ್ರುಪದರಾಜನ ಮಗಳು. ಪಾಂಡವರೈವರ ಹೆಂಡತಿ. (ಸಂ. ೧, ಪು ೨೧೫)

**ಭೂಪತಿಗಳೈವರು** = ಐದು ಜನ ಪಾಂಡವರು.

೪ **ಅಭಿಮನ್ಯು** = ಅರ್ಜುನ ಮತ್ತು ಸುಭದ್ರೆಯರ ಮಗ, ಶ್ರೀಕೃಷ್ಣನ ಸೋದರಳಿಯ. ವಿರಾಟನ ಮಗಳಾದ ಉತ್ತರೆ ಇವನ ಹೆಂಡತಿ. ಮಹಾಭಾರತ ಯುದ್ಧದಲ್ಲಿ ದ್ರೋಣಾಚಾರ್ಯರು ಹೂಡಿದ ಚಕ್ರವ್ಯೂಹವನ್ನು ಹೊಕ್ಕು ವೀರತನದಿಂದ ಕಾದಾಡಿ ವೈರಿಗಳ ಮೋಸದಿಂದ ಮಡಿದನು.

**ಚಕ್ರವ್ಯೂಹ** = ಸೈನ್ಯದ ಚಕ್ರಾಕಾರದ ರಚನೆ. ಇದನ್ನೆ ಪದ್ಮವ್ಯೂಹವೆನ್ನುವರು. ಮಹಾಭಾರತ ಯುದ್ಧದಲ್ಲಿ ಹನ್ನೊಂದನೆಯ ದಿನ ಸೇನಾಪತಿ ದ್ರೋಣನು ಕುರುಸೇನೆಯನ್ನು ಚಕ್ರಾಕಾರವಾಗಿ ನಿಲ್ಲಿಸಿದ್ದನು. (ದ್ರೋಣ ೩೪)

**ಷಡುರಥ** = ದ್ರೋಣ, ಕರ್ಣ, ಜಯದ್ರಥ

**ಸೆಣಸು** = ಹೋರಾಡು
**ಅಣಕವಿಲ್ಲದೆ** = ಕುಂದಿಲ್ಲದಂತೆ
**ಅಸು** = ಪ್ರಾಣ
**ತ್ರಿಣಯಸಖ** = ಕೃಷ್ಣ.

೫ **ಬ್ರಹ್ಮಶಿರ** = (ಸಂ. ೧, ಪು ೧೯೫)

## ೩೧ನೆಯ ಹಾಡು

**ಅಗ್ರಗಣ್ಯ** = ಮೊದಲಿಗ

## ೩೨ನೆಯ ಹಾಡು

ಸತ್ಕರ್ಮಗಳನ್ನು ಮಾಡದೆ ಅದರ ಫಲವನ್ನು ಬಯಸಿ ಪ್ರಯೋಜನವಿಲ್ಲ.

೧ **ಅಟ್ಟ** = ಸಿದ್ಧಮಾಡಿದ
**ಊಳಿಗ** = ಸೇವೆ
**ವೇಳೆಯರಿತು** = ಹೊತ್ತುಕಾಯ್ದು

೨ **ಬೆನ್ನಲಿಬಂದವ** = ಒಡಹುಟ್ಟಿದವ; ತಮ್ಮ.

ವಿ. ಸೂ.— ತಮ್ಮತಮ್ಮ ಕರ್ಮದ ಫಲವನ್ನು ತಾವೆ ಅನುಭವಿಸಿ ತೀರಿಸಬೇಕು.

## ೩೩ನೆಯ ಹಾಡು

೧ **ವಿಧಿ ಬರೆದ ವಾಕು** = ಹಣೆಬರಹ.

೨ **ಉರಗ** = ಹಾವು.
**ವೃಶ್ಚಿಕ** = ಚೇಳು.
**ಪಾವಕ** = ಉರಿ; ಅಗ್ನಿ.
**ಕರಿ** = ಆನೆ.

## ೩೪ನೆಯ ಹಾಡು

೧ **ಕಾಳ** = ಕತ್ತಲೆ.

**ಧರ್ಮಜ** — ದೂರ್ವಾಸರು ಉಪದೇಶಿಸಿದ ಯಮಧರ್ಮನ ಮಂತ್ರದಿಂದ ಕುಂತೀದೇವಿ ಪಡೆದ ಮಗ. ಪಾಂಡವರಲ್ಲಿ ಹಿರಿಯ. ಕೌರವರ ಸಂಗಡ ಲೆತ್ತ ಪಗಡೆಯಾಡಿ ಸಕಲ

ನಿಯ ಮೋಸದಿಂದ ವಂಚಿತನಾಗಿ ರಾಜ್ಯಕೋಶಗಳನ್ನು ಕಳೆದುಕೊಂಡು ವನವಾಸಕ್ಕೆ ಹೋದನು. ವನವಾಸ ಮುಗಿಸಿ ಅಜ್ಞಾತವಾಸದಲ್ಲಿ ವಿರಾಟರಾಜ್ಯದಲ್ಲಿ ಕಂಕನೆಂಬವನಾಗಿ ಒಂದು ವರ್ಷ ಕಳೆದನು.

**ವಿರಾಟ**=ಮತ್ಸ್ಯದೇಶದ ಅರಸು. ಮರುತ್ತುಗಳ ಅಂಶದಿಂದ ಜನಿಸಿದವ ಇವನ ಸೇನಾಪತಿಯೇ ಕೀಚಕ. ಅಜ್ಞಾತವಾಸ ಕಾಲದಲ್ಲಿ ಪಾಂಡವರು ಇವನಲ್ಲಿ ಸೇವೆ ಮಾಡಿಕೊಂಡಿದ್ದರು.

೨ **ಬಂಟ**=ಸೇವಕ.

**ಉಂಟುತನ**=ಶ್ರೀಮಂತಿಕೆ.

**ಹೆಂಟೆ**=ಕೆಲಸಕ್ಕೆ ಬಾರದ ವಸ್ತು.

**ಫಲ್ಗುಣ**=ಅರ್ಜುನ.

**ಶ್ರೀಪುರುಷೋತ್ತಮ**=ಕೃಷ್ಣ.

**ಹರಿಶ್ಚಂದ್ರ**=ಸೂರ್ಯವಂಶದ ಅರಸು. ತ್ರಿಶಂಕು ಮತ್ತು ಸತ್ಯವ್ರತೆಯರ ಮಗ. ಈತನ ಹೆಂಡತಿ ಚಂದ್ರಮತಿ; ಮಗ ರೋಹಿತಾಸ್ವ ಸತ್ಯಕ್ಕಾಗಿ ಇವನು ವಿಶ್ವಾಮಿತ್ರ ಋಷಿಯ ಪರೀಕ್ಷೆಗೆ ಒಳಗಾಗಿ ಕಾಶಿಯಲ್ಲಿ ಹೊಲೆಯನ ಆಳಾಗಿ ನಿಂತನು. (ಭಾರತ ಸಭಾ. ೧೨)

**ಹಾಸ್ಯಮಾಡಿ**=ನಕ್ಕು ಮರೆತುಬಿಡು.

**ತೊಂಡ**=ಸೇವಕ; ಭಕ್ತ.

೩ **ಅಸಿಪತ್ರವನ**=ಒಂದು ಬಗೆಯ ನರಕ. ಅಲ್ಲಿಯ ಗಿಡಗಳಿಗೆ ಇರುವ ಕತ್ತಿಯ ಅಲಗುಗಳು ಪಾಪಿಯನ್ನು ಬಾಧಿಸುವವು.
(ಭಾಗ ೫/೨೬)

**ಬಸೆವಸೆ ಖಂಡ**=ನೆಣಗೂಡಿದ ಮಾಂಸ

೪ **ತಪ್ತಲೋಹ**=ಕಾಯ್ದ ಕಬ್ಬಿಣ. ನರಕದಲ್ಲಿಯ ಒಂದು ಬಗೆಯ ಶಿಕ್ಷೆ.

೫ **ಕುಂಭಿಪಾಕ**=ಒಂದು ಬಗೆಯ ನರಕ. ಜೀವ ಹಿಂಸೆ ಮಾಡಿದವರು ಈ ನರಕಕ್ಕೆ ಹೋಗುತ್ತಾರೆ. (ಭಾಗ ೫/೨೬)

**ಅಂಬುಮೊನೆ**=ಬಾಣದ ತುದಿ

**ಅಂಬರ**=ಆಕಾಶ

## ೩೫ನೆಯ ಹಾಡು

ದೇವರು ತನ್ನ ಭಕ್ತನ ಎಂತಹ ಪಾಪಗಳನ್ನಾದರೂ ಕ್ಷಮಿಸಿ ಪೊರೆಯುತ್ತಾನೆ ಎಂಬ ಶ್ರದ್ಧೆಯನ್ನು ದಾಸರು ಇಲ್ಲಿಯ ಹಾಡುಗಳಲ್ಲಿ ಮೂಡಿಸಿದ್ದಾರೆ.

೧ **ಅನುಗಾಲ** = ಯಾವಾಗಲೂ.
**ಕೊಂಡು** = ಅತಿಯಾಗಿ; ಹೆಚ್ಚಾಗಿ.
**ತುತ್ತು** = ಆಹಾರ.

೨ **ಕೊಡಧನ** = ಕೊಡತುಂಬ ದ್ರವ್ಯ.
**ಮನಸಿಜ** = ಕಾಮ.

## ೩೬ನೆಯ ಹಾಡು

೧ **ಕಕುಲಾತಿ** = ಕಳವಳ.
**ನಡಸು** = ಸಂರಕ್ಷಿಸು.
**ಪಡಿ** = ಅಕ್ಕಿ ಮುಂ. ಆಹಾರ ಪದಾರ್ಥಗಳು. (ಸೀದಾ, ಉಲುಪಿ)

## ೩೭ನೆಯ ಹಾಡು

೧ **ಜವ** = ವೇಗ;
**ಜವ್ವನ** = ಹರೆ (ಯೌವನ)
**ಜರೆ** = ಮುಪ್ಪು.
**ಕಾಲಕರ್ಮ** = ಸಾವಿನ ಕಾಲ ಮತ್ತು ಹಣೆಬರೆಹ.

೨ **ಧಾತು** = ಶರೀರದ ಮೂಲ ಘಟಕಗಳು. ಇವು ಏಳು : ರಸ, (ನೀರು); ಅಸ್ರ, (ರಕ್ತ); ಮಾಂಸ; ಮೇದಸ್, (ನೆಣ); ಅಸ್ಥಿ, (ಎಲುವು); ಮಜ್ಜಾ, (ಎಲುವಿನೊಳಗಿನ ಹಳದಿಯ ದ್ರವ್ಯ); ಶುಕ್ರ, (ವೀರ್ಯ).
(ರಸಾಸ್ರಮಾಂಸ ಮೇದೋಽಸ್ಥಿ ಮಜ್ಜಾನಃ ಶುಕ್ರಸಂಯುತಾಃ)

೩ **ಬೊಬ್ಬುಳಿ** = ಗುಳ್ಳೆ.

## ೩೮ನೆಯ ಹಾಡು

೨ **ಕಾಯಸಲ್ಲ** = ನೀಚರನ್ನು ಯಾಚಿಸದಿರು.
**ಹರಿಯಪಾದದಲ್ಲಿ ನಿಲ್ಲು** = ಹರಿಯನ್ನು ಆಶ್ರಯಿಸು.

೩ **ಅಡೆಗೆಡೆ**=ಬೀಳು

೪ **ಶ್ರೀವರ**=ಲಕ್ಷ್ಮೀಪತಿ

**ಕ್ಲುಪ್ತ**=ವಿಧಿನಿಯಮಿಸಿದಂತೆ

**ನಿಜಸ್ವಭಾವ ಬಿಡದೆ**=ಭಕ್ತರ ಮೂಲಸ್ವರೂಪಕ್ಕೆ ಅನುಗುಣವಾಗಿ ತಪ್ಪದೆ.

## ೩೯ನೆಯ ಹಾಡು

೧ **ನಿಚ್ಚ**=ನಿತ್ಯ

**ಪಾಪ**=ವೆಚ್ಚ....ಪಾಪ ಮಾಡುವದರಿಂದ ಪುಣ್ಯದಲ್ಲಿ ಕೊರತೆಯಾಗುತ್ತದೆ.

**ಏರಿದ**=ಉಂಟಾದ

**ಆಚಾರದಿಚರಿಸಿ**=ಶುದ್ಧ ನಡತೆಯುಳ್ಳವನಾಗಿ

೨ **ನೀನು ನಿನ್ನೊಳಗೆ ಜಾಣನೊ**=ಆತ್ಮಜ್ಞಾನವನ್ನು ತಾನೆ ಪಡೆಯಬೇಕು. ಬೇರೆಯವರಿಂದ ಅಲ್ಲ.

೩ **ಪಾತಕ**=ಪಾಪಿ

**ಪತಿತ**=ಭ್ರಷ್ಟ

## ೪೦ನೆಯ ಹಾಡು

ಇಲ್ಲಿಯವರೆಗೂ ವಿಷಾದಭಾವದಲ್ಲಿದ್ದ ಭಕ್ತ ಪರಮಾತ್ಮನ ಕಲ್ಪನೆಯುಂಟಾಗಲು ಅವನಲ್ಲಿ ಕಾರುಣ್ಯವನ್ನು ಯಾಚಿಸುತ್ತಾನೆ.

೧ **ನಚ್ಚಿಸಬಹುದೆ**=ನಂಬಿ ಇರಬಹುದೆ ?

೪ **ಒಲವು**=ಒನಪು, ಒಡಿವಾರ

**ಚೆನ್ನಿಗತನ**=ರಸಿಕತನ, ಬೆಡಗುಗಾರಿಕೆ

## ೪೧ನೆಯ ಹಾಡು

೧ **ಕೊಡು**=ಗತಿಯನ್ನು ಕೊಡು; ಉದ್ಧಾರಮಾಡು

**ಕೊಂಬುದು**=ಸ್ವೀಕರಿಸುವುದು

**ಉಂಬೆ**=ಅನುಭವಿಸುವೆ

**ತತ್ತದ್ರೂಪನಾದೆ**=ಆಯಾ ಜನ್ಮದಲ್ಲಿ ನೀನು ಇದ್ದೆ.

**ಮಾನದ+ಅಂತರ್ಯಾಮಿ** = ಮಾನದಲ್ಲಿದ್ದುಕೊಂಡು ಅದನ್ನು ಕಾಯುವವ.

೨ **ಶಾ**=ಬೇಟೆಗಾರ.

**ಬಾಲವ ಕಟ್ಟಿಸಿ**=ದಳಿಹಾಕಿ.

**ಸುಣ್ಣಕಿಕ್ಕಿದ ನೀರಿನಂತಾದೆನು**=ಬಹಳ ಕಳವಳಿಸಿದೆನು,

## ೪೨ನೆಯ ಹಾಡು

೨ **ರತಿಗೆ**=ವಿಷಯಾಸಕ್ತಿಗೆ;

## ೪೩ನೆಯ ಹಾಡು

**ಶತಸಹಸ್ರ**=ಲಕ್ಷ.

**ಶೀಲ**=ವ್ರತನೇಮಗಳು.

**ಗಯೆ**=(ಸಂ. ೧. ಪು. ೨೯೨)

**ಕಾಶಿ**=ವಾರಣಾಸಿ. (ಸಂ. ೧. ಪು, ೨೯೨)

**ಧ್ಯಾನಿಸುವವರು**=ಭಕ್ತರು.

ವಿ, ಸೂ.— ನಿಜವಾದ ಅಂತರಂಗವನ್ನರಿಯದೆ ಮಾಡಿದ ವ್ರತನೇಮಗಳೆಲ್ಲ ವ್ಯರ್ಥವೆಂದು ದಾಸರ ಮತ.

## ೪೪ನೆಯ ಹಾಡು

೧ **ಗೋವರ್ಧನಗಿರಿ**=(ಸಂ. ೧. ಪು. ೨೮೯)

೨ **ಕರ್ತರ್**=ಶೂರರಾದ;

**ಕಂಚುಗನ್ನಡಿ**=ಕಂಚಿನ ಕನ್ನಡಿ (ಈ ತೆರದ ಕಂಚಿನ ಕನ್ನಡಿ ಕೆಲವು ಗುಡಿಗಳಲ್ಲಿ ಮತ್ತು ಹಳೆಮನೆತನಗಳಲ್ಲಿ ಉಳಿದುಕೊಂಡಿವೆ )

**ಸಂಚಿತಾರ್ಥ**=ಕೂಡಿಟ್ಟ.

೪ **ಪುರುಷ**=ಗಂಡ.

೭ **ದಿತಿಜ**=ದೈತ್ಯ.

## ೪೫ನೆಯ ಹಾಡು

೧ **ಬೇಸತ್ತು ಬೇಲಿಮೇಲೊರಗು**=ವಿಶ್ರಾಂತಿಗಾಗಿ ಬೇಲಿಯ ಮೇಲೆ ಒರಗಿದರೆ ಮುಳ್ಳಿನ ಕಾಟವೆ ಸರಿ.

**ಚಳಿಗೆ ನಡುಗುತ ಹೋಗಿ ಜಲದೊಳಗೆ ಪೊಕ್ಕಂತೆ**=ಹುರಿಯುವ ಹಂಚಿನಿಂದ ಉರಿಯುವ ಒಲೆಯಲ್ಲಿ ಬಿದ್ದಂತೆ.

**ಅಟ್ಟುಳಿ**=ಉಪದ್ರವ.

**ಎಳನರಿಯು......... ಜೋತಂತೆ**=ಉಸುಕಿನ ಬೈಲಿನಲ್ಲಿ ಬೀಸುವ ಸುಂಟರ ಗಾಳಿಗೆ ಹಾರಿಬರುವ ಉಸುಕಿನ ಕಣಗಳು ಮೂಗಿನಲ್ಲಿ ಹೋಗದಂತೆ ಮುಚ್ಚಿಕೊಳ್ಳುವ ದಕ್ಕಾಗಿ ಒಂಟೆಯ ತುಟಿ ಉದ್ದವಾಗಿ ಜೋತಾಡುತ್ತಿರುತ್ತದೆ. ಅದು ಕತ್ತರಿಸಿ ಬೀಳುವ ದೆಂಬ ಭ್ರಮೆಯಿಂದ ಅದರ ಬೆನ್ನುಹತ್ತಿರುತ್ತದೆ..

೨ **ಆರದೆ**=ತಾಳಲು ಸಮರ್ಥನಾಗದೆ.

**ತೆವರ**=ದಿನ್ನೆ.

೩ **ಪುರುಷನಾರಿಯುವೇಷ**=ಪುರುಷನ ನಾರಿಯ ವೇಷವು ಕಾಣಲಿಕ್ಕೆ ಸುಂದರವಾದರೂ ಕಾಮಿಯನ್ನು ತಣಿಸಲಾರದು.

**ಬಿಸಿಲುಗುದಿರೆ**=ಬೈಲುಸೀಮೆಯಲ್ಲಿ ಬೇಸಿಗೆಯ ದಿನಗಳಲ್ಲಿ ಭೂಮಿಯೊಳಗಿಂದ ಮೇಲೇಳುವ ಹವೆಯಿಂದ ಉಂಟಾಗುವ ದೃಶ್ಯ; ಚಿಗರಿಗಳು ನೀರಡಿಸಿ ಬಿಸಿಲುಗುದುರೆಯ ಬೆನ್ನುಹತ್ತುವವೆಂದು ನಮ್ಮ ಸಾಹಿತ್ಯದಲ್ಲಿ ಒಂದು ಸಮಯವಿದೆ,

ವಿ. ಸೂ.— ಇದರಲ್ಲಿ ಬರುವ ದೃಷ್ಟಾಂತಗಳು ದಾಸರ ವಿಶಾಲವಾದ ಲೋಕ ನಿರೀಕ್ಷಣೆಯನ್ನು ತೋರಿಸುತ್ತವೆ.

## ೪೬ನೆಯ ಹಾಡು

೧ **ಉದರವೈರಾಗ್ಯ**=ಹೊಟ್ಟೆಹೊರೆಯುವದಕ್ಕಾಗಿ ಹಾಕಿದ ಸೋಗಿನ ವೈರಾಗ್ಯ.

೨ **ಅರಿವೆಯ ಮುಸುಕನು ಮೋರೆಗೆ ಹಾಕಿ**=ಜಪಮಾಡುವಾಗ ಲಕ್ಷ್ಯ ಬೇರೆಕಡೆಗೆ ಹೋಗಬಾರದೆಂದು ಮುಸುಕಹಾಕಿಕೊಳ್ಳುವ ರೂಢಿ ಇದೆ.

೩ **ಬೂಟಕತನ**=ಡಾಂಭಿಕತನ.

**ಸಾಟಿ**=ಸರಿ.

## ೪೭ನೆಯ ಹಾಡು

೧ **ದೇಹ.... ದೇಹಸಂಬಂಧ**=ಬಾಂಧವ್ಯ

೩ **ಮಂದಾಕಿನಿ**=ಸುರನದಿ; ಗಂಗಾನದಿ

## ೪೮ನೆಯ ಹಾಡು

೨ **ಚಿನ್ಮಾತ್ರ**=ಕೇವಲ ಜ್ಞಾನ ಸ್ವರೂಪ

೩ **ಚಿನ್ನ**=ಕೂಸು

೪ **ಗಂಗಾಪಿತ**=ಗಂಗೆಯನ್ನು ತನ್ನ ಉಂಗುಷ್ಟದಲ್ಲಿ ಪಡೆದವ
**ಪುಳಕಾಂಕ**=ರೋಮಾಂಚನ
**ಕಂಗಳಲ್ಲಿ ಜಲವೆಂದು ಉಕ್ಕುವುದು**=ಇದು ಭಕ್ತಿಭಾವದ ಉತ್ಕಟತೆಯ ಲಕ್ಷಣ

೫ **ಮಂದರಧರ**=ಕೂರ್ಮಾವತಾರ ತಾಳಿದ ಶ್ರೀಹರಿ
**ಮನದೀಪ್ತಿ**=ಜ್ಞಾನ; ತಿಳಿವಳಿಕೆ
**ಮಾ**=ಲಕ್ಷ್ಮೀ

## ೪೯ನೆಯ ಹಾಡು

೧ **ನಿತ್ಯ**=ಶಾಶ್ವತ; ನಾಶರಹಿತ
**ಮುರಾರಿ** = (ಸಂ. ೧, ಪು ೨೬೫)

೨ **ಹೊಂದಿ ಕೊರೆಯುವ**=ಆಶ್ರಿತ

೩ **ಗಟ್ಟಿ**=ಗಟ್ಟಿಯಾಗಿ

## ೫೦ನೆಯ ಹಾಡು

೧ **ಪಂಚಭೂತದ ನಾಡು**=ಪಂಚಭೂತಗಳಿಂದಾದ ಪ್ರದೇಶ

೨ **ಮಲೆಮರೆ**=ಬುದ್ಧಿಗೆಡು
**ದುರ್ವಿಷಯ**=ಕಾಮವಾಸನೆ

೩ **ಕೀರ್ತನೆ**=ಪರಮಾತ್ಮನ ಮಾಹಾತ್ಮ್ಯ ಮತ್ತು ಚರಿತ್ರೆ ಇವುಗಳನ್ನು ಒಳಗೊಂಡ ಹಾಡು.

## ೫೧ನೆಯ ಹಾಡು

೧ **ಜಾಗು ಮಾಡದೆ**=ತಡಮಾಡದೆ

**ಗೇಹ**=ಮನೆ

**ಬೇಹಾರ**= (ತ್ಸ) ವ್ಯಹಹಾರ

೨ **ತೊಡಗಲು**=ಆರಂಭಿಸಲು

೩ **ಅಸೀಪತ್ರವನ**=ಒಂದು ಬಗೆಯು ನರಕ. ಅಲ್ಲಿಯು ಗಿಡಗಳಿಗೆ ಇರುವ ಕತ್ತಿಯ ಅಲಗುಗಳು ಪಾಪಿಯನ್ನು ಬಾಧಿಸುವವು. (ಭಾಗ ೫/೨೬)

**ಬಸೆವಸೆಖಂಡ**=ನೆಣಗೂಡಿದ ಮಾಂಸ

೪ **ತಪ್ತಲೋಹ**=ಕಾಯ್ದ ಕಬ್ಬಿಣ. ನರಕದಲ್ಲಿಯ ಒಂದು ಬಗೆಯ ಶಿಕ್ಷೆ.

೫ **ಕುಂಭಿಪಾಕ**=ಒಂದು ಬಗೆಯ ನರಕ. ಜೀವ ಹಿಂಸೆಮಾಡಿದವರು ಈ ನರಕಕ್ಕೆ ಹೋಗುತ್ತಾರೆ. (ಭಾಗ. ೫/೨೬

**ಅಂಬುಮೊನೆ**=ಬಾಣದ ತುದಿ

**ಅಂಬರ**=ಆಕಾಶ

## ೫೨ನೆಯ ಹಾಡು

ಇಲ್ಲಿ ಭಕ್ತನಿಗೆ ಸತ್ಸಂಗತಿಯ ಅವಶ್ಯಕತೆ ಇದೆ ಎಂಬುದನ್ನು ದಾಸರು ಇಲ್ಲಿ ಸಾರಿದ್ದಾರೆ

೧ **ವಾಕುವಾಕಿಗೆ**=ಮಾತುಮಾತಿಗೆ

**ಡೊಂಕ**=ತಪ್ಪನ್ನು

**ಪೋಕರು**=ಪೋಲಿಗಳು; ಕೀಳರು

೨ **ನುಡಿ**=ಆಡಿಕೊಳ್ಳು

**ಭಾವಿಸು**=ಆದರಿಸು

**ಹೇಯ**=ಅಸಭ್ಯ

೩ **ಅಡಗಿಸಿಕೊಳ್ಳು**=ಮರೆಮಾಡು

೪ **ತೆತ್ತಿಗ**=ಆಪ್ತ

**ಸಟೆ**=ಸುಳ್ಳು

**ಮತ್ತ**=ಸೊಕ್ಕಿದ

೫ **ಕೈಮೇಲಾಗು** = ಮಿತಿಮಿಕ್ಕು
**ಭ್ರಷ್ಟ** = ಅಹಂಕಾರಿ

## ೫೩ನೆಯ ಹಾಡು

೧ **ಇರಬೇಕು... ಇರಬೇಕು** = ಇದ್ದರೂ ಹಚ್ಚಿಕೊಳ್ಳದಂತಿರಬೇಕು.
**ಕುಲಸತಿ** = ಪತಿವ್ರತೆ

೨ **ತೇರುಂಡರು** = ವಿಚಾರಗೇಡಿ; ಹುಂಬ

ವಿ. ಸೂ. ಒಳ್ಳೆಯ ಸಂಸಾರವಿದ್ದರೆ ಸಂಸಾರದಲ್ಲಿದ್ದು ಭಕ್ತನು ತನ್ನ ಆದರ್ಶವನ್ನು ಸಾಧಿಸಬಹುದೆಂದು ಹೆಂಡಿರು ಮಕ್ಕಳು ದುಷ್ಟರಾದರೆ ಭಕ್ತ ಅಂತಹ ಸಂಸಾರವನ್ನು ಬಿಟ್ಟು ಹೊರಬೀಳುವುದೇಲೇಸೆಂದು ದಾಸರ ಅಭಿಪ್ರಾಯ.

## ೫೪ನೆಯ ಹಾಡು

೧ **ಬಾಯ್ಬಡಿಕರು** = ಬಾಯಿಗೆ ಬಂದಂತೆ ಮಾತಾಡುವವರು; ನಿಂದಕರು.
**ಬಯಲಾಸೆ** = ಸಂಸಾರದ ಮೋಹ.
**ಭಂಗಿಸು** = ಅಪಮಾನ ಮಾಡು.
**ಕಂಗೆಡಿಸು** = ದಿಕ್ಕೆಡಿಸು.

೨ **ಜಾಡಿ** = ಮಾತಿನಿಂದ ನೋಯಿಸಿ.
**ಹೂಡಿಸು** = ಇಲ್ಲದ ಅಪವಾದ ಹೊರಿಸು.
**ಹೊಂದುಗೊಳಿಸು** = ಸಾರ್ಥಕ ಮಾಡು.
**ಕೈವಲ್ಯ** = ಮುಕ್ತಿ.

೩ **ಪ್ರಾಯಶ್ಚಿತ್ತಕೆ ಇಕ್ಕು** = ಇನ್ನೊಮ್ಮೆ ಮಾಡದಂತೆ ಶಿಕ್ಷಿಸು.
**ದೂಷಿಸು** = ನಿಂದಿಸು.
**ನಿರ್ದೋಷ** = ಪಾಪರಾಹಿತ್ಯ.

ವಿ. ಸೂ.— ನಿಂದಕರು ಮತ್ತು ಬಾಯ್ಬಡಿಕರು ನನಗೆ ಸನ್ಮಾರ್ಗ ತೋರಿದರು,

## ೫೫ನೆಯ ಹಾಡು

ಹಿಂದಿನ ಹಾಡಿನ ವಿಚಾರವನ್ನೇ ಇಲ್ಲಿ ಮುಂದುವರಿಸಿರುವರು.
**ಅಭಿಮಾನ** = ದುರಹಂಕಾರ.

**ಕೌರವ** = ದುರ್ಯೋಧನ. ಧೃತರಾಷ್ಟ್ರ, ಗಾಂಧಾರಿಯರ ಹಿರಿಯ ಮಗ; ಪಾಂಡವರ ತೀವ್ರ ದ್ವೇಷಿ. ಇವನು ಕಲಿಯ ಅಂಶದಿಂದ ಹುಟ್ಟಿದವನೆಂದು ಭಾರತದಲ್ಲಿದೆ. ಭಾರತದ ಯುದ್ಧದ ಕೊನೆಯ ದಿನ ಭೀಮನು ಗದಾಯುದ್ಧದಲ್ಲಿ ಇವನನ್ನು ಕೊಂದನು. (ಭಾರತ. ಅದಿ. ೬೩-೬೪).

೨ **ಧ್ರುವ** = (ಸಂ. ೧. ಪು. ೨೯೪)
**ಅಪರೋಕ್ಷ** = ಪ್ರತ್ಯಕ್ಷ.
**ಕಾನನಚರರು** = ಋಷಿಗಳು.

## ೩೬ನೆಯ ಹಾಡು

ವಿವೇಕದಿಂದ ಬದುಕಿದರೆ ಮಾನವಜನ್ಮದಂತಹ ಸಾಧನಯೋಗ್ಯ ಜೀವನವು ಇನ್ನೊಂದಿಲ್ಲವೆಂದು ದಾಸರು ಹೇಳಿದ್ದಾರೆ.

೧ **ಮಣ್ಣುಮುಕ್ಕು** = ವಿಷಯವಾಸನೆಯಿಂದ ಹಾಳಾಗು
**ಹರಿನಾಮಾಮೃತವನು ಉಣ್ಣು** = ಹರಿನಾಮವನ್ನು ಸ್ಮರಿಸು
೨ **ವೇಳೆ** = ಆಯುಷ್ಯ
೩ **ಯದುಪತಿ** = ಕೃಷ್ಣ

## ೩೭ನೆಯ ಹಾಡು

೧ **ಕವಿ** = ಮುತ್ತಿಗೆ ಹಾಕು
**ಬಾಲತನದಲಿ.... ಹೊಡೆಯಿತೆ**—ಚಿಕ್ಕತನದಲ್ಲಿಯೇ ಹೊಟ್ಟೆಯೊಳ ,ಗಿನ ಬೇನೆ (ಬಾಲಗ್ರಹ) ಬಂದು ಬುದ್ಧಿಯನ್ನು ಕೆಡಿಸಿತೆ ?
**ಅಕಾಲ** = ಕಾಲತಪ್ಪಿ ಬರುವ
೨ **ಘಟಸರ್ಪ** = ಹೆಡೆಯುಳ್ಳ ಹಾವು (ನಾಗರಹಾವು)
**ಕಟಿಗರಿಸು** = ಹಲ್ಲಿಗೆ ಹಲ್ಲು ಕೂಡು

## ೩೮ನೆಯ ಹಾಡು

೧ **ಭೂತದಯಾಪರ** = ಪ್ರಾಣಿಗಳಲ್ಲಿ ದಯೆಯುಳ್ಳವ
೨ **ಭೇದಾಭೇದ** = ತಾರತಮ್ಯಜ್ಞಾನ
೩ **ಬಂದುದನುಂಡು ಸುಖಿಸಬೇಕು** = ಯದೃಚ್ಛಾಲಾಭಸಂತುಷ್ಟಃ (ಗೀತಾ. ೪/೨೨)

## ೪೯ನೆಯ ಹಾಡು

೧ **ತೀರ್ಥಪದ**=ಗಂಗೆಯನ್ನು ಪಾದದಲ್ಲಿ ಪಡೆದವ; ಶ್ರೀಹರಿ

೪ **ಪಂಚಭಕ್ಷ್ಯ**=ಭಕ್ಷ್ಯ, ಭೋಜ್ಯ, ಚೋಷ್ಯ, ಲೋಹ್ಯ, ಪೇಯ.

**ಪಂಚಾಮೃತ**= (ಆಕಳ) ಹಾಲು, ಮೊಸರು, ತುಪ್ಪ; ಜೇನುತುಪ್ಪ; ಸಕ್ಕರೆ; (ದುಗ್ಧಂಚ ಶರ್ಕರಾ ಚೈವ ಘೃತಂ ದಧಿ ತಥಾಮಧು—Apte PP. 578)

**ಪ್ರಪಂಚ**=ಸಂಸಾರ, ವ್ಯವಹಾರ

೫ **ಅರ್ಜುನಸಖ**=ಶ್ರೀಕೃಷ್ಣ

## ೫೦ನೆಯ ಹಾಡು

೧ **ಪುಟ್ಟುವ**=ಜನ್ಮತಾಳುವ.

**ಪೊಂದುವ**=ಮರಣಹೊಂದುವ.

**ನಿರಯ**=ನರಕ.

**ಕರ್ಮ**=ಪ್ರಾರಬ್ಧ.

ಅತಳ, ವಿತಳ, ಸುತಳ, ತಳಾತಳ. ರಸಾತಳ, ಮಹಾತಳ, ಪಾತಾಳ ಎಂಬ ಏಳು ಅಧೋ ಲೋಕಗಳು.

**ಯೋನಿ**=ಜನ್ಮ.

**ಬಿಯೋನಿ**=ಜಡಪದಾರ್ಥ.

೨ **ಭಂಗ**=ಅಪಮಾನ.

ಪುರಂದರದಾಸರು ತಮ್ಮ ದಾಸಜೀವನದಲ್ಲಿಯ ಲೌಕಿಕಕಷ್ಟಗಳನ್ನು ದೇವರಿಗೆ ಬಿನ್ನವಿಸಿಕೊಳ್ಳುತ್ತಾರೆ.

## ೫೧ನೆಯ ಹಾಡು

ನಾಮಸ್ಮರಣದಿಂದ ಜೀವನಗುರಿಯನ್ನು ಸಾಧಿಸಬೇಕೆನ್ನುವ ಅರಿವು ಹುಟ್ಟಿದಾಗ ಭಕ್ತನು ಈ ರೀತಿಯಲ್ಲಿ ನುಡಿಯಬಹುದು.

೨ **ಬಚ್ಚಿಟ್ಟುಕೊಳ್ಳು**=ಹೃದಯದಲ್ಲಿ ಇರಿಸಿಕೊಳ್ಳು; ಏಕಾಂತಭಕ್ತಿಯನ್ನು ಮಾಡು.

೩ **ತನ್ನೊಳಗೆ ಇದ್ದ........ತಂದರೆ** = ಮಾನಸಪೂಜೆಯಲ್ಲಿ ತನ್ನಲ್ಲಿದ್ದ ಬಿಂಬಮೂರ್ತಿಯನ್ನು ಮನಸ್ಸಿನಲ್ಲಿ ಕಂಡರೆ.

## ೬೨ನೆಯ ಹಾಡು

೧ **ಮುನ್ನಾದ** = ಹಿಂದೆ ಅನುಭವಿಸಿದ ಅಥವಾ ಸಂಚಿತವಾಗಿ ಬಂದ.
**ಮಟ್ಟಿ** = ಗೋಪೀಚಂದನ.
**ಮೂಗುಬೇರು** = ಮೂಗಿನಹೊರಳೆ.

೨ ಡಂಭಕ್ಕಾಗಿ ದಾನಮಾಡಿ ಒಡತನ ಅನುಭವಿಸುವುದನ್ನು ದಾಸರು ಒಪ್ಪುವುದಿಲ್ಲ.

೩ **ಕಾಕುದೈವ** = ಕ್ಷುದ್ರದೇವತೆಗಳು.
**ಬಾಯಬಡಕೊಳ್ಳು** = ಹೊಯ್ಕೊಳ್ಳು,

೪ **ಹಗರಣ** = (ತ್ಸ. ಪ್ರಕರಣ) ಪೀಡೆ.

## ೬೩ನೆಯ ಹಾಡು

ಎಲ್ಲ ಧರ್ಮಸಾಧನೆಗಳಲ್ಲಿಯೂ ಶ್ರೀಹರಿನಾಮಸ್ಮರಣೆಯೆ ಶ್ರೇಷ್ಠಸಾಧನವೆಂದು ದಾಸರು ಸಾರಿದ್ದಾರೆ.

೧ **ಪ್ರಹ್ಲಾದ** = (ಸಂ. ೧, ಪು. ೨೬೨)

೨ **ಚೇತನಾತ್ಮಕ**=ಚಿನ್ಮಯ; ಚಿತ್‌ಸ್ವರೂಪ

೩ **ವೆಗ್ಗಳ**=ಅತಿಶಯ
ವಿ. ಸೂ. ನಾಮಸ್ಮರಣೆಯಿಂದ ಜಾತಿ, ಪಂಥ, ಕುಲ, ಪಾಪ ಮುಂ. ಯಾವ ಭೇದ ಗಳೂ ಉಳಿಯವೆಂಬುದು ದಾಸರ ಅಭಿಪ್ರಾಯ.

## ೬೪ನೆಯ ಹಾಡು

೧ **ಯೋಗಿವರ + ಉದಿತ** = ಯೋಗೀಶ್ವರರು ಹೇಳಿದ
**ಸದಾಗಮ** = ಭಾಗವತ ಮುಂ. ಸಚ್ಛಾಸ್ತ್ರಗಳು

೨ **ಕುಯುಕ್ತಿವಂತ** = ಕುತರ್ಕಿ, ವಿತಂಡವಾದಿ

## ೬೫ನೆಯ ಹಾಡು

೧ **ನೋಲಿಪ್ಪಲೋಕ** = ವೈಕುಂಠ

೨ **ಕಾಯ** = ಶರೀರ
**ಮಾಯಾಪಾಶ** = ಅಜ್ಞಾನದ ಬಲೆ

೩ **ಹಿತವ**=ಕಲ್ಯಾಣ ಮಾಡುವವ

## ೬೬ನೆಯ ಹಾಡು

೧ **ಗೊಡವೆ**=ಉಸಾಬರಿ

೨ **ನುಂಕೊಂಡು**=ಆತುರಪಟ್ಟು

೩ **ಭ್ರಾಂತು**=ಹುಚ್ಚು

ವಿ. ಸೂ. ಭಕ್ತನು ಅಪೇಕ್ಷೆಪಟ್ಟು ಬಡತನವನ್ನು ಪುರಸ್ಕರಿಸಿರುತ್ತಾನೆ. ಅಂತಹ ಭಕ್ತನ ದಿನಚರಿ ಹೇಗಿರಬೇಕೆಂಬುದು ಈ ಹಾಡಿನಲ್ಲಿ ಇದೆ,

## ೬೭ನೆಯ ಹಾಡು

ಪರಮಾತ್ಮನ ಒಂದೊಂದು ನಾಮವೂ ಭಕ್ತನ ಒಂದೊಂದು ಆಪತ್ತಿಗೆ ಪರಿಹಾರವಾಗಿ ಪರಿಣಮಿಸುವುದೆಂಬುದು ಈ ಹಾಡಿನಲ್ಲಿ ಇದೆ.

೧ **ಏನೆಂದರೇನು**=ಯಾವ ಹೆಸರಿನಿಂದ ಕರೆದರೇನು ?

**ವ್ಯಾಪಾರ**=ಸಾಂಸಾರಿಕ ವ್ಯವಹಾರ.

೨ **ಸರುಪ**=(ತ್ಸ) ಸರ್ಪ.

೩ **ಬೆನ್ನುಗೊಳು**=ಬೆನ್ನುಹತ್ತು,

೪ **ಕಲ್ಮಷ**=ಪಾಪದ ಕೊಳೆ.

೫ **ಕಾರ್ಪಣ್ಯ**=ಕ್ಷುದ್ರಮನಸ್ಸು.

**ಪ್ರಕಾಶ**=ಜ್ಞಾನ.

**ತಿರುಮಲರಾಯ**=ವೆಂಕಟೇಶದೇವರು.

## ೬೮ನೆಯ ಹಾಡು

೧ **ಆರಾಧ್ಯ**=ಪೂಜ್ಯ.

**ಮದ್ದಾನೆಗಳೆಂಟು**=ಅಷ್ಟಮದ (ಹಾಡು ೧೮)

**ಅಧ್ಯಾತ್ಮಕೆ**=ಅಧ್ಯಾತ್ಮಜ್ಞಾನಕ್ಕೆ.

**ಹರಿನಾಮ**=ಹರಿಯನಾಮ (ಸಿಂಹದ ಹೆಸರು)

**ಶ್ರುತಿಮಾಡು**=ಸ್ವರಗೂಡಿಸು.

೨ **ಒಂದೇ ಮನಸು**=ದೃಢಚಿತ್ತ.

೩ **ಪಶುಜನರು**=ಅಜ್ಞಾನಿಗಳು.

## ೬೯ನೆಯ ಹಾಡು

೧ **ಕರ್ಮಬಂಧನಭೇದನ**=ಕರ್ಮದ ಕಟ್ಟನ್ನು ಸಡಿಲಿಸುವ (ರಾಮನಾಮ)

೬ **ಸದಮಲಧ್ಯಾನಗೋಚರ** = ನಿರ್ಮಲಮನಸ್ಸಿನಿಂದ ಮಾಡುವ ಧ್ಯಾನಕ್ಕೆ ಕಾಣುವವ.

೭ **ಹರಿಯದ**=ಅಕ್ಷಯವಾದ.

**ವೀರನಾರಾಯಣ** = (ಸಂ. ೧, ಪುಟ ೨೮೬)

ವಿ. ಸೂ.— ಈ ಹಾಡು 'ಕಲಿಯುಗದಲಿ ಹರಿನಾಮವ ನೆನೆದರೆ' ಎಂಬ ಪಲ್ಲವಿಯೊಂದಿಗೆ ಪ್ರಚಾರದಲ್ಲಿದೆ.

## ೭೦ನೆಯ ಹಾಡು

೨ **ಕಶ್ಮಲ** = ಪಾಪ

೩ **ಭಾಷೆಯುಳ್ಳವ** = ಸತ್ಯಸಂಕಲ್ಪ

## ೭೧ನೆಯ ಹಾಡು

೧ **ಮಧುಕರ**=ಜೇನುನೊಣ; ಭ್ರಮರ

**ಸತ್ಯಲೋಕ**=ಬ್ರಹ್ಮಲೋಕ

೨ **ಅರೋಹಣ** = ಹಸ್ತಪ್ರತಿಯಲ್ಲಿ ಹೀಗಿದೆ. ಆದರೆ ಸರಿಯಾದ ಅರ್ಥವಾಗುವುದಿಲ್ಲ. ಆರೋಗಣೆ ಎಂತಿದ್ದರೆ ಅರ್ಥವು ಸಮಂಜಸವಾಗುವುದು.

**ಆರೋಗಣೆ**=ಊಟ

**ವೀಸ**=ಚಿಕ್ಕನಾಣ್ಯ (೨೫ ವೀಸ = ೧ ಆಣೆ)

**ಬಣಗು** = ನಿಸ್ಸಾರ

೩ **ಯೋಗ**=ಶಾಸ್ತ್ರ

೬ **ಕೊಂಚೆಯೂರು** = (ಈ ಊರು ಯಾವುದೆಂಬುದು ಗೊತ್ತಿಲ್ಲ.)

**ಚೆನ್ನ**=ಚೆನ್ನಕೇಶವ

**ಕಾಳಂಜಿ**=ಅಗಲಬಾಯಿಯ ಪಾತ್ರೆ

## ೭೨ನೆಯ ಹಾಡು

೧ **ತ್ರಿಕರಣ**=ಮನೋವಾಕ್‌ಕಾಯ

**ಅಚಿಂತ್ಯ**=ಧ್ಯಾನವನ್ನು ಮಿಕ್ಕಿದ

**ಅನುಮಾನ**=ಸಂಶಯ

**ಬಿನುಗು**= ಕ್ಷುದ್ರ

**ಅಂಧಂತಮಸು**=ನರಕದಲ್ಲಿಯ ಅತಿ ಕತ್ತಲೆಯ ಭಾಗ. ನಿರುಪದ್ರವಿಯಾದ ಪ್ರಾಣಿಗಳನ್ನು ಕೊಂದವರು ಈ ನರಕಕ್ಕೆ ಹೋಗುವರು. (ಈಶಾವಾಸ್ಯ ೬)

**ತ್ರಿವಿಧ**= ಸಾತ್ವಿಕ, ರಾಜಸ, ತಾಮಸ ಎಂಬ ಮೂರು ವಿಧ

**ಅನಿಮಿಷರು** = ದೇವತೆಗಳು

೨ **ಅರತ** = ಆಸಕ್ತ; ತೊಡಗಿದ

**ಸಾಕ್ಷೀಭೂತ** = ತತ್ತ್ವಾಭಿಮಾನಿಗಳ ದೇವತೆಗಳ ಸಮಕ್ಷಮವಾದ

೩ **ಯಾಮ** = ಮೂರು ತಾಸು

**ಮಾಮನೋಹರನ ದಿನ** = ಹರಿದಿನ; ಏಕಾದಶಿ

**ಪೃಥಕು** (ಸ್ತ. ಪೃಥಕ್)=ಬೇರೆ.

**ಭೂಮಿಜಾಪತಿ**=ಸೀತಾಪತಿ; ಶ್ರೀಹರಿ.

**ಕಾಮುಕ** = ವಿಷಯಾಸಕ್ತ.

**ಕಾಮಾಚಾರಿಗಳಾಗಿ** = ಮನಸೇಚ್ಛೆಯಿಂದ ನಡೆದು.

**ಅಹೋದು** (ಅಪ್ಪುದು) = ಆಗುವುದು.

**ಭ್ರಾಮಕ** = ತಿಳಿಗೇಡಿ.

**ಸುಮ್ಮನವೆಂತೆಂಬ ಧಾಮದೊಳಗೆ**=ಶುದ್ಧಮನಸ್ಸೆಂಬ ಮನೆಯಲ್ಲಿ.

೪ **ನಿರುಪಾಧಿಕ** = ಆಶಾರಹಿತನಾಗಿ.

**ಪೋಗಾದು** = ಹೋಗಾಡಿಸು.

**ಅರಜ್ಞಾಣ** (ಜಾಣರಲ್ಲಿ ಅರಸು) = ಶ್ರೇಷ್ಠ ಜ್ಞಾನಿ.

೫ ವರ್ಣಾಭಿಮಾನಿಗಳು = ವರ್ಣಗಳಿಗೆ ಅಭಿಮಾನಿಯಾದ ದೇವತೆಗಳು.
ಹಿಂದುಗಳೆ = ತಿರಸ್ಕರಿಸು.
ಒಂದು .. ಪುಟ್ಟುವನೊ = ಬೇರೆಬೇರೆ ಜನ್ಮತಾಳುವವನು.

ವಿ. ಸೂ.— ಇದರಲ್ಲಿ ಭಗವದ್ಗೀತೆ, ನಾರದಭಕ್ತಿಸೂತ್ರ, ಶಾಂಡಿಲ್ಯಭಕ್ತಿಸೂತ್ರ ಇವುಗಳಿಗನುಸಾರವಾಗಿ ಭಕ್ತನ ಲಕ್ಷಣ, ಆಚಾರ, ವಿಚಾರಗಳನ್ನು ಕುರಿತು ದಾಸರು ಹೇಳಿದ್ದಾರೆ.

## ೭೩ನೆಯ ಹಾಡು

೧ ಕಾಡಲಿಲ್ಲ = ಕಾಡಿಬೇಡಲಿಲ್ಲ
ಸಡಗರದಿಂದ = ಆಡಂಬರದಿಂದ

೩ ಪ್ಯಾಗ = ಚಿಗುರೆ
ತಲೆ ಹುಳಿತ = ಹುಚ್ಚಾದ

## ೭೪ನೆಯ ಹಾಡು

೧ ಲಂಪಟೆ = ವಿಷಯಾಸಕ್ತ

೨ ಬಾಹೋದು = (ಬಪ್ಪುದು) ಬರುವುದು
ಆತನ್ನ = ಆತನ = ಯಮನ

೪ ಉಪನಯನ = ಮುಂಜಿ
ಅರ್ಧಿ = ಪರಿಪೂರ್ಣ
ಹೆಡತಲೆ = ತಲೆಯ ಪೆರಗು = ಹಿಂದಲೆ = ಬೆನ್ನಹಿಂದೆ
ಮಿೞಾ = ಜಳಕಮಾಡು
ಕಟ್ಟಕಡೆಯ ದಿವಸ ತುಂಬು = ಆಯುಷ್ಯಮುಗಿ

## ೭೫ನೆಯ ಹಾಡು

೧ ಧಾರಣಿ = ಉಪವಾಸದ ವ್ರತ
ಪಾರಣೆ = ಉಪವಾಸ ಮುರಿದು ಉಣ್ಣುವ ದಿನ

೨ ನಿತ್ಯಯಾತ್ರೆ = ಶುಕ್ಲವೃತ್ತಿ (ಸುಕಲೂರ್ತಿ)

## ೭೬ನೆಯ ಹಾಡು

೧ **ಚೀನಾಂಬರ**=ರೇಶ್ಮೆಬಟ್ಟೆ
**ಸನ್ನೆ**= (ತ್ಸ) ಸಂಜ್ಞಾ : ಮನೋಭಾವವನ್ನು ತಿಳಿಸುವ ರೀತಿ

೨ **ಎಂಟುಭಾಗ್ಯ**=ರಾಜ್ಯ, ಭಂಡಾರ, ಸೈನ್ಯ, ಆನೆ, ಕುದುರೆ, ಛತ್ರ. ಚಾಮರ, ಪಲ್ಲಕ್ಕಿ.
**ಕಂಠಕೆಹೊದ್ದಿದ**=ಕೊರಳಿಗೆ ಬಿದ್ದ

೩ **ವಾತಘಾತ**=ವಾತವಿಕಾರ

## ೭೭ನೆಯ ಹಾಡು

೧ **ತುತ್ತುಬುತ್ತಿಯ ಕೊಟ್ಟು**=ಪ್ರೀತಿಯಿಂದ ಉಣಿಸಿ
**ಬಾಹಳೆ**= (ಬಪ್ಪಳೆ) ಬರುವಳೆ

೨ **ಕರವಿಡಿದು**=ಪಾಣಿಗ್ರಹಣಮಾಡಿ
**ಕೈಧಾರೆಎರಿಸಿಕೊಂಡು**=ಕನ್ಯಾದಾನ ಮಾಡಿಕೊಟ್ಟೆನೆಂದು ಧಾರೆ ಎರಿಸಿಕೊಂಡು

೧ **ಘನ**=ಸಾಕಷ್ಟು

೨ **ಆತ್ಮಬಳಲು**=ಸಾಯಿ
**ಬಾಹೋರು**= (ಬಪ್ಪರು) ಬರುವರು

೫ **ಹರಣ**=(ತ್ಸ) ಪ್ರಾಣ
**ಪರಲೋಕ**=ಸ್ವರ್ಗಲೋಕ
**ಸಾಯುಜ್ಯ**=ಮೋಕ್ಷದ ಒಂದು ಪ್ರಕಾರ

## ೭೮ನೆಯ ಹಾಡು

೧ **ಬಯಲ**=ವ್ಯರ್ಥ

೨ **ಸಡಗರ**=ಒಯ್ಯಾರ

೪ **ಕುಟ್ಟಿಕೊಂಡು**=ಬಡಬಡಕೊಂಡು

## ೭೯ನೆಯ ಹಾಡು

೧ **ಕೋತಿ** = ಚಂಚಲವಾದ.
**ಲಯ** = ನಾವು.

ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ
ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ಭ. ಗೀತಾ ೨, ೨೮

೨ **ಪತ್ರ** = ಗರಿ.

೩ **ಹೊರೆ** = ಸಲಹು.
**ಬಸಿರು** = ಮನಸ್ಸು,

## ೮೦ನೆಯ ಹಾಡು

೧ **ಅಚ್ಯುತಪದ** = ಮೋಕ್ಷ.

೨ **ನಿರ್ಜರು** = ದೇವತೆಗಳು.

## ೮೧ನೆಯ ಹಾಡು

೧ **ಗೀತ** = ಸಾಹಿತ್ಯಕೃತಿ; ಕೀರ್ತನೆ.

೩ **ಅನಿಚ್ಚ** = ಅನಿತ್ಯ; ಅಸ್ಥಿರ.

೪ **ಮೂರುದಿನದ ಸಂಸಾರ** = ಅನಿತ್ಯ ಸಂಸಾರ

## ೮೨ನೆಯ ಹಾಡು

೧ **ತುಂಬಿರುವ ಪಟ್ಟಣ** = ದೇಹ
**ಒಂಬತ್ತುಬಾಗಿಲು** = ನವದ್ವಾರ (ಮೂಗಿನ ಎರಡು ಹೊರಳ್, ಎರಡು ಕಣ್ಣು, ಎರಡು ಕಿವಿ; ಬಾಯಿ; ಗುದ, ಯೋನಿ)
**ಅಯ್ದುಮಂದಿ** = ಪಂಚೇಂದ್ರಿಯ (ಜ್ಞಾನೇಂದ್ರಿಯ)

೨ **ನೆಲೆಯು ಇಲ್ಲದ** = ಅಸ್ಥಿರವಾದ

೩ **ದುರಿತ** = ಪಾಪ

## ೪೩ನೆಯ ಹಾಡು

೧ **ಅಜಮಿಳ**=(ಸಂ. ೧. ಪು. ೨೬೪)

**ಅಯ್ದಾರು**=ಪಂಚೇಂದ್ರಿಯ; ಷಡ್ರಿಪು.

**ಕಾಶಿ**=(ಸಂ. ೧, ಪು. ೨೯೨)

೨ **ಬೆಟ್ಟದೊಡೆಯ**=ತಿರುಪತಿ ವೆಂಕಟೇಶ.

## ೪೪ನೆಯ ಹಾಡು

೧ ಗಾಳಿಬಂದ ಕೈಯಲಿ ತೂರಿಕೊಳ್ಳಿರೊ, ಕಾಲವು ಅನುಕೂಲವಾಗಿರುವಾಗ ಕೆಲಸ ಸಾಧಿಸಬೇಕು.

**ಅಪರಬುದ್ಧಿ**=ಕೀಳುಬುದ್ಧಿ.

**ಅನಿರುದ್ಧ**=ಭಾಗವತ ಧರ್ಮದಲ್ಲಿ ಹೇಳಿದ ವಿಷ್ಣುವಿನ ನಾಲ್ಕು ವ್ಯೂಹ (ಚತುರ್ವ್ಯೂಹ) ಮೂರ್ತಿಗಳಲ್ಲಿ ಒಬ್ಬ. (ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ವಾಸುದೇವ,)

## ೪೫ನೆಯ ಹಾಡು

ಈ ಹಾಡಿನಲ್ಲಿ ಭಕ್ತಿ ಇಲ್ಲದ ದೇಹದಂಡನೆ ವ್ಯರ್ಥವೆಂದು ದಾಸರು ಹೇಳಿದ್ದಾರೆ.

೧ **ಹೀನಭುದ್ಧಿ**=ಕೀಳುವಿಚಾರ.

## ೪೬ನೆಯ ಹಾಡು

೧ **ಸುಲಲಿತ+ಆತ್ಮ**=ಸುಂದರ ರೂಪವುಳ್ಳವ ('ಕಾಮುಪಿತ' ಹೋಲಿಸಿ, ನೋಡಿರಿ)

**ಇಕ್ಷುದಂಡ**=ಕಬ್ಬಿನಗಳ.

**ಇಂಧನ**=ಕಟ್ಟಿಗೆ.

**ನಿಕ್ಷೇಪ**=ಹುಗಿದಿಟ್ಟ.

೨ **ಸುರಧೇನು**=ಕಾಮಧೇನು.

**ಗರಳ**=ವಿಷ.

**ತರಣಿ**=ಸೂರ್ಯ.

**ಡಂಬರ**=ಆಡಂಬರ.

## ೮೭ನೆಯ ಹಾಡು

೧ **ಕಾಲಬಂಟರು**=ಯಮದೂತರು.
**ಔಕು**=ಹಿಚುಕು.

೨ **ನ್ಯೈಮರೆ**=ನಾಯಿ.

೩ **ಕರಿ**=ಗಜೇಂದ್ರ (ಸಂ. ೧. ಪು. ೨೫೮),
**ಪ್ರಹ್ಲಾದ**=(ಸಂ. ೧. ಪು. ೨೬೨)
**ಪತಿಕರಿಸು**=ಬೆನ್ನುಕಟ್ಟು; ಎತ್ತಿಹಿಡಿ.

## ೮೮ನೆಯ ಹಾಡು

೧ **ನಾರದ**=(ಸಂ. ೧. ಪು ೨೫೭)
**ನಗಧರ**=(ಸಂ, ೧. ಪು. ೨೬೫).
**ಮುರಹರ**=(ಸಂ. ೧. ಪು ೨೬೫)
**ಭವಭಂಜನ**=ಜನ್ಮಗಳನ್ನು ಕಳೆಯುವವ.
**ನರಮೃಗ**=ನರಸಿಂಹ.

೨ **ಜಲಧಿಶಯನ**=ಕ್ಷೀರಸಾಗರಶಯನ, ನಾರಾಯಣ.
**ರವಿಚಂದ್ರಲೋಚನ**=ಸೂರ್ಯಚಂದ್ರರು ಕಣ್ಣಾಗಿ ಉಳ್ಳವ.
**ಜಲರುಹಭವ**=ಬ್ರಹ್ಮ.
**ನುತ**=ಸ್ತುತಿಸಿಕೊಳ್ಳುವ.
**ಬಲಿ**=(ಸಂ. ೧ ಪು. ೨೬೨)
**ನಳಿನೋದರ**=ಪಂಜಕನಾಭ; ಕಮಲನಾಭ.

೩ **ಮೋದ**=ಆನಂದಕೊಡುವವ.

## ೮೯ನೆಯ ಹಾಡು

೧ **ಹಯವದನ**=ಪರಮಾತ್ಮನ ಒಂದು ಅವತಾರ; (ಹಯಗ್ರೀವ).
ಮಹಾವಿಷ್ಣು ಕ್ರಿಡಿಸುತ್ತಿರುವಾಗ ಲಕ್ಷ್ಮಿಯನ್ನು ನೋಡಿ ನಕ್ಕ, ನಿನ್ನ ತಲೆ ಉರುಳಿ ಹೋಗಲಿ ಎಂದು ಲಕ್ಷ್ಮಿ ಶಾಪಕೊಟ್ಟಳು. ಬಳಿಕ ಅವನು ಕ್ಷೀರಸಮುದ್ರದಲ್ಲಿ ಆದಿಶೇಷನ ಮೇಲೆ ಮಲಗಿ ತನ್ನ ಶಾರ್ಙಧನುವನ್ನು ತಲೆಗಿಂಬು ಮಾಡಿ

ಕೊಂಡು ನಿದ್ದೆಮಾಡುತ್ತಿದ್ದನು. ಆಗ ಮಧುಕೈಟಭರೆಂಬ ರಾಕ್ಷಸರು ಲೋಕ ಕಂಟಕರಾಗಲು ದೇವತೆಗಳು ವಿಷ್ಣುವಿನಲ್ಲಿಗೆ ಬಂದು ನಿದ್ರಿಸುತ್ತಿರುವುದನ್ನು ಕಂಡರು. ದೇವತೆಗಳು ಆಗ ಗೆದ್ದಲಿಯನ್ನು ಹುಟ್ಟಿಸಿ ಅದಕ್ಕೆ ಯಜ್ಞದಲ್ಲಿ ಹವಿರ್ಭಾಗ ಕೊಡುವಂತೆ ಅಭಯಕೊಟ್ಟು ವಿಷ್ಣುವಿನ ಧನುಸ್ಸಿನ ಹೆದೆಯನ್ನು ಕತ್ತರಿಸ ಹೇಳಿದರು. ಗೆದ್ದಲು ಹೆದೆಯನ್ನು ತಿನ್ನಲಾಗಿ ಬಿಲ್ಲಿನ ತುದಿ ಹಾರಿ ವಿಷ್ಣುವಿನ ಕೊರಳು ಹೋಯಿತು. ದೇವತೆಗಳು ಕುದುರೆಯ ಮುಂಡಕ್ಕ ಸೇರಿಸಿದರು. ಇದೇ ಹಯ-ಗ್ರೀವರೂಪ (ಭಾರತ, ಉದ್ಯೋಗ ೧೩೦)

ಇದೇ ರಿತಿಯ ಕಥೆ ತೈತ್ತಿರೀಯ ಸಂಹಿತೆಯಲ್ಲಿ (೬/೪, ೯, ೧) ಬರುತ್ತಿದೆ.

೨ **ಲಂಡತನ** = ಧರ್ಮವಿರುದ್ಧ ನಡತೆ.

**ಬೆನ್ನಾತು** = ಆಶ್ರಯಕೊಟ್ಟು.

## ೯೦ನೆಯ ಹಾಡು

೧ **ವಾಕುವೊರೆ** = ಪ್ರಾರ್ಥನೆ.

**ತುಲಸೀ:**— ಧರ್ಮಧ್ವಜ ಮತ್ತು ಮಾಧವಿಯರ ಮಗಳು. ತುಂಬ ಪತಿವ್ರತೆ. ಇವಳ ಪಾತಿವ್ರತ್ಯದ ಯೋಗದಿಂದಲೇ ಇವಳ ಗಂಡನಾದ ಶಂಖಚೂಡನು ದೇವತೆಗಳಿಗೆ ಅಂಜಿಕ್ಕನಾಗಿದ್ದನು. ವಿಷ್ಣು ಕಪಟದಿಂದ ಇವಳ ಪಾತಿವ್ರತ್ಯಭಂಗಮಾಡಿ ದೇವತೆಗಳ ಕಾರ್ಯ ಸಾಧಿಸಿಕೊಟ್ಟನು. ಎಂತಲೆ ತುಲಸಿ ವಿಷ್ಣುವಿಗೆ ನೀನು ಶಿಲಾರೂಪನಾಗುವಿ ಎಂದು ಶಾಪಕೊಟ್ಟಳು. ಅದರಂತೆ ವಿಷ್ಣು ಶಾಲಿಗ್ರಾಮವಾದನು (ಬ್ರಹ್ಮವೈವರ್ತ ೨/೨೧) ಒಮ್ಮೆ ಇವಳು ಗಣಪತಿಯ ಬಳಿಗೆ ಕಾಮುಕಳಾಗಿ ಹೋದಾಗ ನೀನು ಗಿಡವಾಗಿ ಹುಟ್ಟು ಎಂದು ಶಾಪಕೊಟ್ಟ. ಸಮುದ್ರಮಥನದ ಕಾಲದಲ್ಲಿ ಹೊರಟ ಅಮೃತದ ಕೆಲವು ಹನಿಗಳು ನೆಲದಮೇಲೆ ಬೀಳಲು ಅವುಗಳಿಂದ ತುಳಸಿಗಿಡ ಹುಟ್ಟಿತು. ಬ್ರಹ್ಮದೇವನು ಅದನ್ನು ವಿಷ್ಣುವಿಗೆ ಕೊಟ್ಟನು (ಪದ್ಮ, ಸೃ. ೬೧.)

**ಶ್ರೀದಾರಾಮನೋಹರ** = ಲಕ್ಷ್ಮಿ ಎಂಬ ಹೆಂಡತಿಯ ಪ್ರಿಯ.

## ೯೧ನೆಯ ಹಾಡು

೧ **ಕರಿ** = ಗಜೇಂದ್ರ (ಸಂ. ೧ ಪು. ೨೫೮)

**ಧ್ರುವ** = (ಸಂ. ೧. ಪು. ೨೬೧)

**ಬಲಿ** = (ಸಂ. ೧. ಪು. ೬೨೬),

**ಪಾಂಚಾಲಿ** = (ಸಂ, ೧. ಪು. ೨೧೫)

**ಅಹಲ್ಯೆ** = ಗೌತಮಸತಿ
**ಕಂತೆ** = ತೇಪೆಯ ಕೌದಿ—ನಿರರ್ಥಕವಾದ ಕತೆಗಳಿಂದ ಕೂಡಿದ ಪುರಾಣ.

## ೯೨ನೆಯ ಹಾಡು

ಇಲ್ಲಿ ಪರಮಾತ್ಮನನ್ನು ವೈದ್ಯನೆಂದು ಭಾವಿಸಿ ದಾಸರು ಹಾಡಿದ್ದಾರೆ.

೧ **ವೈದ್ಯ** = ವೈದ್ಯಕ; ಔಷಧಶಾಸ್ತ್ರ.
**ಆದಿವೈದ್ಯ** = ಧನ್ವಂತರಿ.
**ಪಾದೋದಕ** = ಪಾದದ ಅಭಿಷೇಕದ ನೀರು.
**ವ್ಯಾಧಿ** = ಬೇನೆ.

೩ **ಉಷ್ಣವಾಯು** = ಬೇನೆಯ ಪ್ರಕಾರ.

೫ **ಪಂಡಿತ**=ವೈದ್ಯಶಾಸ್ತ್ರನಿಪುಣ,
**ಪಾಂಡುರೋಗ** = ರಕ್ತಕ್ಷಯ (Anaemia) ಕಾಮಣಿ.

## ೯೩ನೆಯ ಹಾಡು

೧ **ಪ್ರಹ್ಲಾದ** = (ಸಂ. ೧. ಪು. ೨೬೨).
**ವಿಶ್ವಮಯ** = ವಿಶ್ವವ್ಯಾಪಿ.

೨ **ಕುರುಪತಿ** = ದುರ್ಯೋಧನ, (ಹಾಡು, ೫೫)
**ದ್ರೌಪದಿ** = (ಸಂ. ೧. ಪು. ೨೧೫)
**ಹಸ್ತಿನಾಪುರ** = (ಸಂ. ೧, ಪು. ೨೪೫)
**ದ್ವಾರಾವತಿ** = (ಸಂ. ೧. ಪು. ೨೪೪)

೩ **ಅನಂತಾಸನ** = ಶ್ರೀಹರಿಯ ತ್ರಿಧಾಮಗಳಲ್ಲಿ ಒಂದು.
**ಮುಮ್ಮನೆ** = (ಮನೆಯ ಮುಂದು) ಪಡಸಾಲೆ.

೪ **ಶ್ವೇತದ್ವೀಪ** = ಶ್ರೀಹರಿಯ ತ್ರಿಧಾಮಗಳಲ್ಲಿ ಒಂದು.

೫ **ಅಣು** = ವಸ್ತುವಿನ ಅತಿ ಚಿಕ್ಕ ಕಣ.
**ಮಹತ್ತು** = ಅತಿ ದೊಡ್ಡ ವಸ್ತು.

ವಿ. ಸೂ — ಈ ಹಾಡಿನಲ್ಲಿ ಭಕ್ತರು ಕರೆದಲ್ಲಿ ಪರಮಾತ್ಮನು ಬರುವನೆ ಹೊರತು ಭಕ್ತಿಯಿಲ್ಲದವನಿಗೆ ಕ್ಷೇತ್ರಗಳಲ್ಲಿಯೂ ದೇವನು ಸಿಕ್ಕಲಾರನೆಂದು ದಾಸರು ಸೂಚಿಸಿದ್ದಾರೆ.

## ೯೪ನೆಯ ಹಾಡು

೧ **ಐವ್ವರು** = ಪಂಚೇಂದ್ರಿಯಗಳು.

೨ **ಚೋದ್ಯ** = ಆಶ್ಚರ್ಯ.

ವಿ. ಸೂ.— ಹರಿಭಕ್ತರ ನಿತ್ಯಚರ್ಯೆ ಹೇಗಿರಬೇಕೆಂಬುದನ್ನು ಈ ಹಾಡಿನಲ್ಲಿ ವಿವರಿಸಲಾಗಿದೆ.

## ೯೫ನೆಯ ಹಾಡು

೧ **ರಾಜೀವ** = ಕಮಲ.

**ಅರುಣ** = (ಸಂ. ೧. ಪು. ೩೧೨)

೨ **ಅಗ್ರೋದಕ** = ಅಗ್ರ + ಉದಕ = ಮೊಸಲು ಮಡಿನೀರು.

( ಅರ್ಘ್ಯೋದಕವು ಅಗ್ರೋದಕವೆಂದಾಗಿದೆಯೆ? )

೩ **ನಳನಳಿಸುವ** = ಕೋಮಲವಾದ.

**ಕಳೆ** = ಸೌಂದರ್ಯ; ಕಾಂತಿ.

೪ **ಪರಮಾನ್ನ** = ಪಾಯಸ.

**ಶಾಲ್ಯನ್ನ** = ಸಣ್ಣಕ್ಕಿ.

**ಮಧು** = ಜೇನುತುಪ್ಪ.

೫ **ಉರಗಾದ್ರಿ** = ಶೇಷಾದ್ರಿ. (ತಿರುಪತಿ— ಸಂ. ೧-೨೩೮)

**ಸ್ವಾಮಿಪುಷ್ಕರಿಣಿ** = (ಸಂ. ೧. ಪು ೨೫೪).

**ತಿರುವೆಂಗಳಪ್ಪ** = ತಿರುಪತಿಯ ವೆಂಕಟೇಶ.

## ೯೬ನೆಯ ಹಾಡು

೧ **ಬರಗು** = ಬಂದು ಬಗೆಯ ಧಾನ್ಯ. (ಬಿತ್ತಿದ ೨೦ ದಿವಸಗಳಲ್ಲಿ ಬೆಳೆಬರುತ್ತದೆ: ಬರಗಾಲದಲ್ಲಿ ಇದನ್ನು ಬಿತ್ತಿಬೆಳೆಯುವ ಪರಂಪರೆ ಇದೆ.)

**ಕಲಸೋಗರ** = ಬುತ್ತಿ.

**ಪರಾತ್ಪರ**=ಶ್ರೇಷ್ಠತಮ.

೨ **ಅಡಿಗಂಟು ದವಸ**=ಮುಗ್ಗಾದ ಹಳೆಯ ಕಾಳು.

**ದವಸ**=ಧಾನ್ಯ.

**ಸಾಕಾರ**=ರೂಪತಾಳಿರುವ. ಪ್ರತ್ಯಕ್ಷ.

೩ **ಚಿಲಿಪಾಲು**=ಕಾಯಿಸಿ ಆರಿಸಿದ ಹಾಲು.

**ರಾಜಾನ್ನ**=ಸಣ್ಣಕ್ಕಿ ಅನ್ನ.

**ಸ್ಥಿತಿ**=ರೀತಿ.

**ದ್ವಿತಯ**=ದ್ವಂದ್ವ. ಜೋಡಿ.

## ೯೭ನೆಯ ಹಾಡು

೧ **ತಿರುಗು**=ಜನ್ಮ ಮರಣ ಚಕ್ರದಲ್ಲಿ ಹಾಯು.

**ಕರಕರೆ**=ಚಿಂತೆ, ಕೊರಗು.

೨ **ಹೋಗಿಬುವವರುಪಟಿಳ** = ದೇಶಕಾಲಾನುಸಾರವಾಗಿ ದೇಹದಲ್ಲು ಉಂಟಾಗುವ ವಿಕೃತಿಗಳ ಉಪದ್ರವ,

**ವೈರಿವರ್ಗ**=ಷಡ್ವೈರಿಗಳು.

**ಊರಿ**=ಸ್ಥಿರವಾಗಿ.

**ಅಟ್ಟುಳಿ**=ಕಾಟ.

೩ **ನ್ಯಾಯುಮಾಡಿಸು**=ನಿರ್ಣಯಿಸು.

೪ **ನಾಮಾಂಕಿತ**=ಹೆಸರಿಗೆ ಮಾತ್ರ.

**ಮನೆಮನೆಯುಲಿ**=ದೇಹದ ಪ್ರತಿಯೊಂದು ಭಾಗದಲ್ಲಿ ತತ್ತ್ವೇಶರು ಇರುವರೆಂಬ ಭಾವನೆ.

**ವಿಕ್ರಮ**=ಶೂರ.

೫ **ಕಾಲಕ್ಕೆ**=ಮರಣಕಾಲದಲ್ಲಿ.

**ಆಳುಗಳು**=ವಿಷ್ಣುದೂತರು.

೬ **ಅನುವಾದ**=ಅನುಕೂಲವಾದ.

ಮೊನೆಗಾರ=ಶೂರ ಸೈನಿಕ.
ಕೊನೆಗೊಂಡು=ಕೊನೆಯವರೆಗೆ.

೭ ಬಹುನಾಯಕರು=ಪಂಚೇಂದ್ರಿಯ, ಷಡ್ರಿಪು ಮುಂ.

## ೯೮ನೆಯ ಹಾಡು

೩ ಪುಷ್ಪಶರ=ಕಾಮ.

## ೯೯ನೆಯ ಹಾಡು

೧ ಹಾರಿಡೊಂಬಲಾಗಹಾಕು = ಬೇರೆಬೇರೆ ರೀತಿಯಲ್ಲಿ ಪ್ರಯತ್ನ ಮಾಡು.

೧ ಕನ್ನಹೋಗು=ಕನ್ನಹಾಕಿ ಕಳವುಮಾಡು.

## ೧೦೦ನೆಯ ಹಾಡು

೧ ಮರುಳಾಟ=ದಡ್ಡತನ. ಹುಚ್ಚಾಟ,
ಊರ್ಧ್ವಪುಂಡ್ರ=ಉದ್ದನಾಮ (ವೈಷ್ಣವರ ಚಿಹ್ನೆ),
ಶೀಲ=ಆಚಾರ.

೨ ಮೃತ್ತಿಕಾಶೌಚ = ಪ್ರಾತರ್ವಿಧಿಯಕಾಲದಲ್ಲಿ ಶುದ್ಧೀಕರಣಕ್ಕಾಗಿ ಮಣ್ಣುಹಚ್ಚಿ ಕೈಕಾಲು ತೊಳೆದುಕೊಳ್ಳುವುದು.
ಹಸ್ತಕಟ್ಟಲರಿಯದವಗೆ=ಕೈಯಿಂದ ಕಳವು ಮುಂ. ಪಾಪಕಾರ್ಯ ಮಾಡುವವನಿಗೆ.
ಅಗ್ನಿಹೋತ್ರ=ಯಜ್ಞ;
ಹೋಗು=ಸಂಭೋಗ ಮಾಡು.

೧ ಹಸಿವೆತೃಷೆಯ ತಾಳದವನು=ಆತ್ಮಸಂಯಮನ ಮಾಡದವನು.
ಪರದಕುಶಲ=ಪರಲೋಕದ ವಿಚಾರ.
ಅಶನ=ಆಹಾರ.

೪ ಮೂಲಮಂತ್ರ=ಓಂನಮೋ ವಾಸುದೇವಾಯ.
ತಂಡ=ಅಸಂಖ್ಯ.

**ಪುಂಡರೀಕವರದ**=(ಸಂ. ೧, ಪು. ೨೫೭)

## ೧೦೧ನೆಯ ಹಾಡು

೩ **ಓತಿ**=ಓತಿಕೇತ (ಓತಿಕಾಟ).

ವಿ ಸೂ.— ಶುದ್ಧ ಭಕ್ತಿಯಿಲ್ಲದೆ ಮಾಡುವ ಡಂಭಾಚಾರದ ಆಚಾರ ಪೂಜೆಗಳು ನಿರರ್ಥಕವೆಂಬ ಮಾತನ್ನು ಇಲ್ಲಿ ದಾಸರು ತೀವ್ರವಾಗಿ ಖಂಡಿಸಿ ಹೇಳಿದ್ದಾರೆ.

## ೧೦೨ನೆಯ ಹಾಡು

೧ **ದೂರುಬರುವ ...ತಪ್ಪೀತೆ**=ಅಪವಾದ ಬರುವಂತೆ ಇನ್ನೊಬ್ಬರ ಜತೆಯಲ್ಲಿ ವಿಶ್ವಾಸದಿಂದ ನಡೆದುಕೊಂಡರೆ, ಅದರ ಸಂಗಡ ದುಷ್ಟತನವು ಕಟ್ಟಿಟ್ಟಮಾತು.
**ಊರಬಿಟ್ಟು....ಬೇರಾದಿತೇ**=ಪ್ರಾರಬ್ಧವು ಜನ್ಮಜನ್ಮಾಂತರದಿಂದ ಬಂದು ಅನುಭಸಲೇಬೇಕಾದುದರಿಂದ ಅದು ಎಲ್ಲಿ ಹೋದರೂ ತಪ್ಪದು

೨ **ಪಾಟೆಪಡು**=ಕಷ್ಟಪಡು.
**ಪಟ್ಟವಮಂಚ**=ಸಿಂಹಾಸನ.

೩ **ಅಣೆ**=ಸಾಧ್ಯವಾಗು.

## ೧೦೩ನೆಯ ಹಾಡು

೧ **ಇಂಬುಗೊಡದ**=ಮತ್ತೆಮತ್ತೆ ಬರದ.
**ವಿಭೀಷಣ**=(ಸಂ. ೧ ಪು. ೨೧೨)

೨ **ಹಿರಣ್ಯಕ**=ಪ್ರಹ್ಲಾದನ ತಂದೆ,

## ೧೦೪ನೆಯ ಹಾಡು

೨ **ಸತುವ**=(ತ್ಸ) ಸತ್ತ್ವ.

## ೧೦೫ನೆಯ ಹಾಡು

೧ **ಬಲ್ಲಿದ**=ಶ್ರೇಷ್ಠ; ಹೆಚ್ಚಿನವ.
**ನಿಧಾನಿಸಿ**=ವಿಚಾರಮಾಡಿ.

**ಜಲಜಭವಾಂಡ**= ವಿಶ್ವ (ಬ್ರಹ್ಮಾಂಡ)
**ಅನುದಿನ**= ತಪ್ಪದೆ

೨ **ಪುರುಹೂತ**=ಇಂದ್ರ; ದೇವತೆಗಳ ಅರಸು; ಕಶ್ಯಪ–ಅದಿತಿಯರ ಮಗ. ಸ್ವರ್ಗಲೋಕದ ಒಡೆಯ. ದೈತ್ಯರ ಸಂಗಡ ಇವನ ಹೋರಾಟವು ಪುರಾಣ ಪ್ರಸಿದ್ಧವಾಗಿದೆ ನರಲೋಕದ ರಾಜರನ್ನು ಕರೆಯಿಸಿಕೊಂಡು ತನ್ನ ವೈರಿಗಳನ್ನು ಸದೆಬಡೆದ ಉದಾಹರಣೆಗಳೂ ಇವೆ. ಅಹಲ್ಯೆಯ ಪಾಪಕ್ಕೆ ಇವನೆ ಕಾರಣನಾಗಿ ಸಹಸ್ರಾಕ್ಷನೆಂಬ ಹೆಸರನ್ನು ಗೌತಮನ ಶಾಪದಿಂದ ಪಡೆದನು.

**ಪಾರ್ಥನ ರಥಕೆ ಸೂತನಾದ ಮೇಲೆ:**— ಮಹಾಭಾರತ ಯುದ್ಧ ಪ್ರಾರಂಭದಲ್ಲಿ ಕೃಷ್ಣನ ಸಹಾಯ ಪಡೆಯಲು ಅರ್ಜುನ ಮತ್ತು ದುರ್ಯೋಧನರಿಬ್ಬರೂ ಹೋಗುತ್ತಾರೆ. ಆಗ ಕೃಷ್ಣನು ತಾನೊಬ್ಬನೇ ಒಂದು ಕಡೆ, ಯಾದವ ಸೈನ್ಯವೆಲ್ಲವೂ ಒಂದು ಕಡೆ. ಇವರಲ್ಲಿ ಬೇಕಾದುವನ್ನು ಆರಿಸಿಕೊಳ್ಳಿರೆಂದು ಹೇಳಿದನು ಅರ್ಜುನನು ಕೃಷ್ಣನನ್ನೇ ಆರಿಸಿಕೊಳ್ಳಲು ಅವನ ಸಾರಥಿಯಾದನು. (ಭಾರತ. ಉದ್ಯೋಗ. ೭)

೩ **ಊಳಿಗ**= ಸೇವೆ

೪ **ಧುರದಲಿ ಪಣೆ .. ಪಿಡಿಯೆ :**— ಮಹಾಭಾರತ ಯುದ್ಧದಲ್ಲಿ ಭೀಷ್ಮನು ಸೇನಾಪತಿಯಾಗಿ ಹತ್ತು ದಿವಸ ಪರಾಕ್ರಮದಿಂದ ಕಾದಾಡಿದನು. ಇನ್ನೂ ಗೆಲುವಾಗದಿರಲು ಇಂದು ಕೃಷ್ಣನ ಕೈಯಲ್ಲಿ ಚಕ್ರವನ್ನು ಹಿಡಿಸಿಯೇ ಬಿಡುವೆನೆಂದು ಪ್ರತಿಜ್ಞೆ ಮಾಡಿ ರಣರಂಗದಲ್ಲಿ ತೀಕ್ಷ್ಣವಾದ ಬಾಣದಿಂದ ಅರ್ಜುನನು ಮೂರ್ಛೆ ಹೋಗುವಂತೆ ಮಾಡಿದನು. ಇದರಿಂದ ಸಿಟ್ಟಿಗೆದ್ದ ಕೃಷ್ಣನು ಭೀಷ್ಮನನ್ನು ಕೊಂದೇ ತೀರುವೆನೆಂದು ರಥದಿಂದಿಳಿದು ಹೊರಟನು. (ಭಾರತ. ಭೀಷ್ಮ ೧೦೬)

**ಹರಿ ನಿನ್ನ ಕರುಣದ... ಮೇಲೆ:**— ಭೀಷ್ಮನು ಶ್ರೀಕೃಷ್ಣನ ಪರಮಭಕ್ತ. ಕೃಷ್ಣನು ರಥದಿಂದ ಇಳಿದು ಬರುವುದನ್ನು ನೋಡಿ ತಾನೂ ರಥದಿಂದಿಳಿದು ಕೃಷ್ಣನನ್ನು ಎದುರುಗೊಂಡು ಭಕ್ತಿಯಿಂದ ಅವನನ್ನು ಸ್ತುತಿಸಿದನು. ಭೀಷ್ಮನ ಭಕ್ತಿಯ ಮಹಿಮೆಯನ್ನು ಕಣ್ಣಾರೆ ಕಂಡ ಕೃಷ್ಣ ಅವನನ್ನು ಉಳಿಸಿದನು. (ಭಾರತ. ಭೀಷ್ಮ, ೫೯)

೫ **ತರಳ**= ಪ್ರಹ್ಲಾದ.
**ತೆತ್ತಿಗ**= ಆಪ್ತ = ಸಂಬಂಧಿಕ.

## ೧೦೬ನೆಯ ಹಾಡು

೧ **ಯುಕುತಿ ಕೈಕೊಳದು**= ವಿಚಾರವು ಬಗೆಹರಿಯಲೊಲ್ಲದು.

**ಗಯಾಗದಾಧರ**=ಗಯೆಯಲ್ಲಿರುವ ವಿಷ್ಣು (ಸಂ, ೧. ಪು. ೨೯೨)
**ಕಟ್ಟೆ + ಎರಡು**=ಎರಡುದಂಡೆ.
**ಕಟ್ಟೆಕಕ್ಕ**=ಮಹಾಪೂರಬರು.

೨ **ಬಳಿವಿಡಿದು**=ಅನುಸರಿಸಿ.
**ಸಂಭ್ರಮ**=ವೈಭವ.

೩ **ವತ್ಸ**=ಕರು.

## ೧೦೭ನೆಯ ಹಾಡು

೧ **ಸುರತರು**=ಕಲ್ಪತರು,
**ಸುರಧೇನು**=ಕಾಮಧೇನು.
**ಶರಧಿಕ್ಷೀರ**=ಕ್ಷೀರಸಾಗರ.

೨ **ಜ್ಞಾನಗಭೀರ**=ಆಳವಾದ ಜ್ಞಾನವುಳ್ಳವ.

೩ **ಒಂದರೊಳೊಂದೊಂದು.... ಸಲಿಸುವೆ**=ನಿನ್ನ ಒಂದೊಂದು ಅವಯವಗಳಲ್ಲಿ ನನ್ನ ಇಂದ್ರಿಯಗಳನ್ನು ಸಮರ್ಪಿಸುತ್ತೇನೆ.

## ೧೦೮ನೆಯ ಹಾಡು

ತಾವು ಒಬ್ಬರನ್ನೊಬ್ಬರು ಅಗಲಲಾಗದೆಂದು ಭಕ್ತನು, ಇಬ್ಬರಿಗೂ ಆಣೆಯನ್ನು ಇಕ್ಕುತ್ತಾನೆ, ಇವರಿಬ್ಬರನ್ನೂ ಅಗಲದಂತೆ ಮಾಡುವವರು ಸದ್ಭಕ್ತರು.

೩ **ಲೌಕಿಕ**=ಸಂಸಾರ ವ್ಯವಹಾರ.

## ೧೦೯ನೆಯ ಹಾಡು

ಇಲ್ಲಿ ದಾಸರು ಭಕ್ತಿಯ ಸ್ಥಾಯೀಭಾವವನ್ನು ಹಾಸ್ಯವಿನೋದಗಳ ಸಂಚಾರಿಯಿಂದ ಪರಿಪೋಷಿಸಿದ್ದಾರೆ.

೧ **ಕಣ್ಣಬಿಡು**=ಕಣ್ಣಮುಚ್ಚದಿರು (ಮತ್ಸ್ಯಾವತಾರ)
**ಹೊರು - ಕಲ್ಲ**=ಕೂರ್ಮಾವತಾರ.
**ಕಾಲನೂರಿ ಅಡಿಯಿಟ್ಟರೆ**=ವರಾಹಾವತಾರ

**ನರಸಿಂಗ**=ನರಸಿಂಹಾವತಾರ
**ಮೂಲ**=ಮೂಲಧನ; ಸಾಲಕೊಟ್ಟ ಹಣ
**ಕಿರುಕಹಾರುವ**=ವಾಮನಾವತಾರ

೨ **ಕೊರಳುಗೊಯ್ಕ**=ಪರಶುರಾಮಾವತಾರ
**ತಿರುಗುವುದುಚಿತವೆ ವನವನವ**=ರಾಮಾವತಾರ
**ಎರಡೇಳು**=೧೪ ವರುಷ (ರಾಮನ ವನವಾಸದ ಕಾಲ)
**ಒರಳಿಗೆ ಕಟ್ಟಿದ....ಕಳ್ಳ**=ಕೃಷ್ಣಾವತಾರ

೩ **ಬತ್ತಲೆನಿಂತರೂ**=ಬೌದ್ಧಾವತಾರ
**ಹತ್ತಿದ್ದ ಕುದಿರೆ**=ಕಲ್ಕ್ಯವತಾರ
**ಚಿತ್ತದಿ ಕಟ್ಟುವೆ**=ಹೃದಯದಲ್ಲಿ ಇಟ್ಟುಕೊಳ್ಳುತ್ತೇನೆ.

## ೧೧೦ನೆಯ ಹಾಡು

ಇದರಲ್ಲಿ ದಾಸರು ಇನ್ನೊಂದು ಬಗೆಯ ವಿನೋದವನ್ನು ರೂಪಕ ರೀತಿಯಲ್ಲಿ ಬಣ್ಣಿಸಿದ್ದಾರೆ. ದೇವರಿಗೆ ಭಕ್ತನು ಕೊಟ್ಟ ಸಾಲವನ್ನು ಮರಳಿ ಪಡೆಯುವ ಭಾವವು ಇದರಲ್ಲಡಗಿದೆ.

೧ **ಮೋಡಿ**=ಚಮತ್ಕಾರ
**ಮೊದಲು**=ಮುದ್ದಲು

೨ **ಎಂಟಕ್ಷರ**=ಅಷ್ಟಾಕ್ಷರ ಮಂತ್ರ (ಓಂ ನಮೋ ನಾರಾಯಣಾಯ ಇತ್ಯಾದಿ ಮಹಾಮಂತ್ರ)
**ದ್ವಯಸಾಕ್ಷಿಗಳಿವೆ**=ನಿನ್ನನ್ನ ತಪ್ಪದೆ ನೋಡುವ ಎರಡು ಕಣ್ಣುಗಳಿವೆ,
**ಗಂಟು**=ಮೂಲಧನ
**ಬಂಟರು**=ಭಕ್ತರು
**ಉಂಟುಂಟೆನಿಸುವೆ**=ಸತ್ಯದ ಬಗೆಗೆ ಸಾಕ್ಷಿ ಹೇಳಿಸುವೆ
**ತುಡುಗರ ಅರಸ**=ಗೊಲ್ಲರ ಹುಡುಗರ ಮುಂದಾಳಾಗಿ ಹೈನದ ಕಳವು ಮಾಡಿದವನು

೩ **ಒಪ್ಪವ**=ತೃಪ್ತಿಯನ್ನು. ಸಂತೋಷವನ್ನು

## ೧೧೧ನೆಯ ಹಾಡು

ಏಕೈಕಭಾವದಿಂದ ಪರಮಾತ್ಮನನ್ನು ನಂಬಿದ ಭಕ್ತ, ಪರಮಾತ್ಮನೆದುರು ಸಾಂಸಾರಿಕ ವಿಪತ್ತುಗಳನ್ನು ನಿವೇದಿಸುತ್ತಾನೆ.

೧ **ತುಂಬಿದ ನದಿ** = ಭವಸಾಗರ,
**ಹರಿಗೋಲು** = ಮಾನವ ದೇಹ.
**ಅಂಬಿಗ** = ದೇವರು; ತಾರಕಶಕ್ತಿ.

೨ **ಬಲು** = ಗಟ್ಟಿಯಾದ.
**ಕೈಹಿಡಿವರ** = ಆಶ್ರಯಕೊಡುವವರ.
ವಿ. ಸೂ.— ಭವಸಾಗರದಲ್ಲಿ ಮುಳುಗುತ್ತಿರುವಾಗ ಎಲ್ಲ ಆಧಾರಗಳು ತಪ್ಪಿದುವು.

೩ **ಹೆಬ್ಬಾವು** = ಪ್ರಾಚೀನ ಕರ್ಮ.
**ಹೆಬ್ಬುಲಿ**=ಪ್ರಾರಬ್ಧ ಕರ್ಮ.

೪ **ಮಡುವ ಪೊಕ್ಕೆ** = ಪೂರ್ಣ ಸಂಸಾರಾಸಕ್ತನಾದೆ.
**ನೆಗಳು** = ಅಜ್ಞಾನ.

೫ **ಅಸಮದ + ಆಕಾರ** = ಅಸದೃಶವಾದ ರೂಪವುಳ್ಳವ.

## ೧೧೨ನೆಯ ಹಾಡು

೧ ಅನನ್ಯಗತಿಕನಾದ ಭಕ್ತನಮೊರೆ.
**ಅರಸಿ** = ಹುಡುಕಿಕೊಂಡು,

೪ **ತುಂಟರೈವರ** = ಪಂಚೇಂದ್ರಿಯಂಗಳನು.
**ಕಂಟಕನೊಬ್ಬ** = ಮನಸ್ಸು.
**ಎಂಟುಮಂದಿ**=ಅಷ್ಟಮದ.

## ೧೧೩ನೆಯ ಹಾಡು

ಎಲ್ಲವನ್ನೂ ಅಂತರ್ಯಾಮಿಯಾದ ಪರಮಾತ್ಮನೆ ಸೂತ್ರಧಾರನಾಗಿ ನಡೆಯಿಸುವನೆಂಬ ಅರಿವು ಉಂಟಾದಾಗ ಭಕ್ತನಿಗೆ ತನ್ನ ನಿರಪರಾಧಿತ್ವದ ಕಲ್ಪನೆ ಮೂಡಿ ದೇವರಿಗೆ ಬಿನ್ನವಿಸುತ್ತಾನೆ.

೧ **ಕಪಟನಾಟಕ:—** ಭಕ್ತರು ಪರಮಾತ್ಮನ ವಿಶ್ವನಿರ್ಮಿತಿಯ ಕಾರ್ಯವನ್ನು

ಒಂದು ನಾಟಕಲೀಲೆಯೆಂದು ಭಾವಿಸುತ್ತಾರೆ. ಅಜ್ಞಾನಮೂಲಕ ಅವನ ತಂತ್ರ ದಿಂದಲೇ ಕುಣಿಯುವ ಜೀವಿಗಳು ತಾವೆ ಪಾತ್ರಗಳನ್ನು ನಿರ್ವಹಿಸುತ್ತೇವೆಂದು ಭಾವಿಸುತ್ತವೆ. ಅದಕ್ಕೆ ಇದು ಕಪಟನಾಟಕ.

**ಜಡವೊನಕೆ** = ನಿರ್ಜೀವವಾದ ಜಡವಸ್ತು

**ಅಭಿನಯ ಗೊಂಬೆ** = ಆಟದ ಗೊಂಬೆ

**ಕೃತಿ** = ಚಲನವಲನ; ವ್ಯವಹಾರ

**ಮಗ್ಗಿಸು** = ಕೆಳಗೆ ಚೆಲ್ಲು

೨ **ಒಂದೆಂಟು** = ಒಂಬತ್ತು

**ಇಪ್ಪತ್ತಾರು ಜನ ಮನೆಯಾಳ್ಗಳ್** = ಇಪ್ಪತ್ತಾರು ತತ್ತ್ವೇಶರು (ತತ್ತ್ವೇಶ್ವರು ೨೪ ಮತ್ತು ಶ್ರೀಹರಿ ಲಕ್ಷ್ಮಿ, ಇವರು ಸರ್ವನಿಯಾಮಕರಾಗಿರುವದ ರಿಂದ ತತ್ತ್ವೇಶರು ಇಪ್ಪತ್ತಾರು) (ಸಂ. ೧. ಪರಿ. ೪ ನೋಡಿರಿ)

**ಭವಭವದಿ** = ಜನ್ಮಜನ್ಮಗಳಲ್ಲಿ

೩ **ಯಂತ್ರವಾಹಕ** = ಸೂತ್ರಧಾರ

**ನೀನೆ ಒಳಗೆ ಇದ್ದು** = ಬಿಂಬಸ್ವರೂಪಿಯಾಗಿದ್ದು.

**ಎಂತಾಡಂತಹುದು** = ಹೇಗೆ ಆಗಬೇಕೆನ್ನುತ್ತಾನೆ ಹಾಗೆ ಆಗುತ್ತದೆ.

## ೧೧೪ನೆಯ ಹಾಡು

ಪರಮಾತ್ಮನ ಚರಿತ್ರಲೀಲೆಯನ್ನು ಬಂದ ವಿರೋಧಾಭಾಸ ಭಾಷೆಯಲ್ಲಿ ವರ್ಣಿಸಿ ದಾಸರು ಒಂದು ಬಗೆಯ ಹಾಸ್ಯವನ್ನು ಇಲ್ಲಿ ಸೃಷ್ಟಿಸಿದ್ದಾರೆ.

೧ **ಕೇಡುಬುದ್ಧಿ** = ಹೀನ ಬುದ್ಧಿ

**ಗುಣಹೀನರಲ್ಲದ ದೀನ ಜನರ** = ಸದ್ಗುಣಶಾಲಿಗಳಾದರೂ ದುಃಖ ದಿಂದ ಬಳಲಿದವರನ್ನು

**ನರ** = ಅರ್ಜುನ

**ಸುರನದೀಸುತ** = ಭೀಷ್ಮಾಚಾರ್ಯರು (ಹಾಡು ೧೦೫ ನೋಡಿರಿ)

**ಅಂಬರೀಷ** = (ಸಂ. ೧. ಪು. ೨೭೨) ದುರ್ವಾಸರ ಶಾಪದಿಂದ ವಿಷ್ಣು ಹತ್ತು ಅವತಾರ ತಾಳಬೇಕಾಯಿತು (ಭಾರತ ಶಾಂತಿಪರ್ವ ಅಧ್ಯಾಯ ೧೫೫ ಮತ್ತು ವಿಷ್ಣುಪುರಾಣ ೨ನೆಯ ಅಂಶವಲ್ಲಿ ೯ನೆಯ ಅಧ್ಯಾಯ)

**ಕೊಂಡೆಯ** = ಚಾಡಿ, ದೂರು

**ಪರಾಶರನಂತೆ ನದಿಯೊಳೆಂಬಿಗಹೆಣ್ಣ ಕೂಡಲಿಲ್ಲ:—** ವಸಿಷ್ಠನ ಮಗನಾದ ಶಕ್ತಿ ಮತ್ತು ಅವನ ಹೆಂಡತಿ ಅದೃಶ್ಯಂತಿ ಎಂಬವರ ಮಗ ಪರಾಶರ. ಇವನ ತಂದೆ ಶಕ್ತಿಮುನಿ, ರಾಕ್ಷಸನಿಂದ ಕೊಲೆಗೊಂಡನು. ಆಗ ಪರಾಶರನು ಇನ್ನೂ ಹುಟ್ಟಿರಲಿಲ್ಲ. ವಸಿಷ್ಠನು ಇವನು ಹುಟ್ಟಿದಂದಿನಿಂದ್ದ ಇವನ ಪಾಲನಪೋಷಣೆ ಮಾಡಿದನು. ತೀರ್ಥಯಾತ್ರೆಗೆ ಹೊರಟು ಯಮುನಾ ನದಿಗೆ ಬಂದಾಗ ಅಲ್ಲಿಯ ಅಂಬಿಗನ ಮಗಳಾದ ಮತ್ಸ್ಯಗಂಧಿ (ಇವಳೇ ಯೋಜನಗಂಧಿಯೆನಿಸಿಕೊಂಡವಳು. ಇವಳಿಗೆ ಸತ್ಯವತಿಯೆಂಬ ಹೆಸರಿದೆ, ಯನ್ನು ಮೋಹಿಸಿ ಒಡಗೂಡಿದನು; ಇವರ ಮಗನೆ ವೇದವ್ಯಾಸರು (ಭಾರತ, ಆದಿ ೬೩–೬೪).

೨ **ರುಕಮಾಂಗದ**=(ಸಂ. ೧. ಪು. ೨೬೧)

**ಮಾರುತನಂತೆ ...ಕೊಂಡೋಡಲಿಲ್ಲ**=(ಸಂ, ೧. ಪು. ೨೦೧)

**ವಿದುರ.**—(ಸಂ. ೧. ಪು ೨೭೩). ಶ್ರೀಕೃಷ್ಣನು ಸಂಧಾನಕ್ಕಾಗಿ ಹಸ್ತಿನಾವತಿಗೆ ಹೋದಾಗ ದುರ್ಯೋಧನು ಅವನ ಆತಿಥ್ಯಕ್ಕಾಗಿ ಅರಮನೆಯಲ್ಲಿ ಬೇಕಾದಷ್ಟು ರಾಜೋಚಿತವಾದ ಭಕ್ಷ್ಯಭೋಜ್ಯಗಳ ಏರ್ಪಾಡನ್ನು ಮಾಡಿದ್ದ, ಶ್ರೀಕೃಷ್ಣ ಅವನ್ನು ಬಿಟ್ಟು ವಿದುರನ ಮನೆಯ ಆತಿಥ್ಯವನ್ನು ಬಯಸಿ ಹೋದಾಗ ಆ ವಿಷ್ಣುಭಕ್ತ ಆನಂದದ ಉತ್ಕಟತೆಯ ಭರದಲ್ಲಿ ತನ್ನ ಮನೆಯನ್ನು ಕಿತ್ತು ಈಡಾಡಿದ.

(ಭಾರತ. ಉದ್ಯೋಗ. ೯೧)

೩ **ಸದರಮಾತು**=ಕೀಳುಮಾತು

**ಶಿಶುಪಾಲ**= (ಸಂ. ೧, ಪು ೨೭೯)

೪ **ಇನಸುತಕಪಿ**=ಸೂರ್ಯಪುತ್ರನಾದ ಸುಗ್ರೀವ. ಋಕ್ಷರಜಸ್ ಮತ್ತು ಸೂರ್ಯ ಇವರ ಮಗ. ವಾಲಿ ಮಾಯಾವಿ ಎಂಬ ರಾಕ್ಷಸನ ಗೂಡ ವಾಲಿ ಯುದ್ಧ ಮಾಡಿದ ಇದರ ತರುವಾಯ ಅಣ್ಣ ತಮ್ಮಂದಿರಲ್ಲಿ ವೈಮನಸ್ಸು ಹೆಚ್ಚಿತು. ಸುಗ್ರೀವ ತನ್ನ ಸ್ನೇಹಿತ ಕಪಿಗಳೊಂದಿಗೆ ಋಷ್ಯಮೂಕದ ಮೇಲೆ ವಾಸಿಸುತ್ತಿದ್ದ. ತಮ್ಮಮುಂದೆ ವನವಾಸಕಾಲದಲ್ಲಿ ಶ್ರೀರಾಮನು ಭೆಟ್ಟಿಯಾಗಲು ಆತನ ಸ್ನೇಹದ ಸಹಾಯದಿಂದ ಅಣ್ಣನಾದ ವಾಲಿಯನ್ನು ಕೊಲಿಸಿ ತಾನೇ ಕಿಷ್ಕಿಂಧೆಯ ಆಧಿಪತ್ಯವನ್ನು ವಹಿಸಿಕೊಂಡನು. (ರಾಮಾ. ಕಿಷ್ಕಿಂ. ೨/೧೨–೧೪)

**ಬಿನುಗು ಬೇಡತಿ**=ಶಬರಿ ಒಬ್ಬ ಬೇಡತಿ. ಮಾತಂಗ ಮತ್ತು ಅವನ ಶಿಷ್ಯರ ಪರಿಚಾರಿಕೆ, ಈ ಮುನಿ ಪಂಪಾ ಸರೋವರದ ಪಶ್ಚಿಮ ತೀರದಲ್ಲಿ ವಾಸವಾಗಿದ್ದನು. ವನವಾಸಕ್ಕಾಗಿ ಬಂದ ರಾಮ ಲಕ್ಷ್ಮಣರಿಗೆ ಉತ್ತಮ ಆತಿಥ್ಯ ನೀಡಿ ಅವನೆದುರಿನಲ್ಲಿಯೇ ಪ್ರವೇಶಮಾಡಿ ದೇಹಬಿಟ್ಟಳು, (ರಾಮಾ ಅರಣ್ಯ ೭೪)

೫ **ಶೌನಕ**=ಗೃತ್ಸಮದ ಋಷಿಯ ಮಗನಾದ ಶುನಕನ ಮಗ, ಭೃಗುವಂಶದವ. ನೈಮಿಷಾರಣ್ಯದಲ್ಲಿ ವಾಸವಾಗಿದ್ದ ಒಬ್ಬ ಕುಲಪತಿ. ಇವನೆ ಸೂತ ಪೌರಾಣಿಕನಿಂದ ಪುರಾಣಗಳನ್ನು ಕೇಳಿದ ಮಹರ್ಷಿಗಳಲ್ಲಿ ಮುಖ್ಯ. (ಭಾಗ ೧/೪)

**ತುಂಬುರ**=(ಸಂ. ೧. ಪು. ೨೬೨)

**ಉರಗಾಧಿಪತಿ**=ಶೇಷ (ಶೇಷಶಾಯಿ)

**ಕುಚೇಲ**=(ಸಂ. ೧. ಪು. ೨೬೮)

೬ **ಭೃಗುಮುನಿ**=(ಹಾಡು ೫ ಟಿಪ್ಪಣಿ ನೋಡಿರಿ ಪು. ೧೭೬)

**ಅಗಜೆಯ ಅರಸ**=ಶಿವ ಇವನು ಕೇವಲ ವಿಷ್ಣು ಭಕ್ತ. ಈ ವಿಚಾರವನ್ನು ದಾಸರು ಅನೇಕ ಕಡೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

೭ **ಅವಹಿಂತ**=ಯುದ್ಧಭೂಮಿ

**ವಿಭೀಷಣ**=(ಸಂ. ೧. ಪು, ೨೬೪)

**ದ್ರೌಪದಿಯಂತೆ ಪತ್ರಶಾಕವ ಉಣಬಡಿಸಲಿಲ್ಲ:—**

ಪಾಂಡವರು ವನವಾಸದಲ್ಲಿದ್ದಾಗ ದುರ್ಯೋಧನನು ಕಳುಹಿದ ದುರ್ವಾಸರು ತಮ್ಮ ೮೦ ಸಾವಿರ ಶಿಷ್ಯರನ್ನು ಕೂಡಿಕೊಂಡು ಧರ್ಮರಾಜನ ಕಡೆಗೆ ಬಂದು ಊಟವನ್ನಪೇಕ್ಷಿಸಿದರು ಆದರೆ ಆಗ ಅಕ್ಷಯ ಪಾತ್ರೆಯು ಅನ್ನವನ್ನು ಕೊಡುವ ವೇಳೆ ಮೀರಿ ಹೋದುದರಿಂದ ಧರ್ಮರಾಜನು ಚಿಂತೆಗೊಳಗಾಗದನು. ದ್ರೌಪದಿ ಶ್ರೀ ಕೃಷ್ಣನನ್ನು ಸ್ಮರಿಸಲು ಅವನು ತಾನೇ ಬಂದು ತನಗೆ ಉಣಬಡಿಸೆಂದು ದ್ರೌಪದಿಯನ್ನು ಕೇಳಿದನು. ಅಕ್ಷಯ ಪಾತ್ರೆಯಲ್ಲಿದ್ದ ಒಂದು ಪಲ್ಲೆಯ ಎಸಳನ್ನು ತಾನು ತಿಂದು ತೇಗಲು ಬಂದ ಋಷಿಗಳೆಲ್ಲರೂ ಉಂಡವರಂತೆ ತೃಪ್ತರಾದರು. (ಭಾರತ, ವನ, ೨೬೨-೨೬೩)

**ಪುಂಡರೀಕ**=(ಸಂ. ೧, ಪು, ೨೭೬)

## ೧೧೫ನೆಯ ಹಾಡು

ಇದು ನಿಂದಾಸ್ತುತಿ ಅಲಂಕಾರದ ಒಂದು ಸುಂದರವಾದ ಉದಾಹರಣೆ: ಇದರಲ್ಲಿ ದಾಸರು ಶ್ರೀಹರಿಯನ್ನು ನಿಂದೆಮಾಡಿದಂತೆ ಹೊರ ಹೊರಗೆ ಕಂಡರೂ ಇದು ಒಂದು ಸ್ತೋತ್ರರೂಪವಾಗಿದೆ.

೧ **ಹಿರಿಯಮಗ**=ಬ್ರಹ್ಮ.

**ತಲೆಗೊಯ್ಕ**=ಬ್ರಹ್ಮನ ಒಂದು ತಲೆಯನ್ನು ಶಿವನು ಕಡಿದನು. ಭೃಗುಋಷಿಯ ಶಾಪದಿಂದ ಕಲಿಯುಗದಲ್ಲಿ ಬ್ರಹ್ಮದೇವನಿಗೆ ಪೂಜೆ

ಸಲ್ಲದಂತಾಯಿತು (ಹಾಡು ೫, ಟಿಪ್ಪಣಿ ನೋಡಿರಿ. ಪು, ೧೭೬)

**ಕಿರಿಯಮಗ**=ಕಾಮ.

**ಭಂಡ**=ನೀತಿಗೇಡಿ.

**ಲಲನೆ**=ಲಕ್ಷ್ಮಿ.

**ಸೊಸೆ**=ಸರಸ್ವತಿ. ಎಲ್ಲರೂ ಸರಸ್ವತಿಯ ಭಕ್ತರೆ.

೨ **ಮಗಳ**=ಗಂಗಾನದಿಯ ಇವಳು ವಿಷ್ಣುವಿನ ಅಂಗುಷ್ಟದಿಂದ ಹುಟ್ಟಿದಳು.

**ಮೈದುನ**=ಚಂದ್ರ. ಹೆಂಡತಿಯಾದ ಲಕ್ಷ್ಮಿಯ ತಮ್ಮ.

**ಗುರುದ್ರೋಹಿ**=ಚಂದ್ರನು ಗುರುಪತ್ನಿಯಾದ ತಾರೆಯೊಂದಿಗೆ ಸಂಗ ಮಾಡಿ ಗುರುವಿನ ಶಾಪಕ್ಕೆ ಗುರಿಯಾದ.

**ಮಗನಮಗ**=ಬ್ರಹ್ಮನಮಗ, ನಾರದ

ಹಗರಣಕೆ ನೀಚರ ಹಣ್ಣು ಮೆದ್ದೆಂಜಲ=ಶಬರಿಕೊಟ್ಟ ಎಂಜಲ ಹಣ್ಣನ್ನು ರಾಮನು ತಿಂದನು. (ಹಾಡು ೧೧೪. ಬಿನುಗು ಬೇಡಿತಿ ಟಿಪ್ಪಣಿ ನೋಡಿರಿ.)

೩ **ಲಕ್ಷ್ಮೀಪತಿ—ಪೋದೆ**=ವಾಮನಾವತಾರ

**ಪಕ್ಷಿ**=ಗರುಡ

**ಕಳವೆ**=ಅಂಜಿ ಹೇಳುವ ಮಾತು

## ೧೧೭ನೆಯ ಹಾಡು

ಇದೊಂದು ನಿಂದಾಸ್ತುತಿಯ ಮಾದರಿ

೧ **ನರ್ಮ**=ಗುಟ್ಟು

**ಕರ್ಮ**=ಕಾರ್ಯ

**ಮತ್ಸ್ಯರೂಪನಾಗಿ—ಹೇಳಲಿ**=ಹರಿ ಮತ್ಸ್ಯರೂಪನಾಗಿ ಸತ್ಯವ್ರತ ಮುಂ. ಮಹಾಪ್ರಲಯದಿಂದ ರಕ್ಷಿಸಿದನು. (ಭಾಗ ೮/೨೨—೨೩)

**ಮನಸುಕಾಣಿಸಿಕೊಂಡು**=ಮಕ್ಕಳ ಮನಸ್ಸನ್ನು ಪರೀಕ್ಷಿಸಿ

೨ **ಕಡೆಗೋಲ ಮಂಡೆ—ಹೇಳಲಿ**=ಕೂರ್ಮಾವತಾರ

೩ **ಹುಚ್ಚು ಮನಸು ಮಾಡಿ**=ವಿಚಾರ ಬಿಟ್ಟುಕೊಟ್ಟು

